# ಕಲೆಯ ಮೂಲಕ ಕನಸು ಕಟ್ಟುವ ಸಾಧಕ ದೀಪಕ ಸುತಾರ







ದೀಪಕರವರ ಚಿತ್ರಗಳನ್ನು ಗ್ರಹಿಸಿದಾಕ್ಷಣ ನಮ್ಮೊಳಗೆ ಹೊಸ ಹೊಸ ಹೊಳಹುಗಳು ಝರಿಯಂತೆ ಹರಿಯುತ್ತವೆ. ಇವರ ಆಧುನಿಕ ಮತ್ತು ಅಮೂರ್ತ ಪರಿಕಲ್ಪನೆಯ ಸ್ಟ್ರೋಕ್ ಕಲಾಸಕ್ತರನ್ನು ತಕ್ಷಣ ಸೆಳೆದುಕೊಂಡು ಸೂಜಿಗಲ್ಲಿನಂತೆ ನಿಲ್ಲಿಸಿ ಚಿಂತನೆಗೆ ಹಚ್ಚುತ್ತದೆ, ಅರ್ಥಾತ್ ಒಡೆದ ಮನಸ್ಸುಗಳನ್ನು ಕಟ್ಟುತ್ತದೆ. ಇವರು ಬಳಸುವ ಬಣ್ಣಗಳು ಹದವಾಗಿ, ಮೆದುವಾಗಿ ಹುರಿಗೊಂಡಿವೆ, ದಣಿದ ಮನವ ತಣಿಸುವ ಚಿಕಿತ್ಸಕ ಗುಣಗಳನ್ನು ಹೊಂದಿವೆ.

ಪೇಂಟಿಂಗ್ಸ್‌ನಷ್ಟೇ ಇವರ ರೇಖಾಚಿತ್ರಗಳು ಸಹ ಪರಿಣಾಮಕಾರಿಯಾಗಿ ಜೀವತಳೆದಿವೆ. ಪ್ರತಿ ಗೆರೆಯಲ್ಲೂ ಕಾಣುವ ಕನಸು, ಪ್ರಗತಿ, ಉತ್ಸಾಹ, ರೋಚಕ ಗೆಲುವುಗಳು ನೋಡುಗರನ್ನು ಗಮ್ಯತೆಯತ್ತ ಕರೆದೊಯ್ಯುತ್ತವೆ. ಒಗ್ಗೂಡುವಿಕೆ, ಸ್ತ್ರೀ ಸಂವೇದನೆ, ಸಮಾನತೆ, ರಸಿಕತೆಯನ್ನೇ ಮುಖ್ಯವಾಗಿಟ್ಟುಕೊಂಡು ನಿತ್ಯ ನವನವೀನ ಚಿತ್ತಾರ ಬರೆಯಲು ಧ್ಯಾನಿಸುವ ದೀಪಕ ಸುತಾರ ಕಲಾಲೋಕದಲ್ಲಿ ಓರ್ವ ಅನನ್ಯ ಸಾಧಕರಾಗಲೆಂಬುದು ಕಲಾಸಕ್ತರ ಸದಾಶಯ.





ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲೂಕಿನ ಮಗನೂರು ಗ್ರಾಮದ ದೀಪಕ ಸುತಾರ ಚಿತ್ರಕಲೆಯಲ್ಲಿ ಪದವಿ ಪಡೆದುಕೊಂಡು ಪ್ರಸ್ತುತ ಬೆಂಗಳೂರಿನ ಜಾಹಿರಾತು ಕಂಪನಿಯೊಂದರಲ್ಲಿ ಉದ್ಯೋಗಿಯಾಗಿದ್ದಾರೆ. ಈಗಾಗಲೇ ಹಲವೆಡೆ ಚಿತ್ರಕಲಾ ಪ್ರದರ್ಶನ, ಚಿತ್ರಸಂತೆ ಹಾಗೂ ಚಿತ್ರಸ್ಪರ್ಧೆಗಳಲ್ಲಿ ಪಾಲ್ಗೊಂಡು ಹಲವು ಪ್ರಶಸ್ತಿ-ಪುರಸ್ಕಾರಗಳಿಗೆ ಭಾಜನರಾಗಿದ್ದಾರೆ.

✷ ಕೆ. ಬಿ. ವೀರಲಿಂಗನಗೌಡ್ರ,
ಎಸ್. ಆರ್. ಜಿ. ಹೆಚ್. ಎಂ. ಪ್ರೌಢಶಾಲೆ, ಸಿದ್ದಾಪುರ-581355.







# ಹೊಸತು




ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ವಿ. ಗೋಪಾಲ್, ಚಿತ್ರಾ, ಗೋಪಿ ಹಿರೇಬೆಟ್ಟು, ವಿ. ಆರ್. ಸಿ. ಶೇಖರ್

**ಮುಖಪುಟ :** ಪ್ರೊ॥ ಚಂದ್ರಶೇಖರ ಪಾಟೀಲರ ಭಾವಚಿತ್ರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಕರ್ನಾಟಕದಲ್ಲೀಗ ಚುನಾವಣೆ ಜ್ವರ ಹರಡಿಬಿಟ್ಟಿದೆ. ಮುಂದಿನ ವರ್ಷದ ಏಪ್ರಿಲ್–ಮೇ ತಿಂಗಳುಗಳಲ್ಲಿ ನಡೆಯಲಿರುವ ಚುನಾವಣೆಗಳಿಗೆ ಈಗಿನಿಂದಲೇ ರಾಜಕೀಯ ಪಕ್ಷಗಳು ಸಿದ್ಧತೆ ನಡೆಸುತ್ತಿವೆ. ಈಗಾಗಲೇ ಹಿಮಾಚಲ ಪ್ರದೇಶದಲ್ಲಿ ಚುನಾವಣೆ ನಡೆದುಹೋಗಿದೆ ಮತ್ತು ಡಿಸೆಂಬರ್‌ನಲ್ಲಿ ಗುಜರಾತಿನ ಸರದಿ. ಗುಜರಾತ್‌ಗಳಲ್ಲಿ ಚುನಾವಣೆ ನಡೆಯುತ್ತಿದೆ. ಭಾರತೀಯ ಜನತಾ ಪಕ್ಷ ಶತಾಯ–ಗತಾಯ ಈ ಚುನಾವಣೆಗಳಲ್ಲಿ ಜಯ ಗಳಿಸಲು ಹಾತೊರೆಯುತ್ತಿದೆ. ಕರ್ನಾಟಕವನ್ನು ಕಾಂಗ್ರೆಸ್ ಮುಕ್ತ ರಾಜ್ಯವಾಗಿಸುವುದು ಭಾಜಪದ ಗುರಿ. ಕೋಟಿಗಟ್ಟಲೆ ಹಣ ಸುರಿದು ಈ ಪಕ್ಷ ಚುನಾವಣಾ ಪ್ರಚಾರಕ್ಕಾಗಿ ಸುಸಜ್ಜಿತ ವಾಹನ ಒಂದನ್ನು ಸಿದ್ಧಗೊಳಿಸಿದೆ. ಭಾಜಪ ರಾಷ್ಟ್ರೀಯ ಅಧ್ಯಕ್ಷ ಅಮಿತ್ ಷಾ ಈಗಾಗಲೇ ಎರಡು ಬಾರಿ ಬಂದು ಹೋಗಿದ್ದಾರೆ. ಚುನಾವಣೆಯ ಹೊತ್ತಿಗೆ ಅವರು ಇಲ್ಲೇ ಮುಕ್ಕಾಂ ಹೂಡುವ ಸಂಭವವೂ ಇದೆ.

ಈಚೆಗೆ ಮೋದಿ ಕೂಡ ರಾಜ್ಯಕ್ಕೆ ಭೇಟಿ ನೀಡಿದ್ದರು. ಅದು ಸ್ವಾಮಿ ಕಾರ್ಯ, ಸ್ವ ಕಾರ್ಯ ಎರಡೂ ಆಗಿತ್ತು. ಬಹು ನಿರೀಕ್ಷಿತ ಗುಲ್ಬರ್ಗ–ಬೀದರ್ ರೈಲು ಮಾರ್ಗದ ಲೋಕಾರ್ಪಣೆ ಒಂದು ಅಧಿಕೃತ ಕಾರ್ಯಕ್ರಮ. ಇದರಲ್ಲೂ ಕೂಡ ರಾಜಕೀಯ ವಾಸನೆ ಹರಡಿದ್ದಲ್ಲದೆ, ಚುನಾವಣೆಯ ತಂತ್ರವೂ ಸೇರಿತ್ತು. ಉಳಿದೆರಡು ಸಮಾರಂಭಗಳೂ ದೇವತಾ ಕಾರ್ಯಕ್ರಮ ಎಂದು ಹೇಳಬಹುದು. ಮೋದಿ ಎಂದಿನಂತೆ ಜಮಾಯಿಸಿದ್ದ ಜನಸಂದಣಿಗೆ ಮೋಡಿ ಮಾಡಿದರು ತಮ್ಮ ಅಟಾಟೋಪದಿಂದ. ಮಂಗಳೂರು ಭಾಜಪದ ಪ್ರಬಲ ಕೇಂದ್ರವೂ ಹೌದು ಹಾಗೂ ಕರ್ನಾಟಕದಲ್ಲಿ ಸಂಘ ಪರಿವಾರದ ಪ್ರಯೋಗಾಲಯವೂ ಹೌದು. ಕಳೆದ ಕೆಲವು ವರ್ಷಗಳಿಂದ ಅಲ್ಲಿ ಸಂಭವಿಸುತ್ತಿರುವ ಘಟನೆಗಳೇ ಅದಕ್ಕೆ ಸಾಕ್ಷಿ. ಧರ್ಮಸ್ಥಳದ ಮಂಜುನಾಥನ ದರ್ಶನ ಪೂಜೆ ಪುನಸ್ಕಾರಗಳ ನಂತರ ಉಜಿರೆ ಕ್ರೀಡಾಂಗಣದಲ್ಲಿ ಜರುಗಿದ ಸಮಾರಂಭ ಪರಸ್ಪರ ಬೆನ್ನು ತಟ್ಟಿಕೊಳ್ಳುವ ಕಾರ್ಯಕ್ರಮವಾಗಿತ್ತು. ಧರ್ಮಸ್ಥಳದ ಧರ್ಮದರ್ಶಿ ಹೆಗ್ಗಡೆ ಮತ್ತು ಪ್ರಧಾನಿ ಮೋದಿ ಜನಸಮೂಹವನ್ನು ರಂಜಿಸಿದರು. ಅನಂತರ ಬೆಂಗಳೂರಿಗೆ ಬಂದ ಮೋದಿ ಅರಮನೆ ಮೈದಾನದಲ್ಲಿ ಏರ್ಪಡಿಸಲಾಗಿದ್ದ 'ಸೌಂದರ್ಯ ಲಹರಿ' ಪಠಣ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಇದಕ್ಕೆ ಮುನ್ನ ವಿಮಾನ ನಿಲ್ದಾಣದಲ್ಲಿ ಭಾಜಪ ಕಾರ್ಯಕರ್ತರಿಗೆ ಚುನಾವಣೆ ತಂತ್ರ ಬೋಧಿಸಿದರು. 'ಸೌಂದರ್ಯ ಲಹರಿ' ಪುಸ್ತಕ ಕೈಯಲ್ಲಿ ಹಿಡಿದು, ಅದರ ಪಠಣದಲ್ಲಿ ಭಾಗವಹಿಸಿ ತಮ್ಮ ಪಾಂಡಿತ್ಯ ಮೆರೆದರು ಮೋದಿ. ಭಾರತೀಯ ಸಂಸ್ಕೃತಿ ಪರಂಪರೆ ಕುರಿತು ಭಾಷಣ ಬಿಗಿದರು.

ಒಂದು ದಿನದ ಮೋದಿ ಭೇಟಿಗೆ ಆದ ಖರ್ಚೆಷ್ಟು? ಇದನ್ನು ಊಹಿಸಿ ಕೊಳ್ಳಬಹುದು ಅಷ್ಟೆ. ಹತ್ತಾರು ಸಾವಿರ ಪೊಲೀಸು ಪಡೆಯನ್ನು ಮೂರೂ ಕಡೆ ಪಹರೆಯಿರಿಸಲಾಗಿತ್ತು. ದೆಹಲಿಯಿಂದ ವಿಮಾನದಲ್ಲಿ ಬಂದಿಳಿದ ಪ್ರಧಾನಿಗೆ ಸಿದ್ಧವಾಗಿತ್ತು ನಿಗದಿಯಾದ ಸ್ಥಳಕ್ಕೆ ಒಯ್ಯಲು ಹೆಲಿಕಾಪ್ಟರುಗಳು. ಎಲ್ಲೆಲ್ಲೂ ಸಾಗಿತ್ತು 'ಬುಲೆಟ್ ಪ್ರೂಫ್ ಕಾರು.'

ಮುಂಬರುವ ಚುನಾವಣೆಗಳನ್ನು ದೃಷ್ಟಿಯಲ್ಲಿರಿಸಿಕೊಂಡೇ ಮೋದಿಯವರ ಎಲ್ಲ ಕಾರ್ಯಕ್ರಮಗಳನ್ನು ರೂಪಿಸಲಾಗಿತ್ತು. ಭಾಜಪ ಮುಖ್ಯಮಂತ್ರಿ ಅಭ್ಯರ್ಥಿ ಯಡಿಯೂರಪ್ಪ ಕಂಪೆನಿಯವರದ್ದೇ ಪಾರುಪತ್ಯ ಮೋದಿಯವರ ಹಿಂದೆ. ಪರಸ್ಪರ ಆರೋಪ ಪ್ರತ್ಯಾರೋಪಗಳಿಗೆ ಲೆಕ್ಕವೇ ಇಲ್ಲ. ಇದರಲ್ಲಿ ಜೊಳ್ಳೆಷ್ಟೋ ಕಾಳೆಷ್ಟೋ ಅಂದಾಜು ಮಾಡಲೂ ಆಗದು. ಈ ಮಧ್ಯೆ ಎರಡು ಹೊಸ ರಾಜಕೀಯ ಪಕ್ಷಗಳು ತಲೆ ಎತ್ತಿವೆ ರಾಜ್ಯದಲ್ಲಿ. ಒಂದು ನಿರೀಕ್ಷಿಸಿದ್ದಂತೆ ಅಬ್ಬರದ ನಟ ಉಪೇಂದ್ರ ರಾಜಕೀಯ ಪಕ್ಷವೊಂದನ್ನು ಸ್ಥಾಪನೆ ಮಾಡಿದ್ದು, 'ಕರ್ನಾಟಕ ಪ್ರಜ್ಞಾವಂತ ಜನತಾ ಪಕ್ಷ' ಅದರ ಹೆಸರು. ಎಲ್ಲ ಕ್ಷೇತ್ರಗಳಲ್ಲೂ ಅಭ್ಯರ್ಥಿಗಳನ್ನು ನಿಲ್ಲಿಸುವ ಪ್ರಯತ್ನದಲ್ಲಿ ತೊಡಗಿಕೊಂಡಿದ್ದಾರೆ ಉಪೇಂದ್ರ. ಇವರ ಹಿಂದೆಯೇ ಮಾಜಿ ಪೊಲೀಸ್ ಅಧಿಕಾರಿ ಬಳ್ಳಾರಿಯಿಂದ 'ಭಾರತೀಯ ಜನಶಕ್ತಿ ಕಾಂಗ್ರೆಸ್'

*(೭ನೇ ಪುಟಕ್ಕೆ)*



# ಸಂಪಾದಕೀಯ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೯ ಸಂಚಿಕೆ-೫ ಡಿಸೆಂಬರ್ ೨೦೧೭

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೫೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೧೬೯೧೧, ೨೨೧೬೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


## ಕನ್ನಡದ ಜಾತ್ರೆ ಕೇವಲ ಯಾತ್ರೆ ಆಗದಿರಲಿ

'ಕನ್ನಡ ಸಾಹಿತ್ಯ ಸಮ್ಮೇಳನ ಒಂದು ಜಾತ್ರೆ, ಸಮ್ಮೇಳನದ ಅಧ್ಯಕ್ಷ ಒಬ್ಬ ಉತ್ಸವ ಮೂರ್ತಿ' ಎಂಬ ಟೀಕೆಗಳು ಒಂದು ಕಾಲದಲ್ಲಿ ಕೇಳಿ ಬರುತ್ತಿದ್ದವು. ಆರಂಭಿಕ ಸಮ್ಮೇಳನಗಳಲ್ಲಿ ಕನ್ನಡ ಭಾಷೆ, ಸಾಹಿತ್ಯ ಮತ್ತು ಕರ್ನಾಟಕ ಏಕೀಕರಣಕ್ಕಾಗಿ ಗಂಭೀರವಾದ ಚರ್ಚೆಗಳೂ, ತೀರ್ಮಾನಗಳೂ ಆಗಿದ್ದು ನಿಜ. ಆದರೆ ಬರಬರುತ್ತ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಅದು ನಡೆಸುವ ಸಮ್ಮೇಳನಗಳು ಹಿತಾಸಕ್ತ ಗುಂಪುಗಳಾಗಿ, ಸರಕಾರವನ್ನು, ಮಂತ್ರಿಮಹೋದಯರನ್ನು ಓಲೈಸುವ ಗುಂಪುಗಳಾಗಿ ಪರಿವರ್ತನೆಯಾಗಿದ್ದೂ ಅಷ್ಟೇ ಸತ್ಯ. ಬೆಳಗಾವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷರಾಗಿದ್ದ ಬಸವರಾಜ ಕಟ್ಟೀಮನಿಯವರು ಸಮ್ಮೇಳನ ಅಧ್ಯಕ್ಷರಿಗಿಂತಲೂ ಅಂದಿನ ಮುಖ್ಯಮಂತ್ರಿಗಳಿಗೇ ಹೆಚ್ಚಿನ ಮಹತ್ವ, ಗೌರವ ಸಿಗುತ್ತಿದೆ ಎಂಬ ಅಸಮಾಧಾನವನ್ನು ಸಮ್ಮೇಳನದ ವೇದಿಕೆಯಿಂದಲೇ ಹೊರಹಾಕಿದ್ದರು. ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರ ಒಂದು ಪ್ರಾತಿನಿಧಿಕ ಸಂಸ್ಥೆ. ಅದರ ಸಮ್ಮೇಳನಗಳಿಗೆ ಅನುದಾನ ಒದಗಿಸುವುದು ಸರಕಾರದ ಕರ್ತವ್ಯ. ಹಾಗಂತ ಸರಕಾರದ ಆಳುವ ಪಕ್ಷ ಪರಿಷತ್ತನ್ನೂ, ಸಮ್ಮೇಳನಗಳನ್ನೂ ತನ್ನ ರಾಜಕೀಯ ಹಿತಾಸಕ್ತಿಗಾಗಿ ಬಳಸಿಕೊಳ್ಳುವುದು ಪ್ರಜಾಸತ್ತಾತ್ಮಕ ಲಕ್ಷಣವಲ್ಲ. ಶಿವಮೊಗ್ಗಾದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಗೋಷ್ಠಿಗಳಲ್ಲಿ ಇಂಥವರು ಇರಬೇಕು, ಇಂಥವರು ಇರಬಾರದು ಎಂದು ಅಂದಿನ ಆಡಳಿತ ಪಕ್ಷದ ಕಾರ್ಯಕರ್ತರು ಕ್ಯಾತೆ ತೆಗೆದಾಗ ಇಂದು ಮೈಸೂರು ಸಮ್ಮೇಳನದ ಸರ್ವಾಧ್ಯಕ್ಷರಾದ ಚಂದ್ರಶೇಖರ್ ಪಾಟೀಲರೇ ಹಿಂದಿನ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಕೋಮುವಾದಿ ರಾಜಕಾರಣದ ಪ್ರಾಬಲ್ಯ ಹೊಂದಿದ ಶಿವಮೊಗ್ಗಾದಲ್ಲಿ ಸಾಹಿತ್ಯ ಸಮ್ಮೇಳನದ ವಿಷಯದಲ್ಲಿ ಮೂಗು ತೂರಿಸಿದ ರಾಜಕಾರಣಿಗಳಿಗೆ ದಿಟ್ಟವಾಗಿ ಉತ್ತರಿಸಿದ್ದರು. ಸಾಹಿತ್ಯ ಸಮ್ಮೇಳನದ ಆಂತರಿಕ ವಿದ್ಯಮಾನಗಳನ್ನು ಸಾಹಿತ್ಯ ಪರಿಷತ್ತು ನಿಭಾಯಿಸಬೇಕೇ ಹೊರತು, ಅನುಧಾನ ನೀಡಿದ ಕಾರಣಕ್ಕೆ ಆಡಳಿತ ಪಕ್ಷದ ರಾಜಕಾರಣಿಗಳು ಮೂಗು ತೂರಿಸುವಂತಿಲ್ಲ ಎಂದು ಹೇಳಿದರು. ರಾಜ್ಯದ ಮುಖ್ಯಮಂತ್ರಿ ಹಾಗೂ ಮಂತ್ರಿಗಳಂತೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಸಹ ಪ್ರಜಾತಾಂತ್ರಿಕವಾಗಿ ಚುನಾವಣೆಯಲ್ಲಿ ಆಯ್ಕೆಯಾಗಿರುತ್ತಾರೆ. ಅವರು ಆಳುವ ಪಕ್ಷದಿಂದ ನೇಮಕಗೊಂಡವರಲ್ಲ. ಕನ್ನಡ ಸಾಹಿತ್ಯ ಪರಿಷತ್ತು ಒಂದು ಸ್ವಾಯತ್ತ ಸಂಸ್ಥೆ, ಪರಿಷತ್ತಿನ ರಾಜ್ಯ ಜಿಲ್ಲಾ ಅಧ್ಯಕ್ಷರ ಆಯ್ಕೆಗೆ ಚುನಾವಣೆಗಳು ನಡೆಯುತ್ತವೆ. ಕಸಾಪ ಸದಸ್ಯರು ಮತದಾನ ಮಾಡಿ ಆಯ್ಕೆ ಮಾಡುತ್ತಾರೆ. ಈ ಅರಿವು ಪರಿಷತ್ತಿನ ವಿವಿಧ ಹಂತಗಳಲ್ಲಿ ಆಯ್ಕೆಯಾದ ಅಧ್ಯಕ್ಷರುಗಳಿಗಿದ್ದರೆ ಅವರು ಸಾಹಿತ್ಯ ಪರಿಷತ್ತಿನಿಂದ ರಾಜಕೀಯ ಹಿತಾಸಕ್ತ ಗುಂಪುಗಳನ್ನು ಹೊರಗಿಡುವ ನೈತಿಕತೆ, ಧೈರ್ಯ ಹೊಂದಿರುತ್ತಾರೆ. ಅನುದಾನ ನೀಡಿದ ಕಾರಣಕ್ಕೆ ಆಳುವ ಪಕ್ಷಕ್ಕೆ, ಅದರ ಹಿಂಬಾಲಕರಿಗೆ ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿಗೂ, ಅದು ನಡೆಸುವ ಸಮ್ಮೇಳನಗಳಿಗೂ ಮಾಲಿಕತ್ವ ವಹಿಸುವ, ಕಿತಾಪತಿ ಮಾಡುವ ಅಧಿಕಾರವಿಲ್ಲ. ಕನ್ನಡ ಸಾಹಿತ್ಯ ಸಮ್ಮೇಳನ ಹೇಗೆ ನಡೆಯಬೇಕು, ಅಲ್ಲಿ ಯಾವ ವಿಷಯಗಳು ಚರ್ಚೆಯಾಗಬೇಕು, ಯಾರು ಮಾತನಾಡಬೇಕು ಎಂದು ತೀರ್ಮಾನಿಸುವ ಸಂಪೂರ್ಣ ಸ್ವಾತಂತ್ರ್ಯ ಪರಿಷತ್ತಿನದ್ದು. ಪರಿಷತ್ತು ನಡೆಸುವ ಸಮ್ಮೇಳನಗಳಿಗೆ ಅನುದಾನ ಮತ್ತು ಸಹಕಾರ ಕೊಡಬೇಕಾದದ್ದು ಸರಕಾರದ ಕರ್ತವ್ಯ.

ಕನ್ನಡ ಸಾಹಿತ್ಯ ಪರಿಷತ್ತು ಇತ್ತೀಚಿನ ವರ್ಷಗಳಲ್ಲಿ ತನ್ನ ಸ್ವಾಯತ್ತತೆಯನ್ನು ಅರ್ಥಮಾಡಿಕೊಂಡಿದೆ. ಅದರ ಪರಿಣಾಮವಾಗಿ ಸಾಹಿತ್ಯ ಸಮ್ಮೇಳನಗಳೂ ಸಹ ಹಿತಾಸಕ್ತ ಗುಂಪುಗಳ ವೇದಿಕೆಗಳಾಗದೇ ಸಮಾಜಮುಖಿಯಾಗಿ ನಡೆಯುತ್ತಿವೆ. ೧೯೭೯ರಲ್ಲಿ ಧರ್ಮಸ್ಥಳ ಸಮ್ಮೇಳನದಲ್ಲಿ ದಲಿತ ಸಾಹಿತ್ಯ ಹಾಗೂ ಸಾಮಾಜಿಕ ನ್ಯಾಯದ ವಿಷಯಗಳು ಸಮ್ಮೇಳನದ ವಿಷಯಗಳಾಗಬೇಕು ಎಂಬ ಬೇಡಿಕೆ ಬಂದಾಗ ಅಂದಿನ ಕಸಾಪ ಅಧ್ಯಕ್ಷರಾಗಿದ್ದ ಹಂ. ಪ. ನಾಗರಾಜಯ್ಯ ಅವರು ಆ ಬೇಡಿಕೆಯನ್ನು ತಿರಸ್ಕರಿಸುವುದು ಮಾತ್ರವಲ್ಲ ಅಪಹಾಸ್ಯ ಮಾಡಿದ್ದರು. ಅದರ ಪರಿಣಾಮವಾಗಿ ಪರಿಷತ್ತು ನಡೆಸುವ ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನಕ್ಕೆ ಪರ್ಯಾಯವಾಗಿ ಬಂಡಾಯ ಸಾಹಿತ್ಯ ಸಂಘಟನೆ ಹುಟ್ಟಿಕೊಂಡು ಪರ್ಯಾಯ ಸಮ್ಮೇಳನವನ್ನೇ ನಡೆಸಿತು. ಆಗ ಕನ್ನಡ ಸಾಹಿತ್ಯ ಪರಿಷತ್ತು ಸಂಪ್ರದಾಯವಾದಿಗಳ, ಪ್ರಭುತ್ವವನ್ನು ಓಲೈಸುವ ಒಂದು ಹಿತಾಸಕ್ತ ಗುಂಪಾಯಿತು. ಕನ್ನಡ ನಾಡಿನ ಪ್ರಾತಿನಿಧಿಕ ಸಂಸ್ಥೆ ಎಂಬ ಮಹತ್ವವನ್ನು ಕಳೆದುಕೊಂಡಿತು. ಕನ್ನಡ ಜನತೆಯ ಪ್ರತಿಭಟನೆ, ವ್ಯವಸ್ಥೆ ವಿರೋಧಿ ಧ್ವನಿಯಾಗಿ ಬಂಡಾಯ ಸಾಹಿತ್ಯ ಸಂಘಟನೆ, ಚಳುವಳಿ ಬೆಳೆಯಿತು. ಕನ್ನಡ ನೆಲದ ಜನಪರ ಧ್ವನಿ ಸಾಹಿತ್ಯವಾಗಿ ಮುಖ್ಯವಾಹಿನಿಗೆ ಬಂದಿತು. ಪರಿಷತ್ತು ಅಂದು ಮಾಡಿದ ತಪ್ಪನ್ನು ತಿದ್ದಿಕೊಳ್ಳಲು ಒಂದು ದಶಕವೇ ಬೇಕಾಯಿತು. ಮುಂದೆ ಸಾಹಿತ್ಯ ಪರಿಷತ್ತು ಬಂಡಾಯ ಸಾಹಿತ್ಯದ ದಶಮಾನೋತ್ಸವವನ್ನು ಆಚರಿಸುವ ಮೂಲಕ ತನ್ನ ತಪ್ಪನ್ನು ತಿದ್ದಿಕೊಂಡಿತು. ಇದರ

ಪರಿಣಾಮವಾಗಿ ಇಂದು ಸಾಹಿತ್ಯ ಪರಿಷತ್ತು ನಡೆಸುವ ಸಮ್ಮೇಳನಗಳಲ್ಲಿ ಕೇವಲ ಸಾಹಿತ್ಯ ಕುರಿತ ಗೋಷ್ಠಿಗಳಲ್ಲದೇ ನಾಡು–ನುಡಿಯ ಜೊತೆಗೆ ಸಾಮಾಜಿಕ ನ್ಯಾಯ, ದಲಿತ, ಹಿಂದುಳಿದ, ಅಲ್ಪಸಂಖ್ಯಾತ ಕುರಿತ ತಾತ್ವಿಕ ಚಿಂತನೆ, ನಾಡಿದ ಪ್ರಾದೇಶಿಕ ಸಮಸ್ಯೆಗಳು, ಲಿಂಗಸಮಾನತೆ ವಿಷಯಗಳು, ಕೃಷಿಕರ, ಶ್ರಮಿಕರ ಸಮಸ್ಯೆಗಳು ಆದ್ಯತೆ ಪಡೆದಿವೆ. ಬಂಡಾಯ ಚಳುವಳಿಯನ್ನು ಕಟ್ಟಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಪರ್ಯಾಯ ರೂಪಿಸಿದ ಬರಗೂರು ರಾಮಚಂದ್ರಪ್ಪ, ಸಿದ್ಧಲಿಂಗಯ್ಯ, ಚಂದ್ರಶೇಖರ ಪಾಟೀಲರಂಥವರು ಸಮ್ಮೇಳನದ ಸರ್ವಾಧ್ಯಕ್ಷರಾಗುತ್ತಿರುವುದು ಪರಿಷತ್ತು ರೂಢಿಸಿಕೊಂಡಿರುವ ಪ್ರಜಾಸತ್ತಾತ್ಮಕ ನಡೆಗೆ ಸಾಕ್ಷಿ. ಇದಕ್ಕೆ ಕಾಲದ, ಸಂದರ್ಭದ ಒತ್ತಡಗಳಿದ್ದರೂ ಹಿಂದಿನ ಜನಪರ ಮನೋಭಾವದ ಪರಿಷತ್ತಿನ ಕೆಲವು ಅಧ್ಯಕ್ಷರುಗಳೂ ಹಾಗೂ ಇಂದಿನ ಅಧ್ಯಕ್ಷರಾದ ಮನು ಬಳಿಗಾರ ಅವರಂಥವರು ಒಳಗೊಳ್ಳುವ ಮನೋಭಾವ ಕಾರಣವಾಗುತ್ತದೆ.

ಕನ್ನಡ ಸಾಹಿತ್ಯ ಸಮ್ಮೇಳನ ಒಂದು ಜಾತ್ರೆ ಎನ್ನುವುದು ಟೀಕೆಯಾದರೂ ಅದನ್ನು ಗುಣಾತ್ಮಕವಾಗಿಯೇ ನೋಡಬೇಕು. ಜಾತ್ರೆಯೆನ್ನುವುದು ಕೇವಲ ಜನಜಂಗುಳಿ ಮತ್ತು ಮೌಢ್ಯತೆಯ ಪ್ರತೀಕವಲ್ಲ. ಅದು ಜನತೆಯ ಸಂಸ್ಕೃತಿಯ ಭಾಗ. ಯಾವುದೇ ಜಾತ್ರೆಯಲ್ಲಿ ಸೇರಿದ ಜನಸಮೂಹ ತಾವು ನಂಬಿದ ದೈವವನ್ನು ಒಂದೆರಡು ನಿಮಿಷಗಳಲ್ಲಿ ಸರತಿಸಾಲಿನಲ್ಲಿ ನಿಂತು ನೋಡಿ ಹಣ್ಣು, ಕಾಯಿ, ಕರ್ಪೂರ ಅರ್ಪಿಸಿದರೆ ಮುಗಿಯಿತು. ಉಳಿದದ್ದೆಲ್ಲ ಸಾಂಸ್ಕೃತಿಕ ಚಟುವಟಿಕೆಯೇ. ವ್ಯಕ್ತಿ ಮತ್ತು ಸಮೂಹದ ಈ ಚಟುವಟಿಕೆಯನ್ನು ಹಬ್ಬದ ರೂಪದಲ್ಲಿ ನಡೆಸುವುದನ್ನು, ಅದರಿಂದ ಅವರು ಪಡೆದ ನೆಮ್ಮದಿಯನ್ನು ನಕಾರಾತ್ಮಕವಾಗಿ ನೋಡುವುದು ಸರಿಯಲ್ಲ. ಅದೇ ರೀತಿ ಇಂದು ನಡೆಯುತ್ತಿರುವ ಸಾಹಿತ್ಯ ಸಮ್ಮೇಳನಗಳಲ್ಲಿ ಕೇವಲ ಸಾಹಿತಿಗಳು ಮತ್ತು ಸಾಹಿತ್ಯಾಸಕ್ತರು ಮಾತ್ರ ಭಾಗವಹಿಸುತ್ತಿಲ್ಲ ಲಕ್ಷಾಂತರ ಜನಸಾಮಾನ್ಯರು ಭಾಗವಹಿಸುತ್ತಿದ್ದಾರೆ. ಜಾತ್ರೆಯ ರೀತಿಯಲ್ಲಿ, ಹಬ್ಬದ ರೀತಿಯಲ್ಲಿ ಭಾಗವಹಿಸುವ ಜನತೆಯ ಉತ್ಸಾಹವನ್ನು ಸಾಹಿತ್ಯ ಪರಿಷತ್ತು ಮತ್ತು ಸಮ್ಮೇಳನಗಳ ಸರ್ವಾಧ್ಯಕ್ಷರು, ಸಾಹಿತಿಗಳು, ಚಿಂತಕರು ಗಂಭೀರವಾಗಿ ಪರಿಗಣಿಸಬೇಕಿದೆ. ಸರ್ವಾಧ್ಯಕ್ಷರು 'ಉತ್ಸವ ಮೂರ್ತಿ'ಗಳು ಎಂಬ ಕಳಂಕವನ್ನು ನಿವಾರಿಸಬೇಕಿದೆ. ಸರ್ವಾಧ್ಯಕ್ಷರ ಭಾಷಣಗಳು ಕರ್ನಾಟಕದ ಸರ್ವಜನತೆಯನ್ನು ಪ್ರತಿನಿಧಿಸುವ ಆಶಯಗಳನ್ನು ಹೊಂದಿರಬೇಕು. ಈ ಹಿಂದೆ ಹಲವಾರು ಸರ್ವಾಧ್ಯಕ್ಷರ ಭಾಷಣಗಳು ಅಂಥ ಮಹತ್ವದ ಭಾಷಣಗಳಾಗಿವೆ. ಆದರೆ ಆ ಭಾಷಣಗಳು, ಸಮ್ಮೇಳನದ ನಿರ್ಣಯಗಳು ಪುಸ್ತಿಕೆಗಳಾಗಿ, ಪತ್ರಿಕೆಗಳ ಮುಖಪುಟದ ವರದಿಗಳಾಗಿ ಇತಿಹಾಸ ಸೇರಿವೆ. ಭಾಷೆ, ನಾಡು–ನುಡಿ, ಸಾಹಿತ್ಯ, ನಾಡಿನ ಜ್ವಲಂತ ಸಮಸ್ಯೆಗಳ ಕುರಿತು ಗಂಭೀರವಾದ ಭಾಷಣ, ಚರ್ಚೆ, ನಿರ್ಣಯಗಳಾಗಿವೆ ನಿಜ. ಆದರೆ ಆ ನಿರ್ಣಯಗಳನ್ನು ಸಂಬಂಧಿಸಿದವರಿಗೆ ರವಾನಿಸಿ ಪರಿಷತ್ತು ಕೈ ತೊಳೆದುಕೊಂಡಿದೆ. ಇನ್ನು ಮುಂದಾದರೂ ಹಿಂದಿನ ಸಮ್ಮೇಳನದ ಅಧ್ಯಕ್ಷರ ಭಾಷಣದ ಆಶಯಗಳು, ಗೋಷ್ಠಿಗಳಲ್ಲಿ ನಡೆದ ಚಿಂತನೆಗಳು, ಸಮ್ಮೇಳನ ಲಕ್ಷಾಂತರ ಜನರೆದುರಿಗೆ ತೆಗೆದುಕೊಂಡ ನಿರ್ಣಯಗಳು ಜಾರಿಯಾಗಿವೆಯೇ ? ಅವುಗಳ ಸ್ಥಿತಿಗತಿ ಏನು ? ಎಂಬ ಕುರಿತು ಒಂದು ಗೋಷ್ಠಿಯನ್ನೇ ಮುಂದಿನ ಸಮ್ಮೇಳನದಲ್ಲಿ ಇಟ್ಟು ಚಿಂತನಮಂಥನ ನಡೆಸಬೇಕು. ತೆಗೆದುಕೊಂಡ ನಿರ್ಣಯಗಳ ಜಾರಿಗೆ ಪರಿಷತ್ತು ಮತ್ತು ಸರ್ವಾಧ್ಯಕ್ಷರು ತಮ್ಮ ಮಿತಿಯಲ್ಲಿಯೇ ಯಾವ ವಿಧದಿಂದಾದರೂ ಸರಿ ಪ್ರಯತ್ನಿಸಬೇಕು. ಆಗ ಮಾತ್ರ ಈ ಜಾತ್ರೆ ಮತ್ತು ಉತ್ಸವ ಮೂರ್ತಿ ಎಂಬ ಕಳಂಕ ದೂರವಾಗುತ್ತದೆ. ಇಲ್ಲವಾದರೆ ಸಮ್ಮೇಳನಗಳ ಸಂಖ್ಯೆ ಅಧ್ಯಕ್ಷರುಗಳ ಸಂಖ್ಯೆ ಬೆಳೆಯುತ್ತ ಹೋಗುತ್ತದೆ ಅಷ್ಟೆ.

ಇಂದು ಸಾಹಿತ್ಯ ಸಮ್ಮೇಳನಗಳಿಗೆ ಬರುವ ಲಕ್ಷಾಂತರ ಜನ ಎಲ್ಲ ಜಾತಿ, ಧರ್ಮ, ವರ್ಗದವರಾಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಜಾತಿ, ಧರ್ಮಗಳ ಸಮಾವೇಶಗಳಲ್ಲಿ ಮಾತ್ರ ದೊಡ್ಡ ಸಂಖ್ಯೆಯ ಜನಸಮೂಹವನ್ನು ನೋಡುತ್ತಿದ್ದೇವೆ. ಈ ಜನಸಮೂಹದ ಹಿಂದೆ ಸ್ವಧರ್ಮ, ಸ್ವಜಾತಿ ಹಿತಾಸಕ್ತಿಗಳು, ರಾಜಕೀಯ ಗುಪ್ತಕಾರ್ಯ ಸೂಚಿಗಳೂ ಇರುತ್ತವೆ. ಹಲವಾರು ಬಾರಿ ಅನ್ಯಧರ್ಮ, ಅನ್ಯಜಾತಿ, ಇನ್ನೊಂದು ಪಕ್ಷದ ವಿರುದ್ಧ ದ್ವೇಷವೂ ಇವುಗಳ ಗುರಿ, ಉದ್ದೇಶವಾಗಿರುತ್ತದೆ. ಇನ್ನು ಸ್ವಯಂಪ್ರೇರಿತವಾಗಿ, ಅನ್ಯಾಯ–ಶೋಷಣೆಯ ವಿರುದ್ಧ ತಮ್ಮ ಹಕ್ಕುಗಳ ಈಡೇರಿಕೆಗಾಗಿ ಬರುವ ರೈತ, ಕಾರ್ಮಿಕ, ದಲಿತ ಮುಂತಾದ ಜನಸಮೂಹದಲ್ಲಿ ಒಂದು ವರ್ಗದ ಜನ ಮಾತ್ರವಿರುತ್ತಾರೆ. ಆದರೆ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಬರುವ ಜನಸಮೂಹ ಇದೆಲ್ಲವನ್ನೂ ಮೀರಿದ್ದು. ಇಂಥ ಗುಣಾತ್ಮಕವಾದ ಜನಸಮೂಹವನ್ನು ಎದುರಿಗಿಟ್ಟುಕೊಂಡು, ಸಮ್ಮೇಳನಕ್ಕೆ ಬರಲಾಗದೇ ನಾಡು–ನುಡಿಯ ಬಗ್ಗೆ ಅಭಿಮಾನ ಪ್ರೀತಿ ಇಟ್ಟುಕೊಂಡ ಕೋಟ್ಯಂತರ ಜನರಿಗೂ ಪರಿಷತ್ತು ಮತ್ತು ಸಮ್ಮೇಳನಗಳು ಸಕಾರಾತ್ಮಕವಾಗಿ ಸ್ಪಂದಿಸಿದರೆ ಇಂಥ ಸಮ್ಮೇಳನಗಳು ಅರ್ಥಪೂರ್ಣವಾಗುತ್ತವೆ. ಆರ್ಥಿಕ ಜಾಗತಿಕರಣದೊಂದಿಗೆ, ಸಾಂಸ್ಕೃತಿಕ ಜಾಗತಿಕರಣವೂ ಬರುತ್ತಿದೆ. ಈ ಎರಡೂ 'ಕರಣ'ಗಳು ವಿಶ್ವದ ವೈವಿಧ್ಯತೆಯನ್ನು ನಾಶ ಮಾಡುತ್ತಿವೆ. 'ನಾಡು–ನುಡಿ' ಅಪಾಯದಲ್ಲಿವೆ. ಇಂಥ ಅಪಾಯದ ಕುರಿತು ಚಿಂತನೆ–ಚಟುವಟಿಕೆಗಳಿಗೆ ಸಾಹಿತ್ಯ ಸಮ್ಮೇಳನ ಸ್ಫೂರ್ತಿಯಾಗಲಿ. ಅದು ಜನರ ಜಾತ್ರೆಯಾಗಲಿ ಕೇವಲ ಯಾತ್ರೆ ಆಗದಿರಲಿ.




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪–೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪–೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧–೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨–೨೨೪೩೦೨

# ಹಿಂದೂ ಭಯೋತ್ಪಾದನೆ ಎಂದರೆ ಅಳುಕೇಕೆ ?

ಒಂದು ಉದ್ದೇಶದ ಸಾಧನೆಗಾಗಿ ಜನಸಮುದಾಯಗಳಲ್ಲಿ ನಿರ್ದಿಷ್ಟ ಜನಸಮೂಹಗಳಲ್ಲಿ, ಜನಾಂಗಗಳಲ್ಲಿ, ಮತಧರ್ಮೀಯರಲ್ಲಿ ಭಯ ಹುಟ್ಟಿಸುವ ಕೃತ್ಯಗಳಲ್ಲಿ ತೊಡಗುವುದೇ ಭಯೋತ್ಪಾದನೆ. ಅದು ಇಂಥದ್ದೇ ಆಗಿರಬೇಕೆಂಬ ನಿಯಮವೇನಿಲ್ಲ. ಅದು ವಿಮಾನ ಅಪಹರಣವಾಗಿರಬಹುದು, ಆಸ್ಫೋಟನೆ ಇರಬಹುದು, ಗುಂಡಿನ ಚಕಮಕಿ ಇರಬಹುದು. ಕಾರು ಬಾಂಬು, ಸೈಕಲ್ ಬಾಂಬು ಅಥವಾ ವಾಹನಗಳನ್ನು ನುಗ್ಗಿಸಬಹುದು ಅಲ್ಲದೆ, ಜೀವ ಬೆದರಿಕೆಯೂ ಆಗಿರಬಹುದು. ಈಚೆಗೆ ಅದು ಉಗ್ರವಾದಿಗಳು, ಮತಾಂಧರು, ಮುಖ್ಯವಾಗಿ ಮುಸಲ್ಮಾನರು ಎಸಗುವ ದುಷ್ಕೃತ್ಯ ಎಂಬುದಾಗಿ ಪರಿಗಣಿತ ವಾಗಿದೆ. ಇತಿಹಾಸದ ಪುಟಗಳಲ್ಲಿ ಇಣುಕಿ ನೋಡಿದರೆ ಇಂಥ ಭಯ ಹುಟ್ಟಿಸುವ ಕೃತ್ಯಗಳು ನಡೆಯುತ್ತಲೇ ಬಂದಿರುವುದನ್ನು ಪಟ್ಟಿ ಮಾಡಬಹುದು. ಜನಾಂಗ ಶ್ರೇಷ್ಠತಾವಾದವನ್ನು ಮುಂದಿರಿಸಿದ ಜರ್ಮನಿಯ ಫಾಸಿಸ್ಟ್ ನಾಯಕ ಹಿಟ್ಲರ್, ಯೆಹೂದ್ಯ ಜನಾಂಗವನ್ನೇ ನಿರ್ಮೂಲ ಮಾಡಹೊರಟಿದ್ದು ಒಂದು ಉದಾಹರಣೆ. ಇಂಥ ಕೃತ್ಯಗಳು ಜರುಗಿದಾಗ ಬಲಿಯಾಗುವವರು ಅಮಾಯಕ ಜನ ಅಷ್ಟೆ. ಸರಕಾರಗಳು ನಡೆಸುವ ದಬ್ಬಾಳಿಕೆ ಕೂಡ ಇದೇ ಸಾಲಿಗೆ ಸೇರಿದ್ದು. ಭಯ ಹುಟ್ಟಿಸುವುದನ್ನು ಬಿಟ್ಟರೆ ಗುರಿಸಾಧನೆ ಎನ್ನುವುದಕ್ಕೆ ದಾಖಲೆ ಇಲ್ಲ. ಇಪ್ಪತ್ತೊಂದನೆ ಶತಮಾನದಲ್ಲಿ ಭಯೋತ್ಪಾದನೆಗೆ ಎನ್ನುವುದು ಜಗದ್ವ್ಯಾಪಿಯಾಗಿದೆ.

ಭಯೋತ್ಪಾದನೆಯು ಸರಕಾರಗಳು ಅಧಿಕಾರ ಉಳಿಸಿಕೊಳ್ಳಲು ನಡೆಸುವ ದೌರ್ಜನ್ಯವಾಗಿರುತ್ತದೆ. ಉದಾಹರಣೆ: ವಸಾಹತು ಆಳ್ವಿಕೆ, ಸರ್ವಾಧಿಕಾರಿ ಆಡಳಿತ, ಜನಸಾಮಾನ್ಯರು ನಡೆಸುವ ಪ್ರತಿಭಟನೆಗೆ ಹತ್ತಿಕ್ಕುವುದು ಇತ್ಯಾದಿ. ಅದು ಕೆಲವು ಸಂಘಟನೆಗಳು ನಡೆಸುವ ಕೃತ್ಯಗಳೇ ಆಗಿರುತ್ತವೆ. ಉದಾಹರಣೆ : ಅಮೆರಿಕದಲ್ಲಿ ಕರಿಯರ ಹತ್ಯೆ ನಡೆಸುತ್ತಿದ್ದ ಕ್ಲುಕ್‌ಕ್ಲುಕ್ಸ್‌ಕ್ಲಾನ್; ಪ್ಯಾಲಸ್ತೈನಿನ ಜನರ ಮೇಲೆ ಯೆಹೂದ್ಯರು ನಡೆಸುತ್ತಿರುವ ದೌರ್ಜನ್ಯ; ಇಸ್ಲಾಮಿಕ್ ರಾಜ್ಯ ಸ್ಥಾಪನೆಯ ಮತಾಂಧರು ಜಗತ್ತಿನ ನಾನಾ ಜಾಗಗಳಲ್ಲಿ ನಡೆಸುತ್ತಿರುವ ಹೀನಕೃತ್ಯಗಳು. ಅವು ಅಲ್ಪಸಂಖ್ಯಾತರ ಮೇಲೆ, ದಲಿತರ ಮೇಲೆ ಬಹುಸಂಖ್ಯಾತರು ನಡೆಸುವ ದುಷ್ಕೃತ್ಯಗಳೂ ಆಗಿರಬಹುದು. ಒಟ್ಟಿನಲ್ಲಿ ಜನಸಮೂಹಗಳಲ್ಲಿ ಭೀತಿಯ ವಾತಾವರಣ ಸೃಷ್ಟಿಸುವುದೇ ಇದರ ಗುರಿ.

ಭಾರತದ ಸಂದರ್ಭದಲ್ಲಿ ಭಯೋತ್ಪಾದನೆ ಎನ್ನುವುದು ಇಸ್ಲಾಮ್ ಧರ್ಮೀಯರು ನಡೆಸುವ ದುಷ್ಕೃತ್ಯ ಎಂದೇ ಹಣೆಪಟ್ಟಿ. ಅದು ನಿಜವೂ ಕೂಡ. ಹೆಚ್ಚಿನ ದುರ್ಘಟನೆಗಳಲ್ಲಿ ಅವರದೇ ಕೈವಾಡ. ನೆರೆ ರಾಷ್ಟ್ರ ಪ್ರೇರಿತ ವಿಧ್ವಂಸ ಚರ್ಯೆಗಳೂ ಇದರಲ್ಲಿ ಸೇರಿವೆ. ಹಾಗಾದರೆ ಹಿಂದೂಗಳು ಭಯೋತ್ಪಾದನೆಯ ಕೃತ್ಯಗಳಲ್ಲಿ ತೊಡಗುವುದಿಲ್ಲವೆ? ಖಂಡಿತ ಇದೆ. ಆದರೆ ಅದರ ಸ್ವರೂಪವೇ ಬೇರೆ. ಮಹಾತ್ಮಾ ಗಾಂಧಿಯವರ ಹತ್ಯೆಗಿಂತ ದೊಡ್ಡ ಉದಾಹರಣೆ ಬೇಕಿಲ್ಲ. ಈಚಿನ ದಿನಗಳಲ್ಲಿ ಅಂದರೆ ಭಾಜಪ ಬಹುಮತ ಪಡೆದುಕೊಂಡು ಕೇಂದ್ರದಲ್ಲಿ ಮೋದಿ ಸರಕಾರ ಸ್ಥಾಪನೆಯಾದ ಮೇಲೆ ಅದು ನಾನಾರೂಪ ಪಡೆದು ಕೊಂಡಿದೆ. ಬಹುಮತೀಯ ಅಭಿಪ್ರಾಯವನ್ನು ಒತ್ತಾಯಪೂರ್ವಕವಾಗಿ ಇತರರ ಮೇಲೆ ಹೇರುವುದೂ ಕೂಡ ಭಯೋತ್ಪಾದನೆಯೆ. ಯುಪಿಎ ಅಧಿಕಾರ ದಲ್ಲಿದ್ದಾಗ ನಡೆದ ದುರ್ಘಟನೆಯೊಂದರಲ್ಲಿ ಹಿಂದೂಗಳ ಕೈವಾಡವಿತ್ತೆಂದು ಮೊಕದ್ದಮೆ ದಾಖಲಾಗಿತ್ತು. ಕೆಲದಿನಗಳ ಹಿಂದೆ ಪ್ರಮುಖ ಆರೋಪಿಗಳ ಖುಲಾಸೆ ಆಯಿತು. ಹಾಗೆಂದ ಮಾತ್ರಕ್ಕೆ ಹಿಂದೂ ಭಯೋತ್ಪಾದನೆ ಇಲ್ಲವೆಂದಲ್ಲ. ಅಲ್ಪಸಂಖ್ಯಾತರು, ದಲಿತರು, ಅನ್ಯಮತೀಯರು ಇವರ ಮೇಲೆ ದೌರ್ಜನ್ಯಗಳು ಜರುಗುತ್ತಲೇ ಇವೆ. ಗೋಮಾಂಸ ಭಕ್ಷಣೆ ಆರೋಪದ ಮೇಲೆ ಫರೀದಾಬಾದ್‌ನಲ್ಲಿ ನಡೆದ ಕಗ್ಗೊಲೆ, ಹತ್ಯೆಗಾಗಿ ಗೋವು ಸಾಗಿಸುತ್ತಿದ್ದಾರೆ ಎನ್ನುವ ಶಂಕೆಯ ಮೇಲೆ ನಡೆಸುವ ಥಳಿತ, ಇವೆಲ್ಲ ಭಯೋತ್ಪಾದನೆಯ ನಾನಾ ಮುಖಗಳು ಅಷ್ಟೆ. ಭಿನ್ನಮತೀಯರ ಮೇಲೆ ನಡೆಯುತ್ತಿರುವ ಹಲ್ಲೆಗಳೂ ಕೂಡ ಅದೇ ಸಾಲಿಗೆ ಬೀಳುತ್ತವೆ. ಪ್ರಜಾಪ್ರಭುತ್ವದಲ್ಲಿ ಭಿನ್ನಾಭಿಪ್ರಾಯಕ್ಕೆ ಮನ್ನಣೆ ಇದೆ. ಅದು ಯಾವುದೇ ವಿಷಯಕ್ಕೆ ಸಂಬಂಧಿಸಿರಬಹುದು. ಅದನ್ನು ವ್ಯಕ್ತಪಡಿಸಿದವರ ಮೇಲೆ ಹಲ್ಲೆ ನಡೆಸುವುದು ಯಾವ ನ್ಯಾಯ. ಅಂಥ ಭೀತಿಯ ವಾತಾವರಣ ಈಗ ದೇಶದಲ್ಲಿ ವ್ಯಾಪಕವಾಗಿರುವುದನ್ನು ಅಲ್ಲಗಳೆಯುವಂತಿಲ್ಲ. ನರೇಂದ್ರ ಧಾಬೋಲ್ಕರ್, ಗೋವಿಂದ ಪಾನ್ಸರೆ, ಎಂ.ಎಂ. ಕಲಬುರ್ಗಿ, ಗೌರಿ ಲಂಕೇಶ್ ಇವರುಗಳ ಹತ್ಯೆ ಭೀತಿ ಉಂಟುಮಾಡುವ ಕೃತ್ಯಗಳಲ್ಲ ಎಂದು ಹೇಳಲಾದೀತೆ? ಒಂದು ರೀತಿಯ ಉಸಿರುಗಟ್ಟಿಸುವ ವಾತಾವರಣ ಉಂಟುಮಾಡುವುದೂ ಕೂಡ ಭಯೋತ್ಪಾದನೆಯೇ.

ಕೆಲ ದಿನಗಳ ಹಿಂದೆ ತಮಿಳು ನಟ ಕಮಲಹಾಸನ್ ಲೇಖನವೊಂದರಲ್ಲಿ ಹಿಂದೂ ಭಯೋತ್ಪಾದಕರ ಕುರಿತು ಪ್ರಸ್ತಾಪ ಮಾಡಿದ್ದರು. ಅದಕ್ಕೆ ಹಿಂದುತ್ವ ವಾದಿಗಳಿಂದ ಪ್ರತಿಭಟನೆಯ ಮಹಾಪೂರವೇ ಹರಿಯಿತು. ಹಿಂದೂ ಮಹಾಸಭಾದ ರಾಷ್ಟ್ರೀಯ ಉಪಾಧ್ಯಕ್ಷ ಪಂಡಿತ್ ಅಶೋಕ ಶರ್ಮಾ 'ನಟ ಕಮಲಹಾಸನ್ ಹಾಗೂ ಅಂಥವರನ್ನು ಗುಂಡಿಟ್ಟು ಕೊಲ್ಲಬೇಕು. ಆಗ ಅವರು ಪಾಠ ಕಲಿಯುತ್ತಾರೆ' ಎಂದು ಹೇಳಿಕೆ ನೀಡಿದರು. ಇದಕ್ಕೆ ಏನೆನ್ನಬೇಕು?

*(ಈ ತಿಂಗಳು ೩ನೇ ಪುಟದಿಂದ)*

ನಾಮಾಂಕಿತ ರಾಜಕೀಯ ಪಕ್ಷ ಪ್ರಾರಂಭಿಸಿದ್ದಾರೆ. ಎಷ್ಟು ಸ್ಥಾನಗಳಲ್ಲಿ ಈ ಸಲ ಸ್ಪರ್ಧಿಸುತ್ತವೋ ಈ ಪಕ್ಷಗಳು ನೋಡಬೇಕು. ಎಷ್ಟೋ ರಾಜಕೀಯ ಪಕ್ಷಗಳು ರಾಜ್ಯದಲ್ಲಿ ಬಂದುಹೋಗಿವೆ. ಅವುಗಳಲ್ಲಿ ಇವೂ ಒಂದು. ಡಿವೈಎಸ್ಪಿ ಆಗಿದ್ದ ಅನುಪಮ ಶೆಣೈ ಪೂರ್ವೋತ್ತರ ನಮಗೆ ಈಗ ಬೇಕಿಲ್ಲ. ಆದರೂ ಅವರ ರಾಜಕೀಯ ಪ್ರವೇಶ ಮಾತ್ರ ಹುಬ್ಬೇರಿಸುವಂಥದ್ದು.

* * *

ಯಾವುದೋ ನೀರಾವರಿ ಯೋಜನೆ ಅಣೆಕಟ್ಟು ನಿರ್ಮಾಣ, ಈಚೆಗೆ ರಸ್ತೆ ಅಗಲೀಕರಣ ಮೊದಲಾದ ಅಭಿವೃದ್ಧಿಯ ಹೆಸರಿನಲ್ಲಿ ಕಾರ್ಯಗತವಾಗುವಾಗ ಬಲಿಯಾಗುವವರು ಮೊದಲು ಬಡ ರೈತಾಪಿ ಜನ. ಬೃಹತ್ ಅಣೆಕಟ್ಟುಗಳು ನಿರ್ಮಾಣಗೊಂಡಾಗ ಸಾವಿರಾರು ಗ್ರಾಮಗಳು ಮುಳುಗಡೆಯಾಗುತ್ತವೆ, ಲಕ್ಷಾಂತರ ರೈತರು ಬೀದಿಪಾಲಾಗುತ್ತಾರೆ. ಸರಕಾರ ಸೂಕ್ತ ಪರಿಹಾರದ ಘೋಷಣೆ ಮಾಡುತ್ತಲೇ ಬಂದರೂ, ಅದು ಪೂರ್ಣವಾಗಿ ಕಾರ್ಯಗತವಾಗಿರುವುದು ಕಡಿಮೆ. ಭೂಮಿ, ವಸತಿಗಳನ್ನು ಕಳೆದುಕೊಂಡ ನಿರಾಶ್ರಿತರ ಪಾಡನ್ನು ಕೇಳುವವರಿಲ್ಲ. ಹೆಚ್ಚಿನವರು ಜೀವನ ಹೇಗೋ ಸಾಗಿಸಲು ನಗರಗಳ ಮೊರೆ ಹೋಗುತ್ತಾರೆ. ಇದು ಸ್ವಾತಂತ್ರ್ಯಾನಂತರದ ಕಾಲದಲ್ಲಿ ನಾವು ಕಾಣುತ್ತಿರುವ ಪರಿಸ್ಥಿತಿ.

ಈಚೆಗೆ ಪ್ರಧಾನಿ ನರೇಂದ್ರ ಮೋದಿ ನರ್ಮದಾ ಯೋಜನೆಯಡಿ ನಿರ್ಮಾಣಗೊಂಡಿರುವ ಸರ್ದಾರ್ ಸರೋವರವೆಂಬ ದೈತ್ಯ ಜಲಾಶಯವನ್ನು ಲೋಕಾರ್ಪಣೆ ಮಾಡಿದರು. ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಜುಗ್ಗಾಡಿದ ಈ ಜಲಾಶಯ ೪೫ ಸಾವಿರ ಕುಟುಂಬಗಳನ್ನು ನುಂಗಿಹಾಕುವುದೆಂದು ಅಂದಾಜು. ಯೋಜನೆ ರೂಪುಗೊಂಡಾಗಿನಿಂದ ನೀರುಪಾಲಾಗುವ ಬಡಜನರ ಪುನರ್ವಸತಿಗಾಗಿ ಹೋರಾಟ ನಡೆಸುತ್ತ ಬಂದಿದ್ದಾರೆ ಮೇಧಾ ಪಾಟ್ಕರ್. ಈಗಲೂ ಅವರ ಜನಪರ ಹೋರಾಟ ಮುಂದುವರಿದಿದೆ. ನ್ಯಾಯಾಲಯದಲ್ಲಿ, ಬೀದಿಗಿಳಿದು, ಸತ್ಯಾಗ್ರಹ, ಉಪವಾಸ ವನವಾಸಗಳನ್ನು ನಡೆಸಿ ಆಕೆ ಹೋರಾಟ ನಡೆಸಿದ್ದಾರೆ. ನರ್ಮದಾ ಯೋಜನೆ, ಸರ್ದಾರ್ ಸರೋವರ ಇವುಗಳ ಜೊತೆ ಮೇಧಾ ಪಾಟ್ಕರ್ ಹೆಸರು ಹೆಣೆದುಕೊಂಡಿದೆ. ೧೯೬೧ರಲ್ಲೇ ಪ್ರಧಾನಿ ಜವಹರಲಾಲ್ ನೆಹರೂ ಅಡಿಗಲ್ಲು ನೆಟ್ಟಿದ್ದರು. ಆಗ ಈ ಯೋಜನೆಯ ರೂಪವೇ ಬೇರೆಯಾಗಿತ್ತು ಮೇಧಾ ಪಾಟ್ಕರ್ ಪ್ರಕಾರ. ಆಗ ಸರೋವರದ ಎತ್ತರ ೪೯.೩೭ ಮೀಟರುಗಳು. ನ್ಯಾಯಾಲಯದ ಮೆಟ್ಟಿಲು ಏರಿದ ಜಲವಿವಾದ ಇತ್ಯರ್ಥವಾದ್ದು ೧೯೭೯ರಲ್ಲಿ. ಸರ್ದಾರ್ ಸರೋವರದ ಎತ್ತರ ಈಗ ೧೩೮.೬೮ ಮೀಟರುಗಳು. ಇದು ದೇಶದಲ್ಲೇ ಎತ್ತರವಾದ ಅಣೆಕಟ್ಟು ಹಾಗೂ ಅತಿ ಹೆಚ್ಚು ಪ್ರದೇಶವನ್ನು ಮುಳುಗಡೆ ಮಾಡುವಂಥದ್ದು. ಗುಜರಾತ್ ಚುನಾವಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಮೋ ಜನ್ಮದಿನದ ದಿನ ಆತುರಾತುರವಾಗಿ ಈ ಯೋಜನೆಯನ್ನು ಲೋಕಾರ್ಪಣೆ ಮಾಡಿದ್ದಾಯಿತು. ಈ ಸರೋವರದ ತೂಬಿಗೆ ಬಾಗಿಲು ಅಳವಡಿಸಲು ೨೦೦೭ರಿಂದ ೭ ವರ್ಷಗಳು ಯುಪಿಎ ಸರಕಾರ ಅನುಮತಿ ನೀಡಿರಲಿಲ್ಲ. ೨೦೧೪ರಲ್ಲಿ ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ ೧೭ ದಿನಗಳಲ್ಲಿಯೇ ಅನುಮತಿ ನೀಡಲಾಯಿತು.

ಸರ್ದಾರ್ ಸರೋವರ ಜಲಾಶಯ ಪ್ರಧಾನಿ ದೇಶಕ್ಕೆ ಅರ್ಪಣೆ ಮಾಡಿದ್ದಾಯಿತು. ಇದರಿಂದ ಮಧ್ಯಪ್ರದೇಶ, ರಾಜಾಸ್ಥಾನ ಮತ್ತು ಗುಜರಾತ್‌ಗಳ ಜಮೀನುಗಳಿಗೆ ನೀರುಣಿಸಲಾಗುತ್ತದೆ. ಆದರೆ ಅದಕ್ಕೆ ಕಾಲುವೆ ಮತ್ತು ಉಪ ಕಾಲುವೆಗಳ ನಿರ್ಮಾಣ ಆಗೇ ಇಲ್ಲ. ಇನ್ನು ಪರಿಹಾರದ ವಿಚಾರದಲ್ಲಿ ಸುಪ್ರೀಂಕೋರ್ಟ್ ನೀಡಿದ ಆದೇಶಗಳು ಜಾರಿಯಾಗಿರುವುದು ಶೇ. ೨೦ ಮಾತ್ರ. ಜನರನ್ನು ಅವರ ಮೂಲ ನೆಲೆಗಳಿಂದ ಒಕ್ಕಲೆಬ್ಬಿಸುವ ಕಾರ್ಯ ಸರ್ಕಾರದಿಂದಲೇ ನಡೆದಿದೆ. ಸರಕಾರ ನೀಡಿರುವ ಅಂಕಿ ಅಂಶಗಳ ಪ್ರಕಾರ ಸುಮಾರು ೩೦,೦೦೦ ಕಿ.ಮೀ. ಉದ್ದದ ಕಾಲುವೆ ಜಾಲವನ್ನು ನಿರ್ಮಿಸಬೇಕಾಗಿದೆ. ಅದು ಕಾರ್ಯಗತವಾಗುವಾಗ ಇನ್ನೆಷ್ಟು ಜನ ನಿರಾಶ್ರಿತರಾಗುತ್ತಾರೋ. ಈಗಾಗಲೇ ಸಾವಿರಾರು ಮಂದಿ ಆದಿವಾಸಿಗಳು ಜಮೀನುಗಳನ್ನು ವಸತಿಗಳನ್ನು ಕಳೆದುಕೊಂಡಿದ್ದಾರೆ. ಇದುವರೆಗೆ ಈ ಕಾಮಗಾರಿಗೆ ತಗಲಿರುವ ಒಟ್ಟು ವೆಚ್ಚ ೪೮,೦೦೦ ಕೋಟಿ ರೂ.ಗಳು. ಬೀದಿ ಪಾಲಾದದ್ದು ೪೫ ಸಾವಿರ ಕುಟುಂಬಗಳು, ಭೂಸ್ವಾಧೀನ ೨.೫೮ಲಕ್ಷ ಹೆಕ್ಟೇರುಗಳು, ಮುಳುಗಡೆಯಾದ್ದು ೨೪೫ ಗ್ರಾಮಗಳು.

* * *

ಯುಗೋಸ್ಲಾವಿಯ ಛಿದ್ರಗೊಂಡಮೇಲೆ ಈಗ ಸ್ಪೇನಿನ ಸರದಿ. ಬ್ರಿಟನ್ನಿನಲ್ಲಿ ಸ್ಕಾಟ್ಲೆಂಡ್ ಪ್ರತ್ಯೇಕಗೊಳ್ಳುವ ಅಂಚಿನಲ್ಲಿದೆ. ಹಾಗಾಗಿ ಯೂರೋಪಿನ ದೇಶಗಳು ಛಿದ್ರಗೊಳ್ಳುವ ಹಾದಿ ಹಿಡಿದಿದೆಯೇ ಎಂಬ ಅನುಮಾನ ಬರುತ್ತದೆ. ಸೋವಿಯತ್ ಒಕ್ಕೂಟದ ವಿಘಟನೆಯಾದ ನಂತರ ಆಗಿರುವ ಬೆಳವಣಿಗೆ ಇದು. ಅಲ್ಲದೆ, ಯುರೋಪು ಖಂಡ ಅತಿ ಹೆಚ್ಚು ದೇಶಗಳನ್ನು ಹೊಂದಿರುವುದಾಗಿದೆ. ಅಲ್ಲಿರುವ ದೇಶಗಳ ಸಂಖ್ಯೆ ಈಗಾಗಲೇ ೪೫ ದಾಟುತ್ತಿದೆ. ಕೆಲವು ದೇಶಗಳು ನಮ್ಮ ದೇಶದ ದೊಡ್ಡ ನಗರಗಳಷ್ಟು ಜನಸಂಖ್ಯೆಯನ್ನು ಸಹ ಹೊಂದಿಲ್ಲ.

ಸ್ಪೇನಿನ ಈಶಾನ್ಯ ಭಾಗದಲ್ಲಿರುವ ಕ್ಯಾಟೋಲೋನಿಯ ಪ್ರಾಂತ್ಯದ ಪಾರ್ಲಿಮೆಂಟ್ ದಿಢೀರ್ ಎಂದು ಇತ್ತೀಚೆಗೆ ಸ್ವಾತಂತ್ರ್ಯದ ಕಹಳೆ ಮೊಳಗಿಸಿದ್ದು ಅನಿರೀಕ್ಷಿತ. ಅಷ್ಟೇ ವೇಗದಲ್ಲಿ ಸ್ಪೇನಿನ ಕೇಂದ್ರ ಸರಕಾರ ಸ್ವತಂತ್ರ ರಾಷ್ಟ್ರ ಸ್ಥಾಪನೆ ಕನಸನ್ನು ಭಗ್ನಗೊಳಿಸಿದೆ. ದೇಶದ ಸರ್ವೋಚ್ಚ ನ್ಯಾಯಾಲಯ ಕೂಡ ಕ್ಯಾಟೋಲೋನಿಯ ಪಾರ್ಲಿಮೆಂಟಿನ ತೀರ್ಮಾನ ಅಸಿಂಧು ಎಂದು ಘೋಷಿಸಿದೆ. ಸ್ವಾತಂತ್ರ್ಯದ ಪತಾಕೆ ಹಾರಿಸಿದ ನಾಯಕ ಕಾರ್ಲೆಸ್ ಪ್ಯುಗ್ಡೆಮಾಂಟ್ ಈಗ ನೆರೆಯ ಬೆಲ್ಜಿಯಮ್ ರಾಷ್ಟ್ರದ ರಾಜಧಾನಿಯಲ್ಲಿ ಆಶ್ರಯ ಪಡೆದಿದ್ದಾನೆ. ಈ ಎಲ್ಲ ಬೆಳವಣಿಗೆಗಳೂ ಆದದ್ದು ಎರಡು ಮೂರು ದಿನಗಳಲ್ಲಿ. ಕ್ಯಾಟೋಲೋನಿಯ ಪಾರ್ಲಿಮೆಂಟನ್ನು ವಿಸರ್ಜನೆ ಮಾಡಿ, ನೇರವಾಗಿ ಕೇಂದ್ರದ ಆಡಳಿತ ಹೊರಿಸಿರುವ ಸ್ಪೇನಿನ ಸರಕಾರ ಚುನಾವಣೆಗಳನ್ನು ಘೋಷಿಸಿದೆ. ಮುಂದೇನಾಗುವುದೋ ನೋಡೋಣ.

* * *

ತಮಿಳುನಾಡಿನ ರಾಜಕೀಯ ವಿದ್ಯಮಾನಗಳಲ್ಲಿ ಸಿನಿಮಾ ನಟರ ಪ್ರಾಬಲ್ಯವೇ ಅಧಿಕ. ನಟ ಎಂ. ಜಿ. ರಾಮಚಂದ್ರನ್, ತಾರೆ ಜಯಲಲಿತ ಸಾಕಷ್ಟು ದೀರ್ಘಕಾಲ ಆಡಳಿತ ನಡೆಸಿ ತಮ್ಮ ಛಾಪು ಮೂಡಿಸಿದ್ದಾರೆ. ಹಾಗೆ ನೋಡಿದರೆ ಕಾಂಗ್ರೆಸ್ ಅಧಿಕಾರ ಅಂತ್ಯಗೊಂಡ ಮೇಲೆ ತಮಿಳು ಚಿತ್ರರಂಗದೊಂದಿಗೆ ಸಂಬಂಧ ಇರುವವರೇ ಆಳ್ವಿಕೆ ನಡೆಸಿದ್ದಾರೆ. ಅಣ್ಣಾದೊರೈ ಹಾಗೂ ಕರುಣಾನಿಧಿ ಇಬ್ಬರೂ ಸಿನಿಮಾ ಹಿನ್ನೆಲೆ ಹೊಂದಿರುವವರೆ. ಅಣ್ಣಾದೊರೈ ಬಿಟ್ಟರೆ ನಂತರ ಮುಖ್ಯಮಂತ್ರಿಗಳ ಗಾದಿ ಏರಿದವರೆಲ್ಲ ಹೊರಗಿನವರೆ. ಈಗ ರಾಜಕೀಯದಲ್ಲಿ ಧುಮುಕಲು ಸಿದ್ಧರಾಗಿರುವ ಜನಪ್ರಿಯ ನಟರುಗಳಾದ ಕಮಲಹಾಸನ್ ಹಾಗೂ ರಜನೀಕಾಂತ್ ಇಬ್ಬರೂ ಕೂಡ ಹೊರಗಿನವರೇ. ಇವರಿಬ್ಬರೂ ರಾಜಕೀಯ ಪ್ರವೇಶಿಸುವುದು ಹೆಚ್ಚು ಕಡಿಮೆ ಖಚಿತವಾಗಿದೆ. ಡಿಎಂಕೆ ಹಾಗೂ ಎಐಡಿಎಂಕೆ ಪಕ್ಷಗಳು ಒಂದು ಬಗೆಯಲ್ಲಿ ಅತಂತ್ರ ಸ್ಥಿತಿಯಲ್ಲಿವೆ. ಜಯಲಲಿತಾ ನಿಧನಾನಂತರ ನಿರೀಕ್ಷಿಸಿದ್ದಂತೆ ಪಕ್ಷ ಮೂರು ಪಾಲಾಗಿದೆ. ಕರುಣಾನಿಧಿ ಇರುವವರೆಗೆ ಡಿಎಂಕೆಯಲ್ಲಿ ಒಡಕಿರದು, ಅನಂತರ ದಾಯಾದಿ ಕಲಹ ಗ್ಯಾರಂಟಿ. ಈ ಸನ್ನಿವೇಶದಲ್ಲಿ ಭಾಜಪ ಭದ್ರವಾಗಿ ನೆಲೆಯೂರಲು ಹವಣಿಸುತ್ತಿದೆ. ಕಾಂಗ್ರೆಸ್ ಆಟಕ್ಕುಂಟು ಲೆಕ್ಕಕ್ಕಿಲ್ಲ ಎನ್ನುವ ಸ್ಥಿತಿಯಲ್ಲಿದೆ. ಬಲಪಂಥೀಯ ಭಯೋತ್ಪಾದನೆ ಪ್ರಸ್ತಾಪಿಸಿ ಕಮಲಹಾಸನ್ ಬರೆದಿರುವ ಲೇಖನಕ್ಕೆ ಭಾಜಪ ಆಕ್ರೋಶಗೊಂಡಿದೆ.

ಈಚೆಗೆ ವಿಜಯ್ ಎಂಬ ನಟ ತಯಾರಿಸಿದ್ದ ಚಿತ್ರ 'ಮರ್ಸಲ್' ಭಾಜಪ ವಿರೋಧದ ನಡುವೆಯೂ ಗಲ್ಲಾಪೆಟ್ಟಿಗೆ ತುಂಬುವುದರಲ್ಲಿ ಯಶಸ್ವಿಯಾಗಿದೆ. ಚಿತ್ರದ ಸಂಭಾಷಣೆಯಲ್ಲಿ ಜಿಎಸ್‌ಟಿ ಹಾಗೂ ನರೇಂದ್ರ ಮೋದಿಯವರ ಕುರಿತು ಖಾರವಾದ ನುಡಿಗಳಿವೆ ಎಂಬುದೇ ಭಾಜಪದ ಆಕ್ಷೇಪ. ಈ ಯಶಸ್ವೀ ನಟ ಕೂಡ ತಮಿಳುನಾಡಿನಲ್ಲಿ ರಾಜಕೀಯ ಪ್ರವೇಶಿಸಿಯಾನೆ ? ಹಿಂದಿನ ಆಂಧ್ರಪ್ರದೇಶದಲ್ಲಿ ನಟ ಎನ್. ಟಿ. ರಾಮರಾವ್ ಆಡಳಿತ ನೋಡಿದ್ದಾಯಿತು. ತಮಿಳುನಾಡಿನಲ್ಲಿ ನಟನಟಿಯರ ಆಳ್ವಿಕೆ ನೋಡಿದ್ದಾಯಿತು. ಈಗ ಕರ್ನಾಟಕದಲ್ಲಿ ನಟ ಉಪೇಂದ್ರ ಕುರ್ಚಿ ಕನಸು ಕಾಣುತ್ತಿದ್ದಾನೆ.

* * *

ಅಮೆರಿಕಾ ಸರ್ಕಾರವು ಈ ತಿಂಗಳ ಆದಿಯಲ್ಲಿ ೧೯೬೦ರ ದಶಕದ ಹಲವು ರಹಸ್ಯ ದಾಖಲೆಗಳನ್ನು ಬಹಿರಂಗಗೊಳಿಸಿತು. ಅಂದಿನ ಕೆಲವು ಪತ್ರಗಳು, ಟಿಪ್ಪಣಿಗಳು, ವಿದೇಶಾಂಗ ಸಚಿವಾಲಯದ ಪತ್ರ ವ್ಯವಹಾರ, ಮುಂತಾದುವೆಲ್ಲಾ ಆ ದಾಖಲೆಗಳಲ್ಲಿ ಸೇರಿದ್ದವು. ೧೯೧೭ರ ರಷ್ಯಾದ ಅಕ್ಟೋಬರ್ ಸಮಾಜವಾದಿ ಮಹಾಕ್ರಾಂತಿಯ ಶತಮಾನೋತ್ಸವ ಸಂದರ್ಭದಲ್ಲಿ ಆ ದಾಖಲೆಗಳನ್ನು ಪರಿಶೀಲಿಸುವುದು ಸೂಕ್ತ. ಏಕೆಂದರೆ ಕ್ರಾಂತಿಯ ತರುವಾಯದಲ್ಲಿ ಅದನ್ನು

ಬಗ್ಗುಬಡಿದು ಹಳೆಯ ಕೆರೆನ್‌ಸ್ಕಿ ಅಧಿಕಾರವನ್ನು ಪುನಃ ಸ್ಥಾಪಿಸುವ ಉದ್ದೇಶ ಯೂರೋಪಿನ ಕೆಲವು ರಾಷ್ಟ್ರಗಳಿಗಿದ್ದಿತು. ಅಂದು ಬ್ರಿಟನ್ನಿನ ಗೃಹಖಾತೆಯ ಉಪಸಚಿವನಾಗಿದ್ದ ವಿನ್‌ಸ್ಟನ್ ಚರ್ಚಿಲ್ ಪಾರ್ಲಿಮೆಂಟಿನಲ್ಲಿ ಹೇಳಿದ್ದ, "ಈ ಬಾಲ್ಶೆವಿಕ್ ಶಿಶುವನ್ನು ತೊಟ್ಟಿಲಲ್ಲೇ ಕತ್ತು ಹಿಚುಕಿ ಸಾಯಿಸಬೇಕು" ಎಂದು. ಈ ಉದ್ದೇಶವನ್ನು ಈಡೇರಿಸಿಕೊಳ್ಳಲು ಹದಿನಾಲ್ಕು ದೇಶಗಳ ಸೈನ್ಯ ರಷ್ಯಾದ ಆಕ್ರಮಣಕ್ಕೆ ಮುಂದಾದುವು. ಸೈನಿಕ ತರಬೇತಿಯನ್ನು ಸಹ ಪಡೆಯದಿದ್ದ ರೈತ–ಕಾರ್ಮಿಕ ದಳಗಳು ರಷ್ಯದಲ್ಲಿ ಬಂದೂಕು ಹಿಡಿದು ಸೆಣಸಾಡಿ ವಿಜಯಿಗಳಾದ್ದು ಇತಿಹಾಸ.

೧೯೫೯ರಲ್ಲಿ ಕ್ಯೂಬಾದ ಕ್ರಾಂತಿ ಯಶಸ್ವಿಯಾದಾಗ ಫಿಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿ ಕ್ರಾಂತಿಕಾರಿ ಸರ್ಕಾರವು ಕ್ಯೂಬಾದಲ್ಲಿ ಅಧಿಕಾರಕ್ಕೆ ಬಂತು. ಅಮೆರಿಕಾದ ಕೈಗೊಂಬೆಯಾಗಿದ್ದ ಪಾತಕಿ ಫುಲ್ಗಾನ್ಸಿಯೋ ಬಟಿಸ್ಟಾ ಮೊದಲೇ ದೇಶ ಬಿಟ್ಟು ಪರಾರಿಯಾಗಿದ್ದ. ೧೯೬೦ರ ದಶಕದಲ್ಲಿ ಜೆ. ಎಫ್. ಕೆನೆಡಿ ಅಮೆರಿಕಾದ ಅಧ್ಯಕ್ಷ ನಾಗಿದ್ದಾಗ ಕ್ಯಾಸ್ಟ್ರೋ ಸರ್ಕಾರವನ್ನು ಬುಡಮೇಲು ಮಾಡಲು ಒಂದು ಯೋಜನೆ ಸಿದ್ಧಗೊಳಿಸಿ "ಹಂದಿಗಳ ಕೊಲ್ಲಿ" ಎಂಬ ಪ್ರದೇಶಕ್ಕೆ ಗುಪ್ತ ಸೈನಿಕರನ್ನು ರವಾನಿಸಿದ್ದ. ಕ್ರಾಂತಿಕಾರಿ ಗೊರಿಲ್ಲಾಗಳು, ಸೈನಿಕರು ಮತ್ತು ರೈತರು ಆಕ್ರಮಣಕಾರರನ್ನು ಹಿಮ್ಮೆಟ್ಟಿಸಿದ್ದರು. ಮುಖಕ್ಕೆ ಕಪ್ಪು ರಂಗು ಹಚ್ಚಿಕೊಂಡು, ಕೆನೆಡಿ ಅಧ್ಯಕ್ಷನ ಶ್ವೇತಭವನದಲ್ಲಿ ನಾಯಿಮರಿಯಂತೆ ಬಾಲ ಮುದುಡಿ ಕೊಂಡು ಕೂತು ೧೯೬೩ರ ಜುಲೈ ೨೨ರಂದು ಡಲಾಸ್‌ನಲ್ಲಿ ತನ್ನದೇ ದೇಶದವರಿಂದ ಕೊಲ್ಲಲ್ಪಟ್ಟ.

ಈಗ ಹೊರಬಂದಿರುವ ದಾಖಲೆಗಳಲ್ಲಿ ಅಮೆರಿಕಾದ ಬೇಹುಗಾರಿಕಾ ಸಂಸ್ಥೆ (ಸಿ. ಐ. ಎ.) ಕ್ಯಾಸ್ಟ್ರೋನನ್ನು ಕೊಲ್ಲಲು ಏನೆಲ್ಲಾ ಯತ್ನಗಳನ್ನು ಮಾಡಿದ್ದಿತೆಂಬುದರ ಬಗ್ಗೆ ವಿವರಗಳಿವೆ. ದೊಡ್ಡ ಪ್ರಜಾಪ್ರಭುತ್ವವಾದಿ ಎನ್ನಲಾದ ಅಮೆರಿಕಾ ಹಲವು ದಶಕಗಳಿಂದ ಅಂತರರಾಷ್ಟ್ರೀಯ ಭಯೋತ್ಪಾದಕ ಸರ್ಕಾರವನ್ನು ಹೊಂದಿದೆ. ಇದೇ ಅಮೆರಿಕಾ, ಕಾಂಗೋ ಪ್ರಧಾನಿ ಲುಮುಂಬ ಮತ್ತು ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡ್ಯಾಗ್ ಹ್ಯಾಮರ್‌ಶೀಲ್ಡ್‌ರನ್ನು ಕೊಂದಿತ್ತು. ಇವೆಲ್ಲಾ ಗೊತ್ತಿದ್ದ ವಿಷಯಗಳು, ಆದರೆ ಅಧಿಕೃತ ದಾಖಲೆಗಳು ಈಗ ಹೊರಬಂದಿವೆ. ಫಿಡೆಲ್ ಕ್ಯಾಸ್ಟ್ರೋನನ್ನು ಕೊಲ್ಲಲು ಇಟಲಿ ಮೂಲದ ಸ್ಯಾಮ್ ಜಾಂಕಾನ ಎಂಬ ಭೂಗತ ಪಾತಕಿಗಳ ತಂಡದ ನಾಯಕನಿಗೆ ಸಿ. ಐ. ಎ., ಕೆನೆಡಿ ಅಧ್ಯಕ್ಷನಾಗಿದ್ದಾಗ ಒಂದು ಲಕ್ಷ ಐವತ್ತು ಸಾವಿರ ಡಾಲರ್ ನೀಡಿತ್ತೆಂದು ೧೯೭೫ರ ಒಂದು ಅಧಿಕೃತ ದಾಖಲೆ ತಿಳಿಸುತ್ತದೆ. ಕ್ಯಾಸ್ಟ್ರೋ ಭಾರಿ ಈಜುಗಾರ. ಅವರ ಡೈವಿಂಗ್ ಸೂಟ್‌ಗೆ ಸಾಂಕ್ರಾಮಿಕ ರೋಗ ಹರಡುವ ರಾಸಾಯನಿಕ ತುಂಬುವ ಯೋಜನೆಯೂ ಇದ್ದಿತಂತೆ.

ಅಂತಹ ಪಾತಕಿ ಅಮೆರಿಕಾದ ಆಲಿಂಗನದಲ್ಲಿ ನಮ್ಮ ದೇಶವು ಸ್ವ–ಇಚ್ಛೆಯಿಂದ ಬಂಧನಕ್ಕೆ ಮುನ್ನುಗ್ಗುತ್ತಿದೆ. ಅಮೆರಿಕಾದೊಡನೆ ಸಖ್ಯ ಹೆಚ್ಚಿದಷ್ಟೂ ನಮ್ಮ ದೇಶದ ಮೇಲೆ ಆತಂಕಕಾರಿ ಉಪದ್ರವಗಳು, ಭಯೋತ್ಪಾದಕ ಕೃತ್ಯಗಳು ಹೆಚ್ಚುತ್ತಿರುತ್ತವೆ ಎಂಬುದು ಗಮನಿಸಬೇಕಾದ ಸಂಗತಿ. ನಮ್ಮ ವಿದೇಶಾಂಗ ನೀತಿಯು ನಮಗೆ ಕುತ್ತುಂಟುಮಾಡುವ ದಿಕ್ಕಿನಲ್ಲಿ ಹೋಗಕೂಡದು.

*　　*　　*

ಖ್ಯಾತ ಇತಿಹಾಸಕಾರರಾದ ಆರ್. ಎಸ್. ಶರ್ಮ, ರೋಮಿಲ ಥಾಪರ್ ಮುಂತಾದವರು ಎನ್.ಸಿ.ಇ.ಆರ್.ಟಿ.ಗಾಗಿ ರಚಿಸಿದ್ದ ಇತಿಹಾಸದ ಪಠ್ಯಪುಸ್ತಕಗಳನ್ನು ದೆಹಲಿ ವಿಶ್ವವಿದ್ಯಾಲಯದ ಆವರಣದಲ್ಲಿ ಆರೆಸ್ಸೆಸ್ ನಾಯಕರ ನೇತೃತ್ವದಲ್ಲಿ ಸುಡಲಾಗಿದ್ದುದು ನಮ್ಮ ದೇಶದ ಜನರ ನೆನಪಿನಲ್ಲಿ ಈಗಲೂ ಉಳಿದಿದೆ. ತಮಗೆ ಸರಿಯೆನಿಸುವ ಅನೈತಿಹಾಸಿಕ ಸಂಗತಿಗಳನ್ನು ಪಠ್ಯಪುಸ್ತಕಗಳಲ್ಲಿ ತುರುಕುವ ಕೆಲಸವನ್ನು ಆ ಜನ ಮುಂದುವರಿಸುತ್ತಲೇ ಬಂದಿದ್ದಾರೆ. ಅದು ದೇಶಕ್ಕೆ ಮತ್ತು ವಿದ್ಯಾರ್ಥಿಗಳಿಗೆ ಎಸಗುವ ಮೋಸ ಮತ್ತು ಅಪಚಾರ ಎನ್ನುವುದನ್ನು ಅವರೆಂದೂ ಒಪ್ಪಿಲ್ಲ ಮತ್ತು ಮನಗಂಡಿಲ್ಲ. ವಿದ್ಯಾರ್ಥಿಗಳ ಮಿದುಳನ್ನು ಕಸದ ಗುಂಡಿಯನ್ನಾಗಿ ಪರಿವರ್ತಿಸುವ ದುರಂತ ಇದು.

ನಮ್ಮ ದೇಶದ ಇತಿಹಾಸ ಪಠ್ಯಪುಸ್ತಕಗಳಲ್ಲಿ ಬೂಸಿ ಚರಿತ್ರೆಯನ್ನು ತುಂಬುವುದರ ಜೊತೆಗೆ ಈಗ ಅಮೆರಿಕಾದ ಪಠ್ಯಪುಸ್ತಕಗಳಲ್ಲೂ ಒಂದಿಷ್ಟು ಕೊಳಕನ್ನು ತುಂಬುವ ಹುನ್ನಾರ ಜಾರಿಯಲ್ಲಿದೆಯೆಂದು ಅಮೆರಿಕಾದಿಂದ ಬಂದಿರುವ ವರದಿಯೊಂದು ತಿಳಿಸಿದೆ. ಆ ದೇಶದಲ್ಲಿ ಆಯಾ ರಾಜ್ಯಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕ ಸಮಿತಿಗಳಿರುತ್ತವೆ. ಆ ಸಮಿತಿಗಳು ಪಠ್ಯಗಳನ್ನು ಪರಿಶೀಲಿಸಿ ಆಯಾ ರಾಜ್ಯಗಳಲ್ಲಿ ಚಾಲನೆ ಯಲ್ಲಿರುವಂತೆ ಪುಸ್ತಕಗಳನ್ನು ಅಂಗೀಕರಿಸುತ್ತವೆ. ಸದ್ಯದಲ್ಲಿ ಕ್ಯಾಲಿಫೋರ್ನಿಯಾ ರಾಜ್ಯದ ಪಠ್ಯಪುಸ್ತಕ ಗಳಲ್ಲಿ ಭಾರತದ ಚರಿತ್ರೆಯನ್ನು ಕುರಿತಂತೆ ಎಂತಹ ಬದಲಾವಣೆ ತರಬೇಕೆಂದು ಅಲ್ಲಿ ನೆಲೆಸಿರುವ ಭಾರತೀಯ ವೃಂದದವರಲ್ಲಿ ಕೆಲವರು ತಮ್ಮ ಪ್ರಭಾವ ಬೀರಹೊರಟಿದ್ದಾರೆ. ಅವರೇನೂ ಇತಿಹಾಸ ತಜ್ಞರಲ್ಲ, ಆದರೆ ಭಾರತದ ಪ್ರಾಚೀನ ಭವ್ಯತೆಯನ್ನು ಪ್ರತಿಫಲಿಸಬೇಕೆಂಬ ತಗಾದೆ ಮಾಡುವ ಬಣದ ಪ್ರಮುಖರು ಅವರು. ನಮ್ಮ ದೇಶದಲ್ಲಿ ಅವರು ತಿರುಚಿದ ಇತಿಹಾಸ ಬೋಧನೆಯನ್ನು ಭಾರತೀಯ ಜನತಾ ಪಕ್ಷದ ಆಳ್ವಿಕೆಯಲ್ಲಿರುವ ಕೆಲವು ರಾಜ್ಯಗಳಲ್ಲಿ ಈಗಾಗಲೇ ಜಾರಿಗೊಳಿಸಿದ್ದಾರೆ. ಅವರ ಇತಿಹಾಸದ ಸಿದ್ಧಾಂತ ಬಹಳ ಸರಳವಾಗಿದೆ: ಯಾವುದು ತಮಗೆ ಹಿಡಿಸುವುದಿಲ್ಲವೋ ಅದನ್ನು ತೆಗೆದುಹಾಕುವುದು ಮತ್ತು ಮಿಕ್ಕವನ್ನು ತಮಗೆ ರುಚಿಸುವಂತೆ ಬರೆದಿಡುವುದು. ಉದಾಹರಣೆಗೆ, ಅಸ್ಪೃಶ್ಯತೆಯ ವಿಷಯವಿದೆ ಎನ್ನೋಣ. ನಮ್ಮ ಅಪ್ಪಟ ಸುಸಂಸ್ಕೃತ ದೇಶದಲ್ಲಿ ಅಂತಹ ಬರ್ಬರ ಪದ್ಧತಿ ಇದ್ದಿತೆಂದರೆ ಸಂಕೋಚವಾಗುತ್ತದೆ ಮತ್ತು ಜಗತ್ತಿನ ಮೂದಲಿಕೆಗೆ ಪಾತ್ರರಾಗುತ್ತೇವೆ. ಆದ್ದರಿಂದ ಹಿಂದೆಂದೂ ಅಂತಹ ಪದ್ಧತಿ ನಮ್ಮಲ್ಲಿರಲಿಲ್ಲವೆಂದು ಬರೆದರೆ ಕೆಲಸ ಮುಗಿಯಿತು. ನಾವು ಬಹಳ ಸ್ವಚ್ಛವಾಗಿಬಿಡುತ್ತೇವೆ. ನೆಹರು ಹೆಸರು ಕೇಳಿದರೆ ಅವರಿಗೆ ಬೌದ್ಧಿಕ ಮಲಬದ್ಧತೆ ಉಂಟಾಗುತ್ತದೆ; ಆದ್ದರಿಂದ ಅವರ ಹೆಸರನ್ನು ರಾಜಸ್ತಾನದ ಶಾಲಾ ಪಠ್ಯಪುಸ್ತಕಗಳಿಂದ ತೆಗೆಸಿಹಾಕಿದ್ದಾರೆ. ಶೈಕ್ಷಣಿಕ ಕ್ಷೇತ್ರದ ಅಧಿಕಾರಿಗಳು ಮತ್ತು ಅಧ್ಯಾಪಕ ವೃಂದ ಈ ಹೊಲಸು ಕೆಲಸದಲ್ಲಿ ಕೈ ಜೋಡಿಸುತ್ತಾರೆ. ಇಲ್ಲಿಯ ಪಠ್ಯಪುಸ್ತಕದಿಂದ ನೆಹರು ಹೆಸರನ್ನು ಕಿತ್ತುಹಾಕಿದರೆ ಅವರ ವ್ಯಕ್ತಿತ್ವವು ಪ್ರಪಂಚದ ಇತಿಹಾಸದಿಂದ ಮರೆಯಾಗುತ್ತದೆಯೇ? ವಿಶ್ವಸಂಸ್ಥೆಯ ದಾಖಲೆಗಳಲ್ಲಿ ಅವರ ಹೆಸರು ಸಾವಿರ ಬಾರಿ ಬಂದೇ ಬರುತ್ತದೆ. ಅಸ್ಪೃಶ್ಯತೆ ಇರಲಿಲ್ಲವೆಂದು ಪುಸ್ತಕದಲ್ಲಿ ಬರೆದಿಟ್ಟುಕೊಂಡರೆ ಅಸ್ಪೃಶ್ಯರಾಗಿದ್ದವರ ಸಂತತಿಗಳವರು ನಮ್ಮಲ್ಲಿದ್ದಾರಲ್ಲ ಅವರು ತಮ್ಮ ತಾತಂದಿರ ಬವಣೆಯನ್ನು ಮರೆಯುತ್ತಾರೆಯೆ, ಕ್ಷಮಿಸುತ್ತಾರೆಯೆ? ಈ ಇಡೀ ಪ್ರಸಂಗವು ತುಚ್ಛವಾದ ಬೌದ್ಧಿಕ ಮತ್ತು ಶೈಕ್ಷಣಿಕ ಪ್ರಕ್ರಿಯೆ.

ಕ್ಯಾಲಿಫೋರ್ನಿಯಾದ ಪಠ್ಯಪುಸ್ತಕಗಳಲ್ಲಿ ಯಾವ ಬದಲಾವಣೆ ತರಬೇಕೆಂದು ಪ್ರಧಾನಿ ಮೋದಿಯವರ ಆಪ್ತ ಬುದ್ಧಿಜೀವಿಗಳು ಬಯಸುತ್ತಾರೆ? ಸಿಂಧು ನದಿ ನಾಗರಿಕತೆಯನ್ನು ಸಿಂಧು – ಸರಸ್ವತಿ ನಾಗರಿಕತೆ ಎಂದು ಕರೆಯಬೇಕಂತೆ. ಸರಸ್ವತಿಯು ಈಗ 'ಗುಪ್ತಗಾಮಿನಿ ನದಿ', ಆದರೆ ನಾಲ್ಕು ಸಾವಿರ ವರ್ಷಗಳ ಹಿಂದೆ ಅದರ ಪೋಷಣೆಯಿಂದ ನಮ್ಮ ನಾಗರಿಕತೆ ಮತ್ತು ಸಂಸ್ಕೃತಿ ವಿಕಾಸಗೊಂಡಿದ್ದಿತೆಂಬುದು ಆರೆಸ್ಸೆಸ್ ಇತಿಹಾಸಕಾರರ ಪುರಾವೆಗಳಿಲ್ಲದ ಸಿದ್ಧಾಂತ. ಆರ್ಯರು ಹೊರಗಿನಿಂದ ಬಂದವರಲ್ಲ, ಅವರು ಇಲ್ಲಿಯವರೇ, ಎಂಬುದು ಇನ್ನೊಂದು ಅಪಸಿದ್ಧಾಂತ. ವೇದಗಳಲ್ಲೆಲ್ಲೂ ಅವರು ಹೊರಗಿನಿಂದ ಬಂದವರೆಂದು ಹೇಳಿಲ್ಲವೆಂಬುದು ಅವರ ವಾದ. ಆದರೆ ಹೊರಗಿನಿಂದ ಬಂದವರೆಂಬ ಸ್ಮೃತಿಯು ಋಗ್ವೇದದಲ್ಲಿ ದಾಖಲಾಗಿದೆ, ಅದು ಅವರಿಗೆ ಕಾಣುವುದಿಲ್ಲ. ಅದೊಂದು ಬೌದ್ಧಿಕ ಜಾಣ ಕುರುಡು. ಹೊರಗಿನಿಂದ ಬಂದವರಾದರೆ ಅವರಿಗೆ ಅವಮಾನವಾಗುತ್ತದೆಯೆ? ಅಥವಾ, ಅವರನ್ನು ನಮ್ಮ ದೇಶದ ಮೇಲೆ ಆಕ್ರಮಣ ನಡೆಸಿದ ಮೊಟ್ಟಮೊದಲ ಕ್ರೂರಿಗಳು ಎಂದು ಕರೆಯ ಲಾಗುತ್ತದೆಂಬ ಅಂಜಿಕೆಯೆ? ಇನ್ನೊಂದು ತಗಾದೆ ಸ್ವಾರಸ್ಯವಾಗಿದೆ : ಪ್ರಾಚೀನ ಭಾರತದಲ್ಲಿ ವರ್ಣ ವ್ಯವಸ್ಥೆಯಿಂದಾಗಿ ದೇಶದ ವಿಶಾಲ ಸಮುದಾಯಕ್ಕೆ ಅಪಚಾರವೆಸಗಲಾಯಿತು ಎಂಬುದನ್ನು ಹೇಳ ಬಾರದಂತೆ. "ಜನರಿಗೆ ಅವರವರ ಬೌದ್ಧಿಕ ಮತ್ತು ತಾಂತ್ರಿಕ ಪರಿಣತಿಯ ಆಧಾರದ ಮೇಲೆ" ಸಮಾಜದಲ್ಲಿ ಸ್ಥಾನಗಳನ್ನು ನೀಡಲಾಗಿತ್ತು, ಎಂದು ಪುಸ್ತಕದಲ್ಲಿ ಹೇಳಬೇಕಂತೆ. ಇದಕ್ಕಿಂತಲೂ ಘೋರ ಸುಳ್ಳು ಇನ್ನೊಂದಿರಲಾರದು. ಹುಟ್ಟಿನಿಂದಲೇ ಕೆಲವರು ಶ್ರೇಷ್ಠರು, ಬೇರೆಯವರು ಕನಿಷ್ಠರು ಎಂಬುದು ನಮ್ಮ ದೇಶದಲ್ಲಿ ಮೂರು ಸಾವಿರ ವರ್ಷಗಳಿಂದ ಪ್ರಚಲಿತ ವಾಗಿರುವುದು ಅಗೋಚರವಲ್ಲ. ಆಪಸ್ತಂಭ ಧರ್ಮ ಸೂತ್ರದಲ್ಲಿ ಇದನ್ನು ಕುರಿತು ಹೇಳುವಾಗ "ತೇಷಾಂ (ಅಂದರೆ ಜನಸಮುದಾಯದಲ್ಲಿ) ಪೂರ್ವತಃ ಪೂರ್ವೇ ಜನ್ಮತಃ ಶ್ರೇಯಾನ್" ಎಂದು ದಾಖಲಿಸಲಾಗಿದೆ. ಅದು ಬೇರೆ ನೂರಾರು ಕಡೆಗಳಲ್ಲೂ ದಾಖಲಾಗಿದೆ. ಅದನ್ನು ಪುಸ್ತಕದಿಂದ ತೆಗೆದುಹಾಕಿ, ಅಂದಿನಿಂದಲೂ

*(೧೦ನೇ ಪುಟಕ್ಕೆ )*




## ವಾಸ್ತು ತಂದ ಸುಸ್ತು...

✉ ನಮ್ಮದು ಮಧ್ಯಮ ವರ್ಗದವರು ವಾಸಿಸಬಹುದಾದಂಥ ಸುಂದರ ಮನೆ. ಆ ಮನೆಯಲ್ಲಿ ನಾನು ನನ್ನ ಮಡದಿ ಹಾಗೂ ಮಕ್ಕಳೊಂದಿಗೆ ಕಷ್ಟ, ಸುಖ ಹಂಚಿಕೊಳ್ಳುತ್ತಾ ಸುಖವಾಗಿದ್ದೆವು. ಆದರೆ ಈ ದೂರದರ್ಶನ ಎಂಬ ಭೂತ ನಮ್ಮ ನೆಮ್ಮದಿಗೆ ಎಳ್ಳುನೀರು ಬಿಡುತ್ತಿದೆ. ಇತ್ತೀಚೆಗೆ ಈ ಹಾಳು ಸುಡುಗಾಡು ಟಿ. ವಿ.ಯಲ್ಲಿ ವಾಸ್ತು ಕುರಿತ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿದ್ದಾರೆ. ಈ ವಾಸ್ತು ಸಮಸ್ಯೆಯನ್ನು ಬಗೆಹರಿಸಲು ವಿವಿಧ ಮಾರ್ಗಗಳನ್ನು ತಿಳಿಸಿ ಖರ್ಚಿನ ಬಾಯಿಗೆ ನಮ್ಮನ್ನು ತಳ್ಳುವುದೇ ಅವರ ಕೆಲಸ ಅನ್ನಿಸುತ್ತೆ. ಏಕೆಂದರೆ ಇಂದಿನ ದಿನಗಳಲ್ಲಿ ಮನೆಕಟ್ಟುವುದರಲ್ಲಿ ಕಟ್ಟಿಸುವವನ ಜೇಬು ಖಾಲಿ ಆಗಿರುತ್ತದೆ. ಇಂತಹದರಲ್ಲಿ ಈ ವಾಸ್ತುವಿನವರ ಖರ್ಚಿನ ಪಟ್ಟಿಯ ಹೊರೆಯನ್ನು ಹೊರುವುದು ತ್ರಾಸದಾಯಕ. ಇರಲು ಮನೆ ಇದೆ. ಸ್ವಂತದ್ದು ನೆರಳಾಯಿತು ಎಂದು ಖುಷಿಪಡುವುದರೊಳಗೆ ವಾಸ್ತು ಎಂಬ ವಿಷಯ ಆಗಲೇ ಮನೆಯನ್ನು ಅಲ್ಲಾಡಿಸಲು ತಯಾರಾಗಿರುತ್ತದೆ.

ಹೋದ ಸೋಮವಾರ ನಮ್ಮ ಮಿತ್ರರೊಬ್ಬರ ಗೃಹಪ್ರವೇಶಕ್ಕೆ ನಾನು ಮತ್ತು ನನ್ನ ಮಡದಿ ಇಬ್ಬರು ಹೋಗಿದ್ದೆವು. ಹೊಸಮನೆ ನೋಡಿದ ನಾವು ಚೆನ್ನಾಗಿದೆ ಎನ್ನುತ್ತಾ ಮಿತ್ರನಿಗೆ ಎಷ್ಟು ಖರ್ಚು ಆತಪಾ ದೋಸ್ತ ಅಂದೆ. ಅದಕ್ಕೆ ಅವನು ಇಪ್ಪತ್ತಲಕ್ಷ ಆಯ್ತು ಹಾಳಾದ್ದು. ಈ ಮನೇನ ಯಾಕಾದ್ರು ಆ ಕಾಂಟ್ರ್ಯಾಕ್ಟರಿಗೆ ಕೊಟ್ಟನೊ ಅವನು ದೇವರ ಮನೆ ಮೇಲೆ ಅಟ್ಟ ಮಾಡಿಸಿದ್ದಾನೆ. ಇದನ್ನು ನೋಡಿದ ಎಲ್ಲರೂ ದೇವರ ಮನೆ ಮೇಲೆ ಅಟ್ಟಾನಾ ಇದ್ಯಾ ವಾಸ್ತು ಮೊದಲು ಆ ಅಟ್ಟ ತಗೀಸಿ ಅಂತಿದ್ದಾರೆ. ಗೆಳೆಯ ಅದಕ್ಕೆ ಬೇಜಾರಾಗಿದೆ ಎಂದ. ಅದಕ್ಕೆ ನಾನು ಮಿತ್ರನಿಗೆ ಅಲ್ಲೋ ನಾವು ದೇವರ ಬಳಿ ಯಾಕ ಹೊಕ್ಕೇವಿ ಹೇಳು ನೊಡೋಣ ಎಂದೆ. ಅವನು ಸ್ವಲ್ಪ ಹೊತ್ತು ಯೋಚಿಸಿ ಭಕ್ತಿಯಿಂದ ಪೂಜಿಸಿ ಬೇಡಿಕೊಳ್ಳಲು ಅಂದ. ಸರಿ ಬಿಡು ಹಾಗಾದರೆ ಯಾಕ ಚಿಂತಿ ಮಾಡ್ತೀಯಾ ಭಕ್ತರ ಎಲ್ಲಾ ಸಮಸ್ಯೆಗಳನ್ನು ಹೊರುವ ದೇವರಿಗೆ ನಿಮ್ಮ ಮನೆಯ ಅಟ್ಟ ಭಾರವಾಗುತ್ತದೆಯೇ ಎಂದೊಡನೆ, ಏನ್ ಮಾತ ಹೇಳಿದ್ಯೊ ಎಲ್ಲರೂ ಬರೀ ಹೆದರಿಸ್ತಾ ಇದ್ರು, ನಾನು ಈ ಮನೇನ ಒಳೇ ಕಟ್ಟಿಸ್ದ್ನೇ ಅನಿಸ್ತಿತ್ತು. ನಿನ್ನ ಮಾತುಗಳನ್ನು ಕೇಳಿ ಖುಷಿ ಆಯ್ತು. ಆದರೆ ನಿನ್ನ ಮಾತು ನಿಜ ಜಗದ ಭಾರ ಹೊತ್ತ ದೇವನಿಗೆ ನಮ್ಮ ಮನೆಯ ಅಟ್ಟ ಭಾರವಾಗಿಸಲಾಗದು ಎನ್ನುವ ಮಾತು ನನಗೆ ಖುಷಿ ನೀಡಿದೆ ಎನ್ನುತ್ತಾ ನನ್ನನ್ನು ತಬ್ಬಿ ನನ್ನ ಚಿಂತೆ ದೂರ ಮಾಡಿದೆ, ನಿನಗೊಂದು ಪಾರ್ಟಿ ಕೊಡುತ್ತೇನೆ ಎಂದು ಹೇಳಿ ಒಳಗಡೆ ಹೊರಟ.

*ಕೊಪ್ಪಳ* **ನಾಗರಾಜ ನಾಯಕ ಡಿ. ಡೊಳ್ಳಿನ**

ಸ್ಮಾರ್ಟ್ ಸಿಟಿ ಆಗುತ್ತಿರುವ ದಾವಣಗೆರೆ ಹಲವಾರು ಸಮಸ್ಯೆಗಳನ್ನು ಹೊಂದಿದೆ. ನಗರದ ಚಾಮರಾಜಪೇಟೆಯ ತರಕಾರಿ ಮಾರುಕಟ್ಟೆ, ಭಾಷಾನಗರ ಮತ್ತು ಕೊರಚರಹಟ್ಟಿ ಸ್ವಚ್ಛತೆ ಇಲ್ಲದೇ ಮರೀಚಿಕೆಯಾಗುತ್ತಿದೆ. ಮಾರುಕಟ್ಟೆಗೆ ಬಂದರೆ




ಸಾಕು ಅಲ್ಲಿನ ಸಾರ್ವಜನಿಕರ ಪರಿಸ್ಥಿತಿ ಅರಿವಾಗುತ್ತದೆ. ಸಾರ್ವಜನಿಕರು ಓಡಾಡಲು ಆಗದಷ್ಟು ಗಲೀಜಿದೆ. ಮಾರುಕಟ್ಟೆಯಲ್ಲಿರುವಂತಹ ಕಸವನ್ನು ಸರಿಯಾದ ರೀತಿಯಲ್ಲಿ ವಿಲೇವಾರಿ ಮಾಡುತ್ತಿಲ್ಲವಾದ್ದರಿಂದ ಅನೈರ್ಮಲ್ಯಕ್ಕೆ ಕಾರಣವಾಗಿದೆ. ಈ ಮಾರುಕಟ್ಟೆಗೆ ಪ್ರತಿದಿನ ಸಾವಿರಾರು ಜನರು ಬಂದು ತರಕಾರಿ ಖರೀದಿ ಮಾಡುತ್ತಾರೆ. ಅಲ್ಲಿನ ವಾತಾವರಣ ಶುದ್ಧವಾಗಿದ್ದರೆ ಸಾರ್ವಜನಿಕರ ಆರೋಗ್ಯವು ಉತ್ತಮವಾಗಿರುತ್ತದೆ. ಆದರೆ ಸ್ವಚ್ಛತೆ ಇಲ್ಲದಿದ್ದರೂ ಜನರು ತರಕಾರಿಯನ್ನು ಖರೀದಿಸುವುದು ಅನಿವಾರ್ಯವಾಗುತ್ತಿದೆ. ಹಾಗೂ ಭಾಷಾನಗರದಲ್ಲಿಯೂ ಸಹ ಎಲ್ಲೆಂದರಲ್ಲಿ ಕಸ ಇರುತ್ತದೆ. ಈ ಸ್ಥಳದಲ್ಲಿ ಯಾವಾಗ ನೋಡಿದರೂ ಸ್ವಚ್ಛತೆ ಇಲ್ಲದೆ ದುರ್ವಾಸನೆ ಬರುತ್ತದೆ. ಹಂದಿಗಳ ಹಾವಳಿಯಿಂದ ಈ ರೀತಿಯ ಪರಿಸ್ಥಿತಿ ಉಂಟಾಗುತ್ತಿದೆ. ಕೊರಚರಹಟ್ಟಿಯಲ್ಲಿಯು ಸಹ ಇದೇ ಪರಿಸ್ಥಿತಿ. ಏಕೆಂದರೆ ಇಲ್ಲಿಯು ಹಂದಿ ಸಾಕಣಿಕೆಯನ್ನು ಮಾಡುತ್ತಿದ್ದಾರೆ. ಅವರು ಸಾಕಣಿಕೆ ಮಾಡುತ್ತಿರುವುದರಿಂದ ಅನೇಕ ರೀತಿಯ ರೋಗ ರುಜಿನ ಬರುತ್ತದೆ. ಇದಕ್ಕೆ ದಾವಣಗೆರೆ ಮಹಾನಗರ ಪಾಲಿಕೆ ಈ ಸ್ಥಳದಲ್ಲಿರುವ ಈ ಸಮಸ್ಯೆಯನ್ನು ಬಗೆಹರಿಸಬೇಕು. ಮಾರುಕಟ್ಟೆ, ಭಾಷಾನಗರ ಮತ್ತು ಕೊರಚರಹಟ್ಟಿ ಹಾಗೂ ಇನ್ನಿತರೆ ಸ್ಥಳಗಳನ್ನು ಶುಚಿಯಾಗಿ ಇರುವಂತೆ ನಿಗಾವಹಿಸಬೇಕು.

*ಕಕಕಕಕ* **ರವಿಕುಮಾರ್**

ಎಸ್.ಎಸ್.ಎಲ್.ಸಿ. ಹಾಗೂ ಪಿ.ಯು.ಸಿ. ಮುಗಿಸಿಕೊಂಡು ಪೊಲೀಸ್ ಇಲಾಖೆಗೆ ಬರುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಡಬ್ಬಲ್ ಡಿಗ್ರಿ, ಸ್ನಾತಕೋತ್ತರ ಪದವಿ ಮತ್ತು ಬಿ.ಎಡ್. ಎಮ್.ಎ ಮಾಡಿದರೂ ಕೂಡ ಪೊಲೀಸ್ ಇಲಾಖೆ ಸೇರಿ ಕೊಳ್ಳುತ್ತಿದ್ದಾರೆ. ಈ ಇಲಾಖೆಯಲ್ಲಿ ಆರ್ಥಿಕವಾಗಿ ಹಿಂದುಳಿದ ಬಡವರ ಮಕ್ಕಳೆ. ಆದ್ದರಿಂದ ಇತ್ತೀಚಿನ ದಿನಗಳಲ್ಲಿ ಎಲ್ಲ ವಿದ್ಯಾರ್ಥಿಗಳಿಗೆ ಮೂಲಭೂತವಾಗಿ ಕಾಡುತ್ತಿರೊ ಸಮಸ್ಯೆನೇ ನಿರುದ್ಯೋಗ. ಈಗಿನ ವಿದ್ಯಾರ್ಥಿಗಳು ಅವರ ಓದಿನ ಮಟ್ಟಕ್ಕೆ ಕೆಲಸ ಸಿಗುತ್ತಿಲ್ಲವಾದ್ದರಿಂದ ಜವಾನನ ಕೆಲಸ ಸಿಕ್ಕಿದರೂ ಅದು ಸರ್ಕಾರದ ಕೆಲಸ ಆಗಿರಬೇಕು ಅಂತ ಆಸೆಪಡುತ್ತಾರೆ. ಆದ್ದರಿಂದ ಕೆಳ ಹಂತದಲ್ಲಿ ಉದ್ಯೋಗ ಸಿಕ್ಕರೂ ಅವರ ಪ್ರತಿಭೆಗೆ ಓದಿಗೆ ತಕ್ಕಂತೆ ಕೆಲಸ ಸಿಗೋಲ್ಲ.

*ಹೊಸದುರ್ಗ* **ನಿರ್ಮಲ ಟಿ.**

## ಚರಿತ್ರೆಯಿಂದ ಎದುರಿಸುವ ಸವಾಲುಗಳು

ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದ ಸದ್ಯದ ಪರಿಸ್ಥಿತಿಯಲ್ಲಿ ಚರಿತ್ರೆಯ ಕುರಿತು ಮಾತನಾಡುವುದು ಬರೆಯುವುದು ಅತ್ಯಂತ ಅಪಾಯಕಾರಿ ಎಂಬ ಭಾವನೆ ಬಹಳ ಜನರಲ್ಲಿ ಕಾಣಿಸಿಕೊಳ್ಳುತ್ತಿದೆ. ಆದರೆ ಸಾಮಾಜಿಕ ಹೊಣೆಗಾರಿಕೆಯುಳ್ಳ ಲೇಖಕ, ಸಂಶೋಧಕ, ವಿಚಾರವಂತ, ವಿದ್ಯಾರ್ಥಿ ತೆಪ್ಪಗೆ ಕೂತುಕೊಳ್ಳುವುದು ಹೇಡಿತನವಾಗುತ್ತದಲ್ಲದೆ ಅದು ಪ್ರಜ್ಞಾವಂತ ನಾಗರಿಕನ ಲಕ್ಷಣವೂ ಅಲ್ಲ. ಹೀಗಿರುವಾಗ ಚರಿತ್ರೆಯ ಸತ್ಯಾಸತ್ಯತೆಯನ್ನು ಚಿಂತಕನಾದವನು ವಿಚಾರವಂತನಾದವನು ತೆರೆದಿಡಲೇ ಬೇಕಾದದ್ದು ಸಾಮಾಜಿಕ ದೃಷ್ಟಿಯಿಂದ ಅತ್ಯವಶ್ಯಕವೆನಿಸುತ್ತದೆ.

ಭಾರತ ಹಲವು ವರ್ಷಗಳ ಕಾಲ ರಾಜಮಹಾರಾಜರ ಆಳ್ವಿಕೆಗೊಳಪಟ್ಟ ದೇಶ ಇಂದು ಈ ಭರತಖಂಡದಲ್ಲಿ ಅಂದಿನ ರಾಜರಾದರ್ಶಗಳ ಹೆಸರಿನಲ್ಲಿಯೂ ಅಲ್ಲದೆಯೂ ಕೋಮುಗಲಭೆಗಳು ನಡೆಯುತ್ತಿವೆ ಎಂಬುವುದು ಇತಿಹಾಸದ ಕುರಿತು ಇರುವ ವ್ಯಾಜ್ಯ ತಿಳುವಳಿಕೆಗೆ ಹಿಡಿದ ಕೈಗನ್ನಡಿಯಾಗಿದೆ. ಸತ್ಯಾಂಶವನ್ನು ತಿಳಿಯದೆ ಕೆಲವರು ಹುಚ್ಚು ಸಾಹಸಗಳಿಗಿಳಿದು ಕೆಲವರು ಸತ್ಯಾಂಶವನ್ನು ತಿಳಿದು ತಮ್ಮ ಬಯಕೆಯನ್ನು ಪೂರೈಸಿಕೊಳ್ಳಲು ಗತಕಾಲದ ರಾಜ ಮಹಾಶಯರನ್ನು

ಉಪಯೋಗಿಸಿಕೊಳ್ಳುತ್ತಿರುವುದು ಕೋಮುಸಂಘರ್ಷಗಳಿಗೆ ಸುಗಮವಾದ ಹಾದಿಯನ್ನು ಹಾಯಿಸುತ್ತಿದೆ.

ಚರಿತ್ರೆಯಲ್ಲಿ ಘಟಿಸಿದ ಹಿಂದು, ಮುಸ್ಲಿಂ ರಾಜರ ಸಂಘರ್ಷವು ಧಾರ್ಮಿಕ ಕಾರಣದಿಂದ ನಡೆದದ್ದಲ್ಲ ಎಂಬ ವಿಚಾರವಂತ ನಿಲುವನ್ನು ಸಮರ್ಥಿಸುವೆಡೆಗೆ ಹೆಚ್ಚಾಗಿ ಗಮನ ಹರಿಸಲಾಗಿದೆ. ಟಿಪ್ಪು ಸುಲ್ತಾನ್, ಛತ್ರಪತಿ ಶಿವಾಜಿ ಮುಂತಾದ ಶ್ರೇಷ್ಠ ರಾಜರ ಆಡಳಿತ ಕ್ರಮಗಳನ್ನು ಹೇಳಿ ಭಾರತದ ಹಲವು ಪ್ರದೇಶಗಳಲ್ಲಿ ಕಚ್ಚಾಟಗಳೂ ಗಲಭೆಗಳು ನಡೆಯುತ್ತಿರುವುದು ಪ್ರಸ್ತುತ ಚಲನ ವಲನಗಳಿಂದ ಅರ್ಥೈಸಿಕೊಳ್ಳಬಹುದಾದ ಸಂಗತಿಯಷ್ಟೇ ಇದಕ್ಕೆ ಕಾರಣವೇನು? ಹಾಗಾದರೆ ನಿಜವಾಗಿಯೂ ಈ ರಾಜರು ಮಾಡಿದ್ದೇನು? ಇವರ ಆಡಳಿತ ಹೇಗಿತ್ತು? ಇವರ ಕಾಲದಲ್ಲಿ ಧಾರ್ಮಿಕ ಕಾರಣಗಳಿಂದ ಸಂಘರ್ಷಗಳು ನಡೆದಿವೆಯೇ? ಮೊದಲು ನಾವು ಇದಕ್ಕೆಲ್ಲಾ ಉತ್ತರವನ್ನು ಹುಡುಕಿಕೊಳ್ಳಬೇಕಾಗಿದೆ.

ಭಾರತದಲ್ಲಿಂದು ಚರಿತ್ರಾರ್ಹವಾಗಿ ಎಲ್ಲ ರಾಜರುಗಳ ಜಯಂತಿಯನ್ನು ಆಚರಿಸುವುದಿಲ್ಲವಾದರೂ ಕೆಲವರ ಜಯಂತಿಯನ್ನು ಮಾತ್ರ ಉದ್ದೇಶಪೂರ್ವಕವಾಗಿಯೇ ನಡೆಸಲಾಗುತ್ತಿದೆ. ಇದರಲ್ಲಿ ಇಲ್ಲಿಯವರೆಗೆ ಹೆಚ್ಚಾಗಿ ಗಮನಿಸಲ್ಪಟ್ಟ, ಚರ್ಚಿಸಲ್ಪಟ್ಟ, ತರ್ಕತಕರಾರುಗಳಿಗೆ ಎಡೆ ಮಾಡಿದ ಹುಟ್ಟು ಹಬ್ಬದ ಕಾರ್ಯ ಕ್ರಮಗಳೆಂದರೆ ಟಿಪ್ಪು ಜಯಂತಿ ಮತ್ತು ಶಿವಾಜಿ ಜಯಂತಿ.

*ಕೊಡಗು* ***ಶೌಕತ್ ಅಲಿ***

'ಹೊಸತು' ಪತ್ರಿಕೆಯ ನವೆಂಬರ್ ತಿಂಗಳಿನ ಸಂಚಿಕೆಯು ರಷ್ಯಾದ 'ಅಕ್ಟೋಬರ್ ಕ್ರಾಂತಿ'ಗೆ ಮೀಸಲಾಗಿರುವುದು ಸೂಕ್ತವಾಗಿದೆ. ಅಕ್ಟೋಬರ್ ಕ್ರಾಂತಿಯ ನಂತರ ರೂಪುಗೊಂಡ ಸೋವಿಯತ್ ಗಣರಾಜ್ಯಗಳ ಸಮಾಜವಾದಿ ಒಕ್ಕೂಟ, ಚರಿತ್ರೆಯ ಪುಟಗಳನ್ನು ಸೇರಿದ್ದರೂ, ಸುಮಾರು ಏಳು ದಶಕಗಳ ಕಾಲ ಅಮೆರಿಕ ಮುಂತಾದ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಆಕ್ರಮಣಕಾರಿ, ದಮನಕಾರಿ ನೀತಿಗಳಿಗೆ ಮತ್ತು ಚಟುವಟಿಕೆಗಳಿಗೆ ಪ್ರತಿರೋಧವನ್ನು ಒಡ್ಡಿರುವುದು ಐತಿಹಾಸಿಕ ಸತ್ಯ. ಅಕ್ಟೋಬರ್ ಕ್ರಾಂತಿಯು ೨೦ನೇ ಶತಮಾನದ ಪೂರ್ವಾರ್ಧ ಭಾಗದಲ್ಲಿ ಘಟಿಸಿದ ಮಹತ್ತರ ಘಟನೆಯೆಂದು ಪರಿಗಣಿಸಬಹುದು. ಅನೇಕ ವಸಾಹತು ದೇಶಗಳಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮಗಳಿಗೆ ಪ್ರೇರಣೆಯನ್ನು ಅಕ್ಟೋಬರ್ ಕ್ರಾಂತಿ ನೀಡಿತು.

ಡಾ॥ ಬಿ. ಆರ್. ಮಂಜುನಾಥ್, ತಮ್ಮ ಲೇಖನದಲ್ಲಿ ಅಕ್ಟೋಬರ್ ಕ್ರಾಂತಿಯ ಅನೇಕ ಮಹತ್ವದ, ಚಾರಿತ್ರಿಕ ಘಟ್ಟಗಳನ್ನು ವಿಸ್ತಾರವಾಗಿ ಮೂಡಿಸಿದ್ದಾರೆ. ಅಕ್ಟೋಬರ್ ಕ್ರಾಂತಿ, ನಂತರದ ಚಾರಿತ್ರಿಕ ಹಿನ್ನೆಲೆಯಲ್ಲಿ ಸಮಾಜವಾದಿ ರಾಷ್ಟ್ರವನ್ನು ನಿರ್ಮಿಸುವ ಹಾದಿಯಲ್ಲಿ ಲೆನಿನ್ ಎದುರಿಸಿದ ಸಮಸ್ಯೆಗಳು ಅತ್ಯಂತ ಗುರುತರವಾಗಿದ್ದವು. ಬಂಡವಾಳಶಾಹಿ ರಾಷ್ಟ್ರಗಳು ಪ್ರಕಟಿಸಿದ ವಿರೋಧ, ಅಸಹಕಾರಗಳ ನಡುವೆಯೂ ಸೋವಿಯತ್ ರಾಷ್ಟ್ರ ಎದ್ದು ನಿಲ್ಲಬೇಕಾಗಿತ್ತು.

ಡಾ॥ ಎಸ್. ಚಟರ್ಜಿಯವರ ಲೇಖನ, ಲೆನಿನ್‌ರವರ ಸಮರ್ಥ ನಾಯಕತ್ವ, ಸಂಘಟನಾ ಚಾತುರ್ಯ, ಕಾರ್ಯಕ್ಷಮತೆಗಳನ್ನು ವಿವರಿಸಿದೆ. ಮನೋವಿಜ್ಞಾನಿ ಪಾವ್ಲೋವ್, ಕಮ್ಯುನಿಸ್ಟ್ ವಿರೋಧಿ ಎಂದು ತಿಳಿದಿದ್ದರೂ, ಲೆನಿನ್‌ರವರು ದೇಶದ ವೈಜ್ಞಾನಿಕ ಪ್ರಗತಿಗೆ, ಅವರ ಸಹಾಯ ಕೋರಿದ್ದು, ಮನನೀಯ ಸಂಗತಿಯಾಗಿದೆ. ಇತರ ಲೇಖನಗಳು ಕೂಡ 'ಅಕ್ಟೋಬರ್ ಕ್ರಾಂತಿ'ಯ ಯಶಸ್ಸಿಗೆ ಕಾರಣವಾದ ಸೈದ್ಧಾಂತಿಕ ಸಂಘರ್ಷ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರ ತ್ಯಾಗ, ಪರಿಶ್ರಮ ಕಾರ್ಮಿಕ ವರ್ಗ ರೈತಾಪಿ ವರ್ಗ ಮತ್ತು ಶೋಷಿತ ಜನತೆಯ ಹೋರಾಟದ ಹಂತಗಳನ್ನು ಮತ್ತು ಕ್ರಾಂತಿಯ ರೋಮಾಂಚಕ ಸನ್ನಿವೇಶಗಳನ್ನು ಓದುಗರಿಗೆ ತಲುಪಿಸಿವೆ.

*ಬೆಂಗಳೂರು* ***ಶಂಕರ ನಾರಾಯಣ***

## ತುಳುನಾಡಿನ ಗುತ್ತು

ಕಾವ್ಯಲೋಕ

ತುಳುನಾಡಿನ ಗುತ್ತು
ಗುತ್ತಿಗೆಯ ಸೊತ್ತು
ಬಂಟನ ಗತ್ತು
ಪರರಿಗದು ಕುತ್ತು
ಜೀತವ ಬಿತ್ತು
ಸಮಾಜವ ಹಿಡಿದಿತ್ತು
ದೈವವ ಮಧ್ಯ ತಂದಿತ್ತು
ಜನಧ್ವನಿಯ ಕಿತ್ತಿತ್ತು
ಗುತ್ತೊಳಗೆ ಭಾರಿ ಗಮ್ಮತ್ತು
ಕಾಲ ಬದಲಾಯ್ತು
ಗುತ್ತಿಗೆ ಎದುರಾಯ್ತು ಆಪತ್ತು
ಗುತ್ತೊಳಗಿಲ್ಲ ಸಂಪತ್ತು
ಕಳೆದುಕೊಂಡಿತ್ತು ಗತ್ತಿನ ಜಗತ್ತು
ಗುತ್ತು ಮಂಕಾಯ್ತು ಈ ಹೊತ್ತು
ಜನರಿಗದೇ ಬೇಕಾಗಿತ್ತು
ಇಂದು ಗುತ್ತಿಗಿಲ್ಲ ಕೀಮತ್ತು
ಅಂದಿನ ಗುತ್ತಿಗೆಯ ಸೊತ್ತು
ಇಂದಾಗಿದೆ ವಸ್ತುಸಂಗ್ರಹಾಲಯದ ವಸ್ತು
ಇದು ನಿಸರ್ಗದ ತಾಕತ್ತು
ಅದೇ ಕಾಲಚಕ್ರದ ನಿಯತ್ತು

**ಡಾ॥ ಮೋಹನ್‌ಕೃಷ್ಣ ರೈ**
ಪ್ರಾಧ್ಯಾಪಕರು, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

*(ಈ ತಿಂಗಳು ೭ನೇ ಪುಟದಿಂದ)*

ನಮ್ಮದು ಸಮ-ಸಮಾಜವಾಗಿಯೇ ಇದೆಯೆಂದು ತುತ್ತೂರಿ ಊದಿದರೆ ಅಸಮಾನತೆಯ ಕ್ರೌರ್ಯಕ್ಕೆ ತುತ್ತಾಗಿದ್ದವರಿಗೆ ಹಾಲು ಕುಡಿದಷ್ಟು ತೃಪ್ತಿ ಉಂಟಾಗುತ್ತದೆಯೆ?

ಅಮೆರಿಕಾದಲ್ಲಿರುವ ದಲಿತ ಮತ್ತು ಸಿಖ್ಖರ ಕೆಲವು ಗುಂಪುಗಳು ಇಂತಹ ಶುದ್ಧ ಸುಳ್ಳಿನ ಕಂತೆಯ ಇತಿಹಾಸವನ್ನು ವಿದ್ಯಾರ್ಥಿಗಳ ಮೇಲೆ ಹೇರುವುದು ಉಚಿತವಲ್ಲ ಎಂದು ಆಕ್ಷೇಪ ಎತ್ತಿದ್ದಾರೆ. ಅವರಲ್ಲಿ ದಲಿತ ಪ್ರಮುಖ ತೆನ್ಮೊಳಿ ಸೌಂದರರಾಜನ್ ಎಂಬ ವ್ಯಕ್ತಿ "ಮೋದಿಯವರ ಹಿಂದುತ್ವ ಮತ್ತು ಟ್ರಂಪ್‌ನ ಬಿಳಿವರ್ಣದವರ ಶ್ರೇಷ್ಠತೆ" ವಾದಗಳು ಒಂದಕ್ಕೊಂದು ಅಂಟಿಕೊಂಡಿವೆ ಎಂದಿದ್ದಾರೆ. ಹಿಂದಿನ ಪಠ್ಯಪುಸ್ತಕಗಳಲ್ಲಿ ಸಿಖ್ ಪಂಥದ ಗುರುನಾನಕ್ ಅವರು ವರ್ಣ ವಿಭಜನೆಯನ್ನು ಧಿಕ್ಕರಿಸಿದ ಸಮಾಜ ಸುಧಾರಕರು ಎಂದು ಹೇಳಲಾಗಿತ್ತು; ಅದನ್ನು ತೆಗೆದುಹಾಕಬೇಕೆಂದು ಈಗಿನ ಹಿಂದುತ್ವ ಇತಿಹಾಸ ವಿದ್ವನ್ಮಣಿಗಳ ವಾದವಾಗಿದೆ. ಗಾಂಧೀಜಿಯನ್ನು 'ಭಾರತದ ಒಬ್ಬ ಮಹಾನ್ ನಾಯಕ' ಎಂದು ದಾಖಲಿಸುವ ಬದಲು ಅವರು 'ಭಾರತದ ಮಹಾನ್ ಹಿಂದು ನಾಯಕ' ಎಂದು ತಿದ್ದಿ ಬರೆಯಬೇಕೆಂಬ ಆಗ್ರಹ ಬಂದಿದೆ. ಇತ್ತೀಚಿನ ಇನ್ನೊಂದು ವರದಿಯ ಪ್ರಕಾರ ಭಾರತೀಯ ವೃಂದದ ಕೆಲವರ ಹುನ್ನಾರಕ್ಕೆ ಮಣಿದು ಅವರಿಚ್ಛೆಯಂತೆ ಪುಸ್ತಕಗಳಲ್ಲಿ "ಹೊಸ" ಇತಿಹಾಸವನ್ನು ತುಂಬಿಸಿದ್ದಾರೆ. ಆಯ್ಕೆಯಾದ ಆ ಪಠ್ಯಪುಸ್ತಕವನ್ನು ಖಾಸಗಿ ಪ್ರಕಾಶನ ಸಂಸ್ಥೆಯೊಂದು ಪ್ರಕಟಿಸಲಿದೆ.

ಇತಿಹಾಸದ ಪರಿಧಿಯಲ್ಲಿ ಒಂದು ಸತ್ಯವಿದೆ : ನಾವೇನಿದ್ದರೂ ಇಂದಿನ ಮತ್ತು ಮುಂದಿನ ಇತಿಹಾಸವನ್ನು ಬರೆಯುವವರಾಗಬಹುದೇ ವಿನಾ ಹಿಂದಿನ ಇತಿಹಾಸವನ್ನು ಇಲ್ಲವಾಗಿಸಲಾರೆವು, ಎಂಬುದು ಆ ಸತ್ಯ. "ನೋಟು ರದ್ದತಿಯಿಂದ ಜನ ಕಂಗಾಲಾದರು" ಎಂದು ಪುಸ್ತಕದಲ್ಲಿ ಬರೆಯದಿದ್ದರೂ ಜನಕ್ಕೆ ಅದು ಅನುಭವದಿಂದ ದಕ್ಕಿದ ಸತ್ಯವಾಗಿರುತ್ತದೆ. ಹಿಂದಿನ ಇತಿಹಾಸವನ್ನು ಅಷ್ಟು ಸುಲಭವಾಗಿ ಬದಲಾಯಿಸಲು ಸಾಧ್ಯವಾಗುವುದಾದರೆ "ಭಾರತದ ಮೇಲೆ ಇಸ್ಲಾಂ ಮತಸ್ಥರಿಂದ ಮತ್ತು ಯೂರೋಪಿನ ವಸಾಹತು ಒಡೆಯರಿಂದ ಧಾಳಿ ಎಂದೂ ನಡೆಯಲಿಲ್ಲ" ಎಂದು ಬರೆದುಕೊಂಡು ನಿದ್ದೆ ಮಾಡಬಹುದಲ್ಲವೆ? ಇಂತಹ ಕೋಡಂಗಿತನವು ನಮ್ಮ ದೇಶದ ಇತಿಹಾಸಕ್ಕೆ ಮತ್ತು ವಿದ್ವತ್ತಿಗೆ ಶೋಭೆ ತರುವುದಿಲ್ಲ, ಬದಲಾಗಿ ಅವುಗಳ ಮೇಲೆ ಗೂಬೆ ಕೂಡಿಸಿದಂತಾಗುತ್ತದೆ.



## ಭಗವದ್ಗೀತೆ : ಒಂದು ಅವಲೋಕನ

# ೧೫. ಎಲ್ಲಾ ಮೂರು ತರಗತಿಯವು

**"ಗೀತೆಯಲ್ಲಿ ಏನಿಲ್ಲ ?" ಎಂಬ ಉದ್ಗಾರ ಎತ್ತುವವರು ಅದರಲ್ಲಿರುವುದನ್ನೆಲ್ಲಾ ಪರಿಭಾವಿಸಿಕೊಂಡಿರುತ್ತಾರೆಯೇ ಎಂಬ ಕುತೂಹಲವು ಅಸಹಜವಲ್ಲ. ಸಮಯವನ್ನು ಕ್ಲುಪ್ತವಾಗಿ ಹಂಚಿಕೊಂಡು ಗರಿಷ್ಠ ಲಾಭ ಪಡೆಯುವುದು, ಉದ್ಯಮವನ್ನು ಲಾಭದಾಯಕವಾಗಿ ಮುನ್ನಡೆಸಲು ಸೂಕ್ತ ಮಾರ್ಗದರ್ಶನ ಪಡೆಯುವುದು, ಶಾಂತಸ್ವಭಾವವನ್ನು ಬೆಳೆಸಿಕೊಳ್ಳಲು ಮಾರ್ಗೋಪಾಯಗಳನ್ನು ತಿಳಿಯುವುದು, ಮುಂತಾದ ಐಹಿಕ ಲಾಭಗಳನ್ನು ಪಡೆಯಲು ಗೀತೆಯನ್ನು ಆಶ್ರಯಿಸಬಹುದೆಂದು ಈಚಿನ ಕೆಲವು ವ್ಯಾಖ್ಯಾನಗಳು ಬಂದಿವೆ. ಅವಾವುದನ್ನು ನಿರಾಕರಿಸುವ ಅಗತ್ಯ ಇಲ್ಲ. ಈ ಸ್ವಾಗತಾರ್ಹ ಕ್ರಮಗಳನ್ನಲ್ಲದೆ ಸಾಮಾಜಿಕ ಅನಾರೋಗ್ಯವಾದ ಕೆಲವು ಪ್ರಮೇಯಗಳನ್ನು ಸಹ ಗೀತೆಯು ಬಿತ್ತರಿಸಿದೆ. ಅದು ತೆಗಳಿಕೆಯ ಮಾತಲ್ಲ, ಕೇವಲ ವಿವರಣಾತ್ಮಕವಾದೊಂದು ನಿರ್ಣಯ. ತಾರ್ಕಿಕತೆಯು ಗೀತೆಗೆ ಅನಿವಾರ್ಯವಾದ ಚಿಂತನಾ ಸಾಧನವಲ್ಲ, ಏಕೆಂದರೆ ಅದು ಮತಧಾರ್ಮಿಕ ಸಂಹಿತೆ, ಮತಧರ್ಮವು ಸಾಮಾಜಿಕ ಮತ್ತು ಸಾಂಸ್ಕೃತಿಕ ಏರುಪೇರುಗಳನ್ನು ತಿರಸ್ಕಾರ ಯೋಗ್ಯವೆಂದು ಭಾವಿಸಿಲ್ಲ.**

**ಜಿ. ರಾಮಕೃಷ್ಣ**

ಗೀತೆಯ ಹದಿನಾರನೆಯ ಅಧ್ಯಾಯವು ಮುಕ್ತಾಯವಾಗುವುದು "ಮಾಡಬೇಕಾದ್ದು ಮತ್ತು ಮಾಡಬಾರದ್ದು ಯಾವುದು ಎಂಬುದಕ್ಕೆ ಶಾಸ್ತ್ರವೇ ಪ್ರಮಾಣ" ಎಂದು ಹೇಳುವುದರಿಂದ, ಯುದ್ಧ ಮಾಡಬೇಕೆಂದು ಯಾವ ಶಾಸ್ತ್ರ ಹೇಳಿದೆಯೋ ತಿಳಿಯದು, ಆದರೆ ಸಾಮಾಜಿಕ ವಿಂಗಡಣೆಯನ್ನು ಕಟ್ಟುನಿಟ್ಟಾಗಿ ವಿಧಿಸುವ ಶಾಸ್ತ್ರವಂತೂ ಇದೆ. ಸಮಾಜವು ಬದಲಾದರೂ ಶಾಸ್ತ್ರ ಬದಲಾಗುವುದಿಲ್ಲ, ಏಕೆಂದರೆ ಹೊಸ ಶಾಸ್ತ್ರವನ್ನು ಬರೆದಿಡಬೇಕೆಂಬ ತವಕ ಯಾರಿಗೂ ಇಲ್ಲ. ಶಾಸ್ತ್ರದಲ್ಲಿ ಏನೇ ಇರಲಿ, ಕೆಲವು ನಡತೆಗಳು ಮತ್ತು ಆಚರಣೆಗಳು ಭಿನ್ನವಾಗಿರುವುದನ್ನು ನಾವು ಕಾಣುತ್ತಲೇ ಇದ್ದೇವೆ. ಆದರೂ ಶಾಸ್ತ್ರಕ್ಕೆ ನೀಡಬೇಕೆಂದು ಹೇಳಲಾಗುವ ಮಾನ್ಯತೆಯು ಹಾಗೇ ಉಳಿದಿರುವುದು ವಿಶೇಷ. ಈ ಶಾಸ್ತ್ರವನ್ನು ಹಾಗೆ ಬರೆದಿಡುವಾಗ ಜನಾಭಿಪ್ರಾಯವನ್ನು ಪಡೆದ ಬಗ್ಗೆ ಎಲ್ಲೂ ದಾಖಲೆಗಳಿಲ್ಲ. ಶಾಸ್ತ್ರ ಮತ್ತು ಶಸ್ತ್ರ, ಎರಡನ್ನೂ ಬಳಸಿ ಜನರ ತಥಾಕಥಿತ ಸಮ್ಮತಿ ಪಡೆದುಕೊಂಡುಬಿಡುತ್ತಾರೆ. ಸಾಮಾಜಿಕ ಅಂತಸ್ತು ಪಲ್ಲಟವಾಗಕೂಡದೆಂಬ ಏಕೈಕ ಉದ್ದೇಶವನ್ನು ಶಾಸ್ತ್ರವು ಹೇಗೋ ಅಂತೂ ನಿಭಾಯಿಸಿಕೊಂಡು ಬಂದಿದೆ. ಅದು ವ್ಯಾವಹಾರಿಕವಾಗಿ ಪಲ್ಲಟ ಹೊಂದಿದರೂ "ಯಾವುದು ಸರಿ" ಎಂಬ ಪ್ರಶ್ನೆ ಬಂದಾಗ ವ್ಯವಹಾರಕ್ಕಿಂತಲೂ ಶಾಸ್ತ್ರಕ್ಕೆ ಹೆಚ್ಚಿನ ಪ್ರಾಶಸ್ತ್ಯವಿರುವುದೊಂದು ಕುಚೋದ್ಯ.

ಎಲ್ಲ ಶಾಸ್ತ್ರಗ್ರಂಥಗಳೂ ಒಂದೇ ತತ್ವವನ್ನು ಹೇಳದಿರುವುದರಿಂದ ಸ್ವಲ್ಪ ಕ್ಷೇಮಕ್ಕೆ ಅವಕಾಶವಿದೆ. ಕಟ್ಟುನಿಟ್ಟಾದ ವರ್ಣ ವಿಭಜನೆಯನ್ನು ತಿರಸ್ಕರಿಸಿದವರನ್ನು ಗೀತೆಯು ಹದಿನಾರನೆಯ ಅಧ್ಯಾಯದಲ್ಲಿ ತೀವ್ರವಾಗಿ ದೂಷಿಸಿರುವುದು ಆ ಕಾರಣದಿಂದ. ಏಕೆಂದರೆ, ಅವರು ಉಚ್ಚವರ್ಣದವರು ಬರೆದಿಟ್ಟ ಶಾಸ್ತ್ರವನ್ನು ನಿರಾಕರಿಸಿ ತಮ್ಮ ಶಾಸ್ತ್ರವನ್ನು ಬರೆದುಕೊಂಡರು, ಅದರಂತೆ ನಡೆಯಹೊರಟರು. ಮನು ತನ್ನ ಶಾಸ್ತ್ರದಲ್ಲಿ ಹೇಳಿಕೊಂಡಿದ್ದ, "ನಾಸ್ತಿಕರೊಡನೆ ಮತ್ತು ನಾಲ್ಕು ವರ್ಣಗಳ ವಿಭಜನೆಯನ್ನು ಆದರಿಸದವರೊಡನೆ ಸಂಭಾಷಣೆ ಸಹ ಕೂಡದು", ಎಂದು. ಲೋಕಾಯತರನ್ನು ಎಷ್ಟು ಹಂಗಿಸಲು ಸಾಧ್ಯವೋ ಅಷ್ಟನ್ನು ನಮ್ಮ "ಶಾಸ್ತ್ರ"ಗಳೆಲ್ಲಾ ಮಾಡಿವೆ. ಅವರ ವಾದಗಳಲ್ಲಿ ಎಳ್ಳಷ್ಟೂ ಸುಸಂಬದ್ಧತೆ ಇರುವುದಿಲ್ಲ ಎಂದು ಲೋಕಾಯತರನ್ನು ಟೀಕಿಸಲು, "ಶುಕ್ರನೀತಿಸಾರ" ಎಂಬ ಗ್ರಂಥವು ಲೋಕಾಯತರು ಮುಂದಿಡುತ್ತಾರೆಂದು ಒಂದು ಬಾಲಿಶ ತರ್ಕವನ್ನು ಉಲ್ಲೇಖಿಸಿದೆ : "ಕಾಗೆಯು ಬೆಳ್ಳಗಿದೆ, ಏಕೆಂದರೆ ಅದರ ಮೂಳೆಗಳು ಬೆಳ್ಳಗಿವೆ." ಗೀತೆಯು "ಆಸುರೀ ಭಾವ"ವನ್ನು ನಿರೂಪಿಸಿರುವುದು ಇಂತಹ ಪೇಲವ ತರ್ಕಕ್ಕಿಂತಲೂ ಉತ್ತಮಿಕೆಯನ್ನೇನೂ ಹೊಂದಿಲ್ಲ.

ಹದಿನೇಳನೆಯ ಅಧ್ಯಾಯದಲ್ಲಿ ಗೀತೆಯು ತರ-ತಮಗಳ ಇನ್ನೊಂದು ಮಜಲನ್ನು ನಮಗೆ ಪರಿಚಯಿಸುತ್ತದೆ. ಅದರ ಮೂಲೋದ್ದೇಶವು ಎರಡು ವಿಧವಾದುದೆಂದು ಬಗೆಯಬಹುದು : (ಅ) ಶಾಸ್ತ್ರ ಸಮ್ಮತವಾದದ್ದು ಸಹಜವಾಗಿಯೇ ಶ್ರೇಷ್ಠವಾಗಿಯೂ ಇರುತ್ತದೆಂದು ಪ್ರತಿಪಾದಿಸುವುದು, ಮತ್ತು (ಆ) ಶಾಸ್ತ್ರವನ್ನು ಪರಿಗಣನೆಗೆ ತೆಗೆದುಕೊಳ್ಳದಿದ್ದರೂ ಸಹ, ಯಾವುದೇ ವಿಷಯದಲ್ಲಿ ಹಲವು ಆಯ್ಕೆಗಳಿರುವ ಸಂಭವ ಇರುವಾಗ ಉತ್ತಮ ಆಯ್ಕೆ ಯಾವುದು ಎಂಬುದನ್ನು ನಿರೂಪಿಸುವುದು. ಗೀತೆಯು ಇದರ ನಿರೂಪಣೆ ಮಾಡಲು ಒಂದು ಪ್ರಶ್ನೆಯನ್ನು ಹಾಕಿಕೊಳ್ಳುತ್ತದೆ: ಶಾಸ್ತ್ರವನ್ನು ಪ್ರಜ್ಞಾಪೂರ್ವಕವಾಗಿ ನಿರಾಕರಿಸದಿದ್ದರೂ ಅನೇಕರು ಸೋಮಾರಿತನದಿಂದಲೋ ಅಥವಾ ಬೇರಾವುದೋ ಕಾರಣದಿಂದಲೋ ಶಾಸ್ತ್ರದ ವಿಧಿಗೆ ಅಂಟಿಕೊಳ್ಳದೆ ಅಂತೂ ಸ್ವೀಕಾರಾರ್ಹವಾದ ಮಾರ್ಗದಲ್ಲಿ ಮುನ್ನಡೆಯುತ್ತಾರೆ. ಅಂಥವರ ನಡತೆಯ ತತ್ವವು ನಿಂದನೀಯವಲ್ಲ, ಶಾಸ್ತ್ರಸಮ್ಮತವೂ ಅಲ್ಲ. ಅದನ್ನು ಅರ್ಥೈಸುವುದು ಹೇಗೆ? ಅದನ್ನು ಸಾತ್ವಿಕ, ರಾಜಸಿಕ ಮತ್ತು ತಾಮಸಿಕ ಎಂಬ ತಕ್ಕಡಿಯಲ್ಲಿ ತೂಗುವಾಗ ಏನೆಂದು ಬಣ್ಣಿಸಬಹುದು? ಅಜ್ಜ ಹಾಕಿದ ಆಲದ ಮರದ ನೆರಳಲ್ಲೇ ಉಳಿಯುವ ಈ ಮಂದಿ ತಿರಸ್ಕಾರ ಯೋಗ್ಯರಲ್ಲ, ಆದರೆ ಶಾಸ್ತ್ರೋಕ್ತ ವಿಧಿಗಳನ್ನು ಆಚರಿಸುವವರೂ ಅಲ್ಲ. ಅಂದರೆ, ಅವರು ಶ್ರದ್ಧೆ ಯುಳ್ಳವರು, ಆದರೆ ಶಾಸ್ತ್ರದ ಆದೇಶಗಳಿಗೆ ಕಟ್ಟು ಬಿದ್ದವರಲ್ಲ.

ಶ್ರೀಭಗವಾನನು ಅಂಥವರನ್ನೂ ಮೂರು ವಿಧಗಳಾಗಿ ವಿಂಗಡಿಸುತ್ತಾನೆ. ಗೀತೆಯ ಕರ್ತೃವಿಗೆ ವಿಂಗಡಣೆಯು ಬಹಳ ಪ್ರಿಯವಾದ್ದು. ಮೊದಲಿಗೆ, ಸಮಾಜದ ವಿಭಜನೆಗೆ ಒಂದು ಸಮರ್ಥನೆ ನೀಡುವುದು, ಅದನ್ನು ಭಗವಾನನೇ ಮಾಡಿದ್ದಾದ್ದರಿಂದ ಅದು ಸಮಂಜಸವೆಂದು ಬಿಂಬಿಸುವುದು; ಆಮೇಲೆ ಸತ್ವ, ರಜಸ್, ತಮೋಗುಣಗಳನ್ನು ಆಧರಿಸಿ ವ್ಯಾಖ್ಯಾನಿಸುವುದು. ಹದಿನೇಳನೆಯ ಅಧ್ಯಾಯದಲ್ಲಿ ಬರುವ ವಿಂಗಡಣೆಯು ಹದಿನಾರನೆಯ ಅಧ್ಯಾಯದ ಆಸುರೀ ಭಾವದವರಿಗೆ ಸಂಬಂಧಿಸಿದ್ದಲ್ಲ. "ಯಥಾವಿಧಿ" ಶಾಸ್ತ್ರವನ್ನು ಅನುಸರಿಸದವರಲ್ಲಿನ ವಿಂಗಡಣೆ ಇಲ್ಲಿದೆ. ಅವರಿಗೆ ಶಾಸ್ತ್ರವಿಧಿಯು ಗೊತ್ತಿದೆ, ಅದನ್ನು ಅವರು ನಿರಾಕರಿಸುವುದಿಲ್ಲ; ಆದರೆ ಆಚರಣೆಯು "ಅಯಥಾವಿಧಿ" ಇರುತ್ತದೆ. ಮೂಲತಃ ಅವರು ಆಸುರೀ ಭಾವದವರಂತೆ ನಿರಾಕರಣೆಗೆ ಭಾಜನರಲ್ಲ, ಆದರೆ ಅವರಲ್ಲೂ ವರ್ಗೀಕರಣವಿದೆ. ಅಂದರೆ, ಶ್ರದ್ಧೆ, ಪರಮಭಕ್ತಿ, ಆಸ್ತಿಕ್ಯ, ಎಲ್ಲಾ ಇದ್ದೂ ಮತ್ತೊಂದು ವಿಂಗಡಣೆಗೆ ವಸ್ತುವಾಗುವಂಥವರು ಇವರು. ಶಂಕರನು ಹೇಳುವಂತೆ ಅವರ ಲಕ್ಷಣ ಇದು : ಸಂಪ್ರದಾಯ ಶರಣರಾಗಿ ಪೂಜಾವಿಧಿಗಳಲ್ಲಿ ತೊಡಗುತ್ತಾರೆ, ಆದರೆ

ಶಾಸ್ತ್ರವಿರೋಧಿಗಳಲ್ಲ (ಶ್ರುತಿಲಕ್ಷಣಂ ಸ್ಮೃತಿಲಕ್ಷಣಂ ವಾ ಕಂಚಿತ್ ಶಾಸ್ತ್ರವಿಧಿಂ ಅಪಶ್ಯಂತೋ ವೃದ್ಧವ್ಯವಹಾರದರ್ಶನಾತ್ ಏವ ಶ್ರದ್ಧಧಾನತಯಾ ಯೇ ದೇವಾದೀನ್ ಪೂಜಯಂತಿ ತೇ). ಹಾಗಿದ್ದರೆ 'ಆಸ್ತಿಕ ಮಹಾಶಯರಲ್ಲೂ' ಭೇದವನ್ನೇಣಿಸಬೇಕೆ? ಹೌದು, ಏಕೆಂದರೆ ಅವರಲ್ಲಿ ಮೂರು ಗುಣಗಳಲ್ಲಿ ಯಾವುದು ಪ್ರಧಾನವಾಗಿ ವ್ಯಕ್ತವಾಗುತ್ತದೋ ಅದರಂತೆ ಅವರ ಪೂಜಾವಿಧಾನ ಪ್ರತ್ಯೇಕವಾಗಿರುತ್ತದೆ. ಹೀಗೆ ಹೇಳಬಹುದೇನೋ : ಭಗವಾನನು ಯಾರನ್ನು ಸ್ವೀಕಾರಾರ್ಹರು, ಆದರಣೀಯರು, ಎಂದೆಣಿಸುತ್ತಾನೋ ಅವರಲ್ಲಿಯೂ ಶ್ರೇಣೀಕರಣವಿದೆ. ಈ ಶ್ರೇಣೀಕರಣಕ್ಕೆ ಗುರಿಯಾಗುವವರಲ್ಲಿ ಆಸುರೀ ಭಾವದವರಿಲ್ಲ, ಏಕೆಂದರೆ ಅವರು ಭಗವಾನನು ಹೇಳಿದಂತೆ "ನರಾಧಮ"ರಾಗಿ ದೂರವೇ ಉಳಿದುಬಿಡುತ್ತಾರೆ.

ಗೀತೆಯ ಕರ್ತೃವಿಗೆ ಶ್ರೇಣೀಕರಣವು ಸ್ವಭಾವದಿಂದಲೇ ಸಿದ್ಧಿಸುತ್ತದೆ. ಕೆಳಗಿನ ಮೆಟ್ಟಲಿನಲ್ಲಿರುವವರು ಎಂದಾದರೂ ಮೇಲಿನ ಮೆಟ್ಟಲಿಗೆ ಏರಬಹುದೆಂಬ ನಿರೀಕ್ಷೆ ಇಲ್ಲ. ಅದರಂತೆ ಆಯಾವ್ಯಕ್ತಿಯಲ್ಲಿರುವ ಶ್ರದ್ಧೆಯು "ಸ್ವಭಾವತಃ" ಸಾತ್ವಿಕ, ರಾಜಸ ಮತ್ತು ತಾಮಸ ಸ್ವರೂಪದಲ್ಲಿರುತ್ತದೆ. ಅರ್ಥಾತ್, ಗೀತೆಗೆ ಎಲ್ಲವೂ ಮೂರು ವಿಧ, ಎಲ್ಲವೂ ಯಥಾಸ್ಥಿಯಲ್ಲಿಯೇ ಉಳಿಯುವಂಥದು. ಹಾಗಿದ್ದರೆ ಇನ್ನೂ ಸ್ಥಿತಪ್ರಜ್ಞರಾಗಿಲ್ಲದಿರುವವರು ಸ್ಥಿತಪ್ರಜ್ಞರಾಗುವಂತಿಲ್ಲವೆ? ಆಗಬಹುದು, ಅದಕ್ಕೆ ಅವರ ಬೌದ್ಧಿಕ ಮತ್ತು ಮಾನಸಿಕ ಚಹರೆ ಬದಲಾಗಬೇಕು, ಅಷ್ಟೆ. ಅಭ್ಯಾಸ ಮತ್ತು ಪ್ರಯತ್ನಗಳಿಂದ ಆ ಬದಲಾವಣೆಯನ್ನು ಪಡೆಯಬಹುದು ಎಂದು ಗೀತೆ ಹೇಳುತ್ತದೆ. ಬದಲಾವಣೆ ಸಾಧ್ಯವೆಂದಾದರೆ "ಸ್ವಭಾವತಃ" ಇರುವ ಗುಣಗಳೂ ಹಾಗೆಯೇ ಏಕೆ ಉಳಿಯುತ್ತವೆ? ಗೀತೆಯು ಆ ತರ್ಕವನ್ನು ನಡೆಸಿಲ್ಲ ಎನ್ನಬೇಕಾಗುತ್ತದೆ. ಹುಟ್ಟಿನಿಂದ ನಿಗದಿತವಾದ "ಸ್ವ-ಧರ್ಮ"ವನ್ನು ಹೇಗೆ ಬಿಡಬಾರದೋ ಅಥವಾ ಬಿಡಕೂಡದೋ ಹಾಗೆ ಗುಣಗಳನ್ನೂ ಗುಡ್ಡೆ ಹಾಕಿಕೊಂಡು

# ಚಕ್ಕುಲಿ ಮಾರುವ ಹುಡುಗಿ

ಕಲ್ಲೊಲೆಯ ಬೆಂಕಿಯಲಿ
ಕಾದ ಎಣ್ಣೆಯ ಕಡಾಯಿ
ಪರಾತದ ತಟ್ಟೆಯಲಿ ಹಿಟ್ಟು
ಉಪ್ಪು ಕಲಿಸಿ ಹದವರಿತು
ಚಕ್ಕುಲಿಯ ಮಾಡುತ್ತಾಳೆ
ಬಿಸಿ ಆರಿದಮೇಲೆ ಮಾರುತ್ತಾಳೆ

ಆಕೆಯ ಓಟ ಜಿಂಕೆಯ ಹಾಗೆ
ಕಣ್ಣೋಟ ಸೂರ್ಯನ ಪ್ರಕಾಶ
ದಿಟ್ಟತನದಲಿ ಅಪ್ಪ ಅವ್ವಳ ಅರಿತು
ತಮ್ಮ ತಂಗಿಯ ಓದಿಗೆ ದುಡಿಯುತ್ತಾಳೆ
ಮೈ ಮುರಿದು ಬೆವರ ಹರಿಸುತ್ತಾಳೆ




ಆಕೆಯ ಕೂಗಿಗೆ ಗಲ್ಲಿ ಹುಡುಗರು
ದೊಡ್ಡವರ ಕರೆಯುತ್ತಾರೆ
ಗರಂಗರಂ ಚಕ್ಕುಲಿಯ ರುಚಿಗೆ
ಚಿಲ್ಲರೆ ನೀಡುತ್ತಾರೆ ಮತ್ತೆ ಕೊಳ್ಳುತ್ತಾರೆ
ನಾಳೆಯ ಆಕೆಯ ಬರುವಿಕೆಗೆ ಕಾಯುತ್ತಾರೆ

ಆ ಹುಡುಗಿಗೆ ಈ ವರ್ಷದ ಚಿಂತೆ
ಕಾದ ಎಣ್ಣೆ ಕಡಾಯಿಯೊಳಗಿದೆ
ತಂದಿಟ್ಟ ಹಿಟ್ಟು ಹಾಗೆ ಕುಳಿತಿದೆ
ಉಪ್ಪುಜೀರಿಗೆ ನಾಲಗೆ ರುಚಿ ಉಣಿಸದೆ
ಚೀಲದಲ್ಲೇ ಅವಿತು ಕುಳಿತಿದೆ
ನಿನ್ನೆ ತುಂಬಿದ ಬುಟ್ಟಿ ಮಾರಿಯೇ ಇಲ್ಲ
ಚಿಲ್ಲರೆ ಕಾಸು ಇರದಕೆ ಕೊಳ್ಳುತ್ತಿಲ್ಲ

ಮನೆಗೆ ಬಂದ ಹುಡಿಗಿಗೆ ಕಣ್ಣೀರ ಧಾರೆ
ಅಪ್ಪ ಅವ್ವಳ ಸಂಕಟ
ತಮ್ಮ ತಂಗಿಯ ಶಾಲೆ
ಬರಿದಾದ ಹೊಟ್ಟೆ ಕಿವುಚುವ ಕರುಳು



ದಾರಿಯಲಿ ಮುಖಕಂಡು ಲೊಚಗುಡುವ ಜನ
ಕಾಸಿಲ್ಲದೆ ಕೊಳ್ಳಲಾಗದ ಅಸಹಾಯಕತೆ

ಅವಳೀಗ ಬ್ಯಾಂಕಿನ ಜನರ ನೋಡುತ್ತಾಳೆ
ಕಾಸುಸಿಗದೆ ಹೊರಬಂದವರ ದಿಟ್ಟಿಸುತ್ತಾಳೆ
ಅವಳಿಗೂ ದುಃಖ ಒತ್ತರಿಸಿ ಬರುತಿದೆ
ಎಲ್ಲರ ಕೈಯಲು ಒಂದೊಂದೇ ನೋಟು
ಎರಡು ಸಾವಿರ ರೂಪಾಯಿ

ಹಿಂತಿರುಗಿ ಬರುತ್ತಾಳೆ
ಬೆಂಕಿ ಆರಿದ ಒಲೆ ನೋಡುತ್ತಾಳೆ
ಚೀಲದಲಿ ಕಟ್ಟಿಟ್ಟ ಹಿಟ್ಟು ಉಪ್ಪು ಜೀರಿಗೆ
ಸೊರಗಿದ ತಮ್ಮ ತಂಗಿಯ ಮುಖ
ದುಡಿಯಲಾಗದ ತಾಯಿ ತಂದೆಯ ಪೀಕಲಾಟ
ಕತ್ತಲಾದುದಕೆ ನೆಲಕೆ ಒರಗುತ್ತಾಳೆ
ನಾಳೆ ಹೇಗೋ ಗೊತ್ತಿಲ್ಲ.

**ಲಕ್ಷ್ಮೀ ವಿ. ಕಾಮತ್**
ಮಂಜುನಾಥ ಬಡಾವಣೆ, ಕೊಪ್ಪ ತಾ||, ಕೊಪ್ಪ ಜಿಲ್ಲೆ
ಭಾಗ್ಯನಗರ – ೫೭೭೧೨೬

ಅದದೇ ಗುಣದಲ್ಲಿ ಇರಬೇಕೆಂದಾಯಿತು. ಅದು ಸರಿಯಾದ ಗ್ರಹಿಕೆಯಲ್ಲ, ಗುಣಗಳನ್ನು ಬದಲಾಯಿಸಿಕೊಳ್ಳಬಹುದು ಎಂದು ತರ್ಕ ಹೂಡಿದರೆ "ಗುಣಕರ್ಮ ವಿಭಾಗಶಃ" ಮಾಡಲಾಗಿರುವ ತಾರತಮ್ಯವು ಇಲ್ಲವಾಗಬೇಕು. ಅದರಲ್ಲಿ ಚಲನೆ ತಾರ್ಕಿಕವಾಗಿ ಸಾಧ್ಯವಿದೆಯೆಂದಾದರೆ "ಸ್ವ-ಧರ್ಮ"ವು ಏಕೆ ತಾನೇ ಸದಾಕಾಲ ಒಂದೇ ತೆರನಾಗಿ ಉಳಿಯಬೇಕು? ಅರ್ಥಾತ್, ಗೀತೆಯ ಎಲ್ಲ ನಿರೂಪಣೆಗಳಿಗೂ ತಾರ್ಕಿಕ ಅಡಿಪಾಯ ಇರಲೇಬೇಕೆಂಬ ನಿಯಮವಿಲ್ಲವೆಂದಾಯಿತು.

"ಜನರ ಶ್ರದ್ಧೆಯು ಮೂಲತಃ ಅವರವರ ಸ್ವಭಾವದಿಂದಲೇ ಜನ್ಯವಾದ್ದು; ಅದು ಸಾತ್ವಿಕ, ರಾಜಸ ಮತ್ತು ತಾಮಸ" (೧೭.೨ : ತ್ರಿವಿಧಾ ಭವಂತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ। ಸಾತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶ್ರುಣು॥). "ಸ್ವಭಾವದಿಂದಲೇ ಜನ್ಯವಾದ್ದು" ಎಂದರೇನು? ಶಂಕರನು ಹೇಳುವಂತೆ ಅದು ಜನ್ಮಾಂತರಾದಿಗಳಲ್ಲಿ ಪಡೆದ ಧರ್ಮಸಂಸ್ಕಾರ (ಜನ್ಮಾಂತರಕೃತೋ ಧರ್ಮಾದಿ ಸಂಸ್ಕಾರೋ ಮರಣಕಾಲೇ ಅಭಿವ್ಯಕ್ತಃ ಸ್ವಭಾವ ಉಚ್ಯತೇ. ತತೋ ಜಾತಾ ಸ್ವಭಾವಜಾ). ಶಂಕರನಿಗೆ ಪ್ರಕೃತಿಯಲ್ಲಿ ಘಟಿಸುವ ಸಂಗತಿಗಳು "ಸ್ವಭಾವಜನ್ಯ"ವಲ್ಲ; ಅಡಿಕೆ, ವೀಳೆಯದೆಲೆ ಮತ್ತು ಸುಣ್ಣ ಮೂರೂ ಬಾಯಿ ಸೇರಿದಾಗ ಕೆಂಪುಬಣ್ಣ ಬರುವುದು ಸ್ವಭಾವವಲ್ಲ ಮತ್ತು ಮಾದಕ ಗುಣಗಳಿಲ್ಲದ ಪದಾರ್ಥಗಳು ಸೇರಿ ಮಾದಕದ್ರವ್ಯದ ಉತ್ಪಾದನೆ ಮಾಡಿದರೆ ಅದು ಸ್ವಭಾವವಲ್ಲ. ಅವುಗಳ ಹಿಂದೆ ಬೇರೊಂದು ಪ್ರೇರಕಶಕ್ತಿಯ ಅಗತ್ಯವಿದೆಯೆಂದು ಆತನ ತರ್ಕವಿದೆ. ಆದರೆ ವ್ಯಕ್ತಿಯ ಶ್ರದ್ಧೆಯಲ್ಲಿ ಮೂರು ವಿಧಗಳಿವೆ ಮತ್ತು ಅವು ಮಾತ್ರ ಸ್ವಭಾವಜನ್ಯ. ಶಂಕರನು ತರ್ಕವನ್ನು ಮಾನ್ಯಮಾಡುವುದಿಲ್ಲ. ವೇದೋಕ್ತಿಗಳ ಅಧಿಕಾರಯುತ ವಾಣಿಯನ್ನು ಮಾನ್ಯ ಮಾಡಲು ಮಾತ್ರ ಆತನಿಗೆ ಬೌದ್ಧಿಕ ಸಮ್ಮತಿ ಇದೆ. ಗೀತೆಯಂತೆ ಶಂಕರ ಸಹ ಯಥಾಸ್ಥಿತಿವಾದಿಯೆಂಬುದರಲ್ಲಿ ಸಂಶಯವಿಲ್ಲ. ಹಾಗೆ ಯಥಾಸ್ಥಿತಿವಾದಿಯಲ್ಲ ದಿದ್ದರೆ ಸಾಮಾಜಿಕ ವರ್ಣ ವಿಭಜನೆಯ ವ್ಯವಸ್ಥೆಯು ಸಹ ನಿರಂತರವಾಗಿ ಭಗವಾನನು ನಿಗದಿಗೊಳಿಸಿದಂತೆ ಇರದೆ ಬದಲಾಗಬಹುದೆಂಬುದನ್ನು ಒಪ್ಪಿಕೊಳ್ಳ ಬೇಕಾಗುತ್ತದೆ. ಅದನ್ನು ಒಪ್ಪಲು ಗೀತೆ ಮತ್ತು ಶಂಕರಾದಿ ಆಚಾರ್ಯರು ಸರ್ವಥಾ ಸಿದ್ಧರಿಲ್ಲ. ಸಮಾಜದಲ್ಲಿನ ತಾರತಮ್ಯದ ಬದಲಾವಣೆ ಮತ್ತು ಸಾಮಾಜಿಕ ಚಲನೆ ಯನ್ನು ನಿರಾಕರಿಸಿ ಯಾವ ತತ್ವ ಬೋಧಿಸಿ ಏನು ಪುರುಷಾರ್ಥ ಸಾಧಿಸಲು ಸಾಧ್ಯ?

ಹದಿನೇಳನೆಯ ಅಧ್ಯಾಯುದುದ್ದಕ್ಕೂ ಪೂಜೆ, ಯಜ್ಞ, ಆಹಾರ, ಮುಂತಾದುವನ್ನು ಕುರಿತಂತೆ ಕ್ರಮವಾಗಿ ಸಾತ್ವಿಕ-ರಾಜಸ-ತಾಮಸರ ಆಯ್ಕೆಗಳೇನಾಗಿರುತ್ತವೆಂಬ ಪಟ್ಟಿಗಳನ್ನು ಕಾಣಬಹುದು. ಅದರಲ್ಲಿ ಸಹ ಶ್ರೇಷ್ಠ ಮತ್ತು ಕನಿಷ್ಠ ಎಂಬ ಲೆಕ್ಕಾಚಾರವು ಗಾಢವಾಗಿದೆ. ಉದಾಹರಣೆಗೆ ದೇವತೆಗಳ ಆರಾಧನೆ : ಸಾತ್ವಿಕರು ದೇವತೆಗಳನ್ನು ಮತ್ತು ರಾಜಸರು ರಾಕ್ಷಸರನ್ನು ಪೂಜಿಸುತ್ತಾರಂತೆ; ಆದರೆ ತಾಮಸರು ಪ್ರೇತಗಳನ್ನು ಮತ್ತು ಭೂತಗಣಗಳನ್ನು ಪೂಜಿಸುತ್ತಾರಂತೆ (೧೭.೪). ರಾಕ್ಷಸರನ್ನು ಪೂಜಿಸುವವರು ರಾಜಸರೆಂದೇ ಇಟ್ಟುಕೊಳ್ಳೋಣ, ಆದರೆ ಹಾಗೆ ಪೂಜಿಸುವ ಜನ ಯಾರು, ಅವರ ವೃತ್ತಿ – ಪ್ರವೃತ್ತಿಗಳೇನು? ಪ್ರೇತಗಳನ್ನು ಪೂಜಿಸುವ ಜನ ಎಲ್ಲಿ ವಾಸಿಸುತ್ತಾರೆ? ಎಲ್ಲರಂತೆ ಬೇರೆ ಜನಗಳೊಟ್ಟಿಗೆ ಗ್ರಾಮಗಳಲ್ಲಿ, ನಗರಗಳಲ್ಲಿ ತಾನೆ ಅವರು ಜೀವಿಸುವುದು? ಒಂದು ವರ್ಗದ ಜನ ಸುಸಂಸ್ಕೃತರು, ಇನ್ನೊಂದು ವರ್ಗದ ಜನ ಕ್ಷುಲ್ಲಕರು ಎಂಬರ್ಥವನ್ನು ಇಡೀ ಹದಿನೇಳನೆಯ ಅಧ್ಯಾಯವು ವ್ಯಾಪಕವಾಗಿ ತೆರೆದಿಡುತ್ತದೆ. ಇನ್ನೊಂದು ವಿಶೇಷವೇನೆಂದರೆ ಸಾತ್ವಿಕರಿಗೆ ಮತ್ತು ರಾಜಸಗುಣದವರಿಗೆ ಒಂದು ಶ್ಲೋಕದ ಅರ್ಧಭಾಗ; ಆದರೆ ತಾಮಸಗುಣದವರಿಗೆ ಎರಡೂವರೆ ಶ್ಲೋಕ! (೧೭.೪ರಲ್ಲಿ ಅರ್ಧ ಮತ್ತು ಇಡಿಯಾಗಿ ೫ ಮತ್ತು ೬). ಏಕೆಂದರೆ, ಈ "ಕೆಳಮಟ್ಟದ" ಜನಗಳ ಅವಗುಣಗಳನ್ನು ಎತ್ತಿ ಹೇಳಬೇಕಲ್ಲ, ಅದಕ್ಕೆ! ಏನವರ ಅವಗುಣಗಳು? ಶಾಸ್ತ್ರದಲ್ಲಿ ಹೇಳಿಲ್ಲದ ಆಚರಣೆಗಳು, ತಮಗೆ ಮತ್ತು ಇತರರಿಗೆ ಘಾಸಿಯುಂಟುಮಾಡುವ ಘೋರವಾದ ತಪಸ್ಸು, ತೋರಿಕೆ ಮತ್ತು ದರ್ಪಗಳಿಂದ ಕೂಡಿದ ಹಾಗೂ ಕಾಮ ಮತ್ತು ರಾಗಪೂರಿತವಾದ ಆಚರಣೆ (೧೭.೫ : ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ। ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ॥). ಇದನ್ನು ನೋಡಿದರೆ ಯಾವುದಾದರೂ ತಾಂತ್ರಿಕ ಆಚರಣೆಯು ಗೀತೆಯ ಕರ್ತೃವಿನ ಮನಸ್ಸನ್ನು ಬಾಧಿಸುತ್ತಿರಬಹುದೇ ಎನಿಸುತ್ತದೆ. ಜೊತೆಗೆ ಈ ತಾಮಸಿಗಳ ಆಚರಣೆಯು ಶರೀರವನ್ನು ಕೃಶ ಮಾಡುತ್ತದಂತೆ, ಅಲ್ಲದೆ ಆ ಶರೀರದಲ್ಲಿ ಸ್ಥಾನ ಪಡೆದಿರುವ ಭಗವಾನನನ್ನೂ ಕೃಶಗೊಳಿಸುತ್ತದಂತೆ. ಒಟ್ಟಿನಲ್ಲಿ ಈ ಆಚರಣೆಗಳಲ್ಲಿ

## ದಿ॥ ಯು. ಎಸ್. ವೆಂಕಟರಾಮನ್ ಪುರಸ್ಕಾರ

ಕಾರ್ಮಿಕ ನಾಯಕರೂ ಚಿತ್ರಕಲಾವಿದರೂ ಆಗಿದ್ದ, ವೈವಿಧ್ಯಮಯ ವ್ಯಕ್ತಿತ್ವದ ದಿ॥ ಕಾಮ್ರೇಡ್ ಯು. ಎಸ್. ವೆಂಕಟರಾಮನ್ ಅವರ ಹೆಸರಿನಲ್ಲಿ ಅವರ ಕುಟುಂಬದ ಸದಸ್ಯರು 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗುವ ಕಾರ್ಮಿಕ-ದುಡಿಯುವ ಜನತೆಯ ಕುರಿತ ಆಯ್ದ ಒಳ್ಳೆಯ ಲೇಖನ ಮತ್ತು ಉತ್ತಮ ಕಲಾಕೃತಿಗಳಿಗೆ ತಲಾ ೫೦೦೦/- ರೂ.ಗಳ ಬಹುಮಾನವನ್ನು ಪ್ರತಿವರ್ಷ ಪ್ರಾಯೋಜಿಸುತ್ತಿದ್ದಾರೆ. ಆ ಸಂಬಂಧ ೨೦೧೫-೧೬ರ ಸಾಲಿನ ಬಹುಮಾನಗಳನ್ನು **ಕಾರ್ಮಿಕ ಚಳುವಳಿಯ ರಾಜಕೀಯ ಸ್ಥಿತಿ-ಗತಿ ಮತ್ತು ಸವಾಲುಗಳು** ಕುರಿತ ಲೇಖನದ (ಪ್ರ. ಜನವರಿ ೨೦೧೭) ಬರೆದ ಲೇಖಕ ಶ್ರೀ ಅಯ್ಯಪ್ಪ ಹೂಗಾರ್ ಹಾಗೂ ಉತ್ತಮ ಕಲಾಕೃತಿಗಳಿಗೆ ಕೊಡುವ ಬಹುಮಾನವನ್ನು ಶ್ರೀ ಪಿ. ಜಯರಾಮ್ (ಪ್ರ. ಡಿಸೆಂಬರ್ ೨೦೧೬) ಅವರಿಗೆ ನೀಡಲಾಗಿದೆ.

**– ಸಂಪಾದಕ**

ತೊಡಗುವವರು ಅಸುರ ಬುದ್ಧಿಯುಳ್ಳವರು (೧೭.೬ : ... ಮಾಂ ಚೈವ ಅಂತಃ ಶರೀರಸ್ಥಂ ತಾನ್ ವಿದ್ಧಿ ಆಸುರನಿಶ್ಚಯಾನ್). ಒಟ್ಟಿನಲ್ಲಿ ಗೀತೆಯ ಕರ್ತೃವಿನ ಮನಸ್ಸಿನಲ್ಲಿ ಆಸುರೀ ಭಾವದವರು ನೆಲೆಸಿಬಿಟ್ಟಿದ್ದಾರೆ. ಅವರನ್ನು ಎಷ್ಟು ಹೀನೈಸಿದರೂ ಕರ್ತೃವಿಗೆ ತೃಪ್ತಿಯಿಲ್ಲ.

ಆಹಾರದ ವಿಷಯಕ್ಕೆ ಬಂದರೆ ತಾಮಸಿಕರ ಚಿತ್ರಣವು ಇನ್ನೂ ಹೆಚ್ಚು ಅಸಹ್ಯ ವಾಗಿದೆ. ಕೆಳವರ್ಣದವರನ್ನು ತಮೋಗುಣದ ಆಗರಗಳೆಂದು ಶ್ರೀಭಗವಾನನು ಮುಂಚಿನ ಒಂದು ಅಧ್ಯಾಯದಲ್ಲಿ ಬೊಟ್ಟುಮಾಡಿ ತೋರಿಸಿದ್ದನೆಂಬುದನ್ನು ನೆನಪಿನಲ್ಲಿಡೋಣ. ಆಹಾರ, ಯಜ್ಞ, ತಪಸ್ಸು ಮತ್ತು ದಾನ, ಈ ನಾಲ್ಕೂ ವಿಷಯಗಳಿಗೆ ಸಂಬಂಧಿಸಿದಂತೆ ಸಾತ್ವಿಕ, ರಾಜಸ ಮತ್ತು ತಾಮಸ ಗುಣಗಳವರು ತೀರಾ ಭಿನ್ನೈಸುತ್ತಾರೆಂದು ಗೀತೆಯ ಕರ್ತೃವಿನ ಅಂಬೋಣ. ಸಾತ್ವಿಕರೆನ್ನಲಾದ ಇಂದಿನವರ ಆಹಾರ ಬಾದಾಮಿ, ಗೋಡಂಬಿ, ದ್ರಾಕ್ಷಿ, ಕೇಸರಿ, ಜೇನುತುಪ್ಪ, ಬೆಣ್ಣೆ, ಮುಂತಾದವು ಎಂದು ಕೇಳಿಬರುತ್ತದೆ. ಗೀತೆಯ ಪ್ರಕಾರ ಅವರ ಆಹಾರವು ಆಯಸ್ಸನ್ನು ಹೆಚ್ಚಿಸುವಂಥದು, ಮನಸ್ಸನ್ನು ದೃಢಗೊಳಿಸುವಂಥದು, ಶಕ್ತಿ-ಆರೋಗ್ಯ ವರ್ಧಕವಾದ್ದು, ಇತ್ಯಾದಿ (೧೭.೮ : ಆಯುಃ ಸತ್ವ ಬಲ ಆರೋಗ್ಯ ಸುಖ ಪ್ರೀತಿ ವಿವರ್ಧನಾಃ। ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾ ಸಾತ್ವಿಕಪ್ರಿಯಾಃ). ಅಂತೂ ಪುಷ್ಕಳವಾದ ರುಚಿಕರ ಆಹಾರವೇ ಸರಿ. ರಾಜಸರು ಉಪ್ಪು, ಹುಳಿ, ಖಾರ ಸ್ವಲ್ಪ ಜಾಸ್ತಿ ಇರುವ ಆಹಾರದ ಪ್ರಿಯರು; ಆ ಆಹಾರದ ಪರಿಣಾಮ ದುಃಖ, ಶೋಕ ಮತ್ತು ಅನಾರೋಗ್ಯ (೧೭.೯). ಅದನ್ನು ತಿಂದರೂ ಅವರು ಬಲಿಷ್ಠರೇ! ಗೀತೆಯು ತಾಮಸ ಗುಣದವರಿಗೆ ಬೀಭತ್ಸವೆನಿಸುವ ಆಹಾರವನ್ನು ಗುರುತಿಸಿದೆ, ಅಂಥದವನ್ನು ತಿಂದರೂ ಅವರು ಅರೋಗಿಗಳು ಮತ್ತು ಶ್ರಮದಾಯಕ ವೃತ್ತಿಯವರು. ಅವರ ಆಹಾರ ಅರ್ಧ ಬೆಂದದ್ದು, ರಸಹೀನವಾದ್ದು, ಹಳಸಿಹೋಗಿರುವಂಥದು, ಎಂಜಲು ಸ್ವರೂಪದ್ದು, ಇತ್ಯಾದಿ. ಜೀವಂತ ಮನುಷ್ಯರಿಗೆ ಇಂತಹ ಆಹಾರವನ್ನು ಕಲ್ಪಿಸಿಕೊಳ್ಳುವ ಗೀತೆಯ ಬಗ್ಗೆ ಇನ್ನೇನು ಭ್ರಮೆ ಇರಿಸಿಕೊಳ್ಳೋಣ! ನಮ್ಮ ಸಂಸ್ಕೃತಿಯಲ್ಲಿ ಅಂತಹ ಮನಸ್ಸುಗಳಿವೆಯಲ್ಲ! ತಾಮಸಿಕರೆಂಬುವುದು ಕೇವಲ ಮಾನಸಿಕ ಕಲ್ಪನೆಯಾಗಿದ್ದಿದ್ದರೆ ಹೀಗೆ ಆತಂಕಕ್ಕೆ ಸುತರಾಂ ಎಡೆ ಇರುತ್ತಿರಲಿಲ್ಲ. ಆದರೆ ನಾಲ್ಕು ವರ್ಣಗಳಲ್ಲಿ ಎರಡು ವರ್ಣಗಳವರ ಪ್ರಧಾನ ಗುಣ ತಾಮಸ ಗುಣವೆಂದು ಸ್ವತಃ ಗೀತೆಯೇ ಹೇಳಿದ್ದನ್ನು ನಾವು ಹಿಂದೆಯೇ ಪರಿಚಯಿಸಿ ಕೊಂಡಿದ್ದೇವೆ. ಯಾವ ವರ್ಣದವರೇ ಆಗಿರಲಿ, ಆ ಮಾನವರಿಗೆ ಇಂತಹ ಆಹಾರ ಪ್ರಿಯವಾದ್ದು ಎಂದು ಹೇಳುವುದಿದೆಯಲ್ಲಾ, ಅದು ಮನಸ್ಸಿಗೆ ಆಘಾತ ಉಂಟುಮಾಡುತ್ತದೆ. ನಾವು ಹಾಗೆ ವಿಚಲಿತರಾಗದಿದ್ದರೆ ನಮ್ಮಲ್ಲೇನೋ ನ್ಯೂನತೆ ಇದೆಯೆಂಬ ಭಾವನೆಯಾದರೂ ಬರಬೇಕು. ಗೀತಾವಾಕ್ಯ ಹೀಗಿದೆ : ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್। ಉಚ್ಛಿಷ್ಟಮಪಿ ಚ

ಅಮೇಧ್ಯಂ ಭೋಜನಂ ತಾಮಸಪ್ರಿಯಂ ॥ (೧೭.೧೦). ಈ ಶ್ಲೋಕದ ಮೇಲೆ ವ್ಯಾಖ್ಯಾನ ಬರೆದ ಮಹಾತ್ಮ ಶಂಕರ ಹೇಳುತ್ತಾನೆ, "ಇದರರ್ಥ ಸಾತ್ವಿಕನು ಇಂತಹ ಆಹಾರದಿಂದ ಬಹುದೂರ ಉಳಿಯಬೇಕು ಎಂಬುದು", ಎಂದು. ಎಂಥಾ ಮಾನವತೆ !! ಅಷ್ಟು ಸಾಲದೆಂಬಂತೆ ಇನ್ನೊಂದು ವಾಕ್ಯವನ್ನೂ ಆತ ಸೇರಿಸಿದ್ದಾನೆ : "ರಾಜಸಿಕ ಆಹಾರದಿಂದ ಉಂಟಾಗುವ ಪರಿಣಾಮವು ಪ್ರಕೃತದ ಜೀವನದಲ್ಲಿ ಕೊನೆಯಾಗುತ್ತದೆ, ಆದರೆ ತಾಮಸಿಕ ಆಹಾರದ ಪ್ರಭಾವವು ಮುಂದಿನ ಜನ್ಮದಲ್ಲೂ ಉಳಿದಿರುತ್ತದೆ," ಎಂದು. ಇದೆಲ್ಲಾ ನಿಜಕ್ಕೂ ಊಹಾತೀತ, ಆದರೆ ಅದು ಗೀತೆಯಲ್ಲಿರುವುದು ವಾಸ್ತವ.

ಇನ್ನು ಮುಂದೆ ಯಜ್ಞದ ವಿಚಾರ : ವೇದೋಕ್ತ ವಿಧಿಗೆ ಅನುಗುಣವಾಗಿ, ಯಾವ ಫಲಾಪೇಕ್ಷೆಯೂ ಇಲ್ಲದೆ, ಯಾವ ಯಜ್ಞ ಮಾಡಲಾಗುತ್ತದೋ ಅದು ಸಾತ್ವಿಕವಾದ್ದು (೧೭.೧೧ : ಅಫಲಾಕಾಂಕ್ಷಿಭಿಃ ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ । ಯಷ್ಟವ್ಯಮೇವ ಇತಿ ಮನಃ ಸಮಾಧಾಯ ಸ ಸಾತ್ವಿಕಃ ॥). ಇದೊಂದು ತರಹದ 'ಯಜ್ಞಕ್ಕಾಗಿ ಯಜ್ಞ'; ಬಹುಶಃ ಕಲೆಗಾಗಿ ಕಲೆ ಇದ್ದಂತೆ ! ಮಹಾವ್ಯಂಗ್ಯವೇನೆಂದರೆ ನಮ್ಮ ಪ್ರಾಚೀನ ವೇದ ಮತ್ತು ಬ್ರಾಹ್ಮಣ ಗ್ರಂಥಗಳಲ್ಲಿ ('ಬ್ರಾಹ್ಮಣ' ಎಂಬುದು ಇಲ್ಲಿ ಗ್ರಂಥದ ಹೆಸರು, ವರ್ಣಸೂಚಕವಲ್ಲ) ಯಾವ ಯಜ್ಞವನ್ನೂ ಫಲಾಪೇಕ್ಷೆ ಇಲ್ಲದೆ ಮಾಡಬೇಕೆಂದು ಹೇಳಿಯೇ ಇಲ್ಲ. ಹೇಳಿರುವುದೆಲ್ಲಾ "ಇಂತಹ ಫಲ ಲಭಿಸಬೇಕಾದರೆ ಇಂತಹ ಯಜ್ಞ ಮಾಡು" ಎಂದೇ. ರಾಜಸೂಯ, ಅಶ್ವಮೇಧ, ಹೀಗೆ ಯಾವುದಾದರೂ ಸರಿಯೆ, ಅವಕ್ಕೆ ಒಂದು ನಿರ್ದಿಷ್ಟ ಉದ್ದೇಶವಿದೆ. ಪೂರ್ವಮೀಮಾಂಸಾ ದರ್ಶನದಲ್ಲಿ ಉನ್ನತ ಸ್ಥಾನ ಹೊಂದಿರುವ ಕುಮಾರಿಲ ಭಟ್ಟ ಇದನ್ನು ಉದ್ದೇಶಿಸಿಯೇ ಒಂದು ಮಾತು ಹೇಳಿದ್ದಾನೆ : "ಪ್ರಯೋಜನದ ಆಕಾಂಕ್ಷೆ ಇಲ್ಲದೆ ಒಬ್ಬ ಹುಚ್ಚ ಕೂಡ ಏನನ್ನೂ ಮಾಡಹೋಗುವುದಿಲ್ಲ" (ಪ್ರಯೋಜನಂ ಅನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ). "ಫಲಾಪೇಕ್ಷೆ ಇಲ್ಲದೆ ಮಾಡುವ ಯಜ್ಞ ಇಂಥದು" ಎಂದೇನಾದರೂ ಗೀತೆಯು ಸ್ಪಷ್ಟವಾಗಿ ನಿರ್ದೇಶಿಸಿದ್ದರೆ ಚೆನ್ನಾಗಿರುತ್ತಿತ್ತು. ಉಪನಯನದ ನಂತರ ಬ್ರಾಹ್ಮಣ ವರ್ಣದ ವಟುವು 'ಅಗ್ನಿಕಾರ್ಯ' ಎಂಬ ಸಣ್ಣಪ್ರಮಾಣದ 'ಯಜ್ಞ' ಮಾಡುವುದುಂಟು. ಕಡೆಯಲ್ಲಿ ಅವನು ಫಲದ ನಿರೀಕ್ಷೆಯನ್ನು ಸೊಗಸಾಗಿ ಹೇಳುತ್ತಾನೆ : ನನಗೆ ಬುದ್ಧಿ ಕೊಡು, ನಂತರ ಸಂತಾನ ನೀಡು, ತೇಜಸ್ಸನ್ನು ಕರುಣಿಸು, ವರ್ಚಸ್ಸು ದೊರಕಲಿ, ಇಂದ್ರಿಯಗಳು ಶೋಭಿಸಲಿ, ಎಂದು (ಮಯಿ ಮೇಧಾಂ ಮಯಿ ಪ್ರಜಾಂ ಮಯಿ ಅಗ್ನಿಃ ತೇಜೋ ದಧಾತು, ಇತ್ಯಾದಿ). ಗೀತೆಯು ಯಾವ ಮತ್ತು ಎಂತಹ ಯಜ್ಞವನ್ನು ಉಲ್ಲೇಖಿಸುತ್ತಿದೆ ? ದುಡಿಯುವವನು ಕೂಲಿ ನಿರೀಕ್ಷಿಸದೆ ಕೆಲಸ ಮಾಡಬೇಕೆಂಬುದು ವರ್ಣ ವಿಭಜನೆಯ ಒಂದು ಆಕಾಂಕ್ಷೆ. ಮನು ಅದನ್ನು ಘನಘೋರವಾಗಿ ಹೇಳಿದ್ದಾನೆ : ಶೂದ್ರಂ ತು ಕಾರಯೇತ್ ದಾಸ್ಯಂ ಕ್ರೀತಂ ಅಕ್ರೀತಮೇವ ವಾ, ಎಂದು. ಗೀತೆಯೇ ಬೋಧಿಸಿರುವ ಬ್ರಹ್ಮಯಜ್ಞದಲ್ಲಿ ಸಹ "ಬ್ರಹ್ಮನನ್ನು ಸೇರಿಕೊಳ್ಳಬೇಕು" (೪.೨೪ : ...ಬ್ರಹ್ಮೈವ ತೇನ ಗಂತವ್ಯಂ) ಎಂಬ ಉದ್ದೇಶವಿದೆ. ಹಾಗಿರುವಾಗ ಯಾವ ಫಲಾಪೇಕ್ಷೆಯೂ ಇರದ ಈ "ಸಾತ್ವಿಕರ ಯಜ್ಞ" ಯಾವುದು ? ಅದು ಮಾತಿನ ಯಜ್ಞ ಇರಬೇಕು !

ರಾಜಸಿಕ ಪ್ರವೃತ್ತಿಯವರ ಯಜ್ಞವು ಫಲಾಪೇಕ್ಷೆಯನ್ನುಳ್ಳದ್ದು, ಆಡಂಬರದ್ದು (೧೭.೧೨); ತಾಮಸಿಕ ಯಜ್ಞವು ನಿಯಮವಿಲ್ಲದ್ದು, ಸಮಾರಾಧನೆ ಇಲ್ಲದ್ದು (ಅಂದರೆ, ಅನ್ನದಾಸೋಹ ಇಲ್ಲದ್ದು), ಮಂತ್ರರಹಿತವಾದ್ದು ಮತ್ತು ಶ್ರದ್ಧೆಯಿಂದ ಕೂಡಿಲ್ಲದಿರುವುದು (೧೭.೧೩).

ಹೀಗೆ ಪಟ್ಟಿ ಮಾಡುವುದು ಅಷ್ಟೇನೂ ರುಚಿಕರವಲ್ಲವಾದರೂ ತಪಸ್ಸಿನ ಬಗೆಗಿನ ಭಿನ್ನತೆಯನ್ನು ಗೀತೆಯು ಹೇಗೆ ಚಿತ್ರಿಸಿದೆಯೆಂಬುದನ್ನು ತಿಳಿಯುವುದು ಉಚಿತ. ಅದರಲ್ಲಿ ಗೌರವ ಸಲ್ಲುವುದು ದೇವತೆಗಳಿಗೆ, ಬ್ರಾಹ್ಮಣರಿಗೆ, ಗುರುಗಳಿಗೆ ಮತ್ತು ಪ್ರಾಜ್ಞರಿಗೆ (೧೭.೧೪). ಬ್ರಾಹ್ಮಣ ವರ್ಣದವರು ದೇವತೆಗಳ ಸಾಲಿನಲ್ಲಿದ್ದಾರೆ ಎಂಬುದು ಗಮನಾರ್ಹ. ಸ್ವಚ್ಛತೆ, ನೇರನಡೆ (ಆರ್ಜವಂ), ಬ್ರಹ್ಮಚರ್ಯ, ಅಹಿಂಸೆ, ಉದ್ವೇಗರಹಿತವಾದ ಮಾತು, ಪ್ರಿಯವಾದ್ದು, ಸತ್ಯವಾದ್ದು, ಸ್ವಾಧ್ಯಾಯ (ಅಂದರೆ, ಸ್ವಂತದ ಅಧ್ಯಯನ), ಇತ್ಯಾದಿಗಳೆಲ್ಲಾ ಅದರಲ್ಲಿ ಸೇರಿವೆ (೧೭.೧೪-೧೭). ಈ ಗುಣಗಳೆಲ್ಲಾ ಎಷ್ಟು ಆಹ್ಲಾದಕರವಾದವು ಮತ್ತು ಮೌಲಿಕವಾದವು ಎಂಬುದನ್ನು ಒತ್ತಿಹೇಳಬೇಕಾಗಿಲ್ಲ. ಮತ್ತೆ ಸ್ಥಿತಪ್ರಜ್ಞನ ಲಕ್ಷಣಗಳನ್ನು ಇವು ನೆನಪಿಗೆ ತರುತ್ತವೆ. ರಾಜಸಿಕ ಪ್ರವೃತ್ತಿಯವರ ತಪಸ್ಸು ಹೊಗಳಿಕೆಯ ನಿರೀಕ್ಷೆ ಹೊಂದಿರುತ್ತದೆ ಮತ್ತು ಆಡಂಬರದಿಂದ ಕೂಡಿರುತ್ತದೆ (೧೭.೧೮). ಇದನ್ನು ದಿನನಿತ್ಯ ನಾವು ನೋಡುತ್ತಿರುತ್ತೇವೆ. ತಾಮಸಿಕರ ತಪಸ್ಸು ಮೂರ್ಖ ಉದ್ದೇಶವುಳ್ಳದ್ದು, ತನಗೇ ನೋವುಂಟುಮಾಡಿಕೊಳ್ಳುವಂಥದ್ದು ಮತ್ತು ಇತರರಿಗೆ ಹಾನಿ ಬಯಸುವಂಥದ್ದು (೧೭.೧೯). ಗೀತಾಚಾರ್ಯನಿಗೆ ಯಾವುದಾದರೂ ತಾಂತ್ರಿಕ ಆಚರಣೆಯ ನೆನಪು ಬಂದಿದ್ದಿರಬಹುದು. ಮೂಲದಲ್ಲಿ ತಂತ್ರಶಾಸ್ತ್ರದ ವಿಧಿ-ವಿಧಾನಗಳು ಹಾಗೂ ಹಿನ್ನೆಲೆ ಬೇರೆಯೇ ಇವೆಯೆಂಬುದನ್ನು ನಾವಿಲ್ಲಿ ಗಮನಿಸಬೇಕು.

ಮುಂದಿನದು ದಾನ : ಬೇರೆಯವರ ಉಪಕಾರ ಸ್ಮರಣೆಗಾಗಿ ದಾನ ಮಾಡದಿರುವುದು, ಸತ್ಪಾತ್ರರಿಗೆ ದಾನ ಮಾಡುವುದು, ದಾನವು ಬೇರೊಂದು ರೂಪದಲ್ಲಿ ಲಭಿಸುತ್ತದೆಂಬ ಆಕಾಂಕ್ಷೆ ಇಲ್ಲದಿರುವುದು, ಇತ್ಯಾದಿಗಳು ಸಾತ್ವಿಕವೆನಿಸುತ್ತವೆ (೧೭.೨೦). ಇದಕ್ಕೆ ವ್ಯತಿರಿಕ್ತ ನೆಲೆಯಲ್ಲಿ ನಿಲ್ಲುವಂಥದು ರಾಜಸಿಕ ದಾನ (೧೭.೨೧). ಯಥಾಪ್ರಕಾರ, ತಾಮಸಿಕವಾದ್ದು ಅಪಾತ್ರರಿಗೆ, ಅವೇಳೆಯಲ್ಲಿ, ಸೂಕ್ತವಲ್ಲದೆಡೆಯಲ್ಲಿ, ಸತ್ಕಾರದ ಛಾಯೆ ಇಲ್ಲದೆ, ಮಾಡಲಾಗುವ ದಾನ (೧೭.೨೨ : ಅದೇಶಕಾಲೇ ಯದ್ದಾನಂ ಅಪಾತ್ರೇಭ್ಯಶ್ಚ ದೀಯತೇ । ಅಸತ್ಕೃತಂ ಅವಜ್ಞಾತಂ ತತ್ ತಾಮಸಂ ಉದಾಹೃತಂ ॥).

ಕಡೆಯಲ್ಲಿ ಶ್ರೀಭಗವಾನನು ಪ್ರಾಚೀನ ಸತ್ಸಂಪ್ರದಾಯವನ್ನು ಶ್ಲಾಘಿಸಿ ಅದರ ಪ್ರಕಾರವನ್ನು ಸೂಚಿಸಿದ್ದಾನೆ. ಅದು 'ಬ್ರಹ್ಮಾರ್ಪಣ' ಮನೋಭಾವವನ್ನು ಪ್ರಕಟಿಸುತ್ತದೆ. "ತತ್ ಸತ್" (ಅದು ಪರಮತತ್ವ) ಎಂಬುದು "ಬ್ರಹ್ಮನ್" ತತ್ವದ ನಿರೂಪಣೆ. ಆದ್ದರಿಂದ ಪ್ರಾಚೀನರು ಎಲ್ಲ ವೇದ ಮತ್ತು ಯಜ್ಞಗಳನ್ನು "ಓಂ ತತ್ ಸತ್" ಎಂದು ಭಾವಿಸಿಕೊಳ್ಳುತ್ತಿದ್ದರಂತೆ. ಆದ್ದರಿಂದ ಎಲ್ಲ ಯಜ್ಞ, ದಾನ, ತಪಸ್ಸು ಮತ್ತು ಇತರ ಕ್ರಿಯೆಗಳು "ಓಂ" ಎಂಬುದರಿಂದ ಆರಂಭವಾಗುವುದು ವೇದಗಳ ಅನುಸರಣೆ ಮಾಡುವವರ (ಬ್ರಹ್ಮವಾದಿನಾಂ) ಪದ್ಧತಿಯೆಂದು ಗೀತೆಯು ಹೇಳುತ್ತದೆ (೧೭.೨೪). "ತತ್" ಎಂಬುದರಿಂದ ಆರಂಭಿಸಿ ಮೋಕ್ಷದ ಆಕಾಂಕ್ಷೆಯುಳ್ಳವರು ಯಜ್ಞ-ದಾನಾದಿಗಳನ್ನು ಮಾಡುತ್ತಾರೆ (೧೭.೨೫). "ಸತ್" ಎಂಬುದನ್ನು ಉಚ್ಚರಿಸುವುದು ಸಾಧುತ್ವ ಸೂಚಕವಾದ್ದರಿಂದ ಅದನ್ನು ಎಲ್ಲ ಪ್ರಶಸ್ತವಾದ ಸಂದರ್ಭಗಳಲ್ಲೂ ಬಳಸಲಾಗುತ್ತದೆ (೧೭.೨೬) ಎನ್ನುತ್ತದೆ ಗೀತೆ. ಯಜ್ಞ, ತಪಸ್ಸು, ದಾನ, ಇತರ ಕ್ರಿಯೆಗಳು, ಎಲ್ಲವೂ "ಸತ್" ಎನಿಸಿಕೊಳ್ಳುತ್ತವೆ (೧೭.೨೭). ಈ ಯಾವುದೇ ಕ್ರಿಯೆಗಳನ್ನೂ ಶ್ರದ್ಧೆಯಿಲ್ಲದೆ ಮಾಡುವುದು "ಅಸತ್" ಎಂಬ ದೋಷಕ್ಕೆ ಕಾರಣವಾಗುತ್ತದೆ; ಅದರಿಂದ ಇಹದಲ್ಲಿ ಸುಖವಿಲ್ಲ, ಪರದಲ್ಲಿ ಶ್ರೇಯಸ್ಸೂ ಇಲ್ಲ (೧೭.೨೮).

ಗೀತೆಯು ಈ ಅಧ್ಯಾಯವನ್ನು "ಶ್ರದ್ಧಾತ್ರಯ ವಿಭಾಗಯೋಗ"ವೆಂದು ಕರೆದಿದೆ. ಇಲ್ಲಿ ದಾರ್ಶನಿಕ ಚಿಂತನೆಯ ಭಾಗವೇನೂ ಇಲ್ಲವೆಂದರೆ ತಪ್ಪಾಗುವುದಿಲ್ಲ. ಯಾಂತ್ರಿಕವಾಗಿ ಎಲ್ಲದರಲ್ಲೂ ಮೂರು ಪ್ರಕಾರಗಳನ್ನು ಗುರುತಿಸಲಾಗಿದೆ ಮತ್ತು ಶ್ರೇಷ್ಠ-ಕನಿಷ್ಠ ಎಂಬ ಲಕ್ಷಣಗಳನ್ನು ಆರೋಪಿಸಲಾಗಿದೆ; ಒಂದು ರೀತಿಯಲ್ಲಿ ಹದಿನಾರನೆಯ ಅಧ್ಯಾಯದ ಆಸುರೀ ಪ್ರವೃತ್ತಿಯ ಪುನರುಕ್ತಿಯು ಸಾಕಷ್ಟು ಪ್ರಮಾಣದಲ್ಲಿ ತುಂಬಿಕೊಂಡಿದೆ. ಕುರುಕ್ಷೇತ್ರದ ಯುದ್ಧಭೂಮಿಗೂ ಗೀತೆಗೂ ಸಂಬಂಧವಿಲ್ಲವೆಂದು ಆರಂಭದಲ್ಲೇ ನಾವು ತಿಳಿದುಕೊಂಡೆವು. ಹಾಗೇನಾದರೂ ಅಕಸ್ಮಾತ್ತಾಗಿ ಈ ಉಪದೇಶವನ್ನು ಯುದ್ಧಭೂಮಿಯಲ್ಲಿ ನೀಡಿದ್ದರೆ ಅದು ಅತ್ಯಂತ ಭೈರಿಗೆ ಹಿಡಿಸುವ ಪ್ರಸಂಗವಾಗಿರುತ್ತಿತ್ತೇನೋ ! ಗೀತೆಯು ತನ್ನ ಶ್ರೇಷ್ಠ-ಕನಿಷ್ಠ ಎಂಬ ಮಾನದಂಡವನ್ನು ಈ ಅಧ್ಯಾಯದಲ್ಲೂ ಎತ್ತಿಹಿಡಿದಿದೆ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

## ಅಭಿನಂದನೆ...

೨೦೧೭ನೇ ಸಾಲಿನ 'ವಿಭಾ ಸಾಹಿತ್ಯ ಪ್ರಶಸ್ತಿ'ಯು ಶ್ರೀ ಎಚ್. ಲಕ್ಷ್ಮೀನಾರಾಯಣ ಸ್ವಾಮಿ ಅವರ 'ತೊಗಲ ಚೀಲದ ಕರ್ಣ' ಎಂಬ ಖಂಡಕಾವ್ಯ ಸಂಕಲನದ ಹಸ್ತಪ್ರತಿಗೆ ದೊರಕಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

# ದೊಡ್ಡದು ಅನ್ನುವ ಹುಚ್ಚು ವ್ಯಸನ

ದೊಡ್ಡದು ಅನ್ನುವ ಪರ್ವದಲ್ಲಿ ಇಂದು ನಾವು ಬದುಕುತ್ತಿರುವಂತೆ ಕಾಣುತ್ತದೆ. ದೊಡ್ಡ ಡ್ಯಾಮು, ದೊಡ್ಡ ಬ್ಯಾಂಕು, ದೊಡ್ಡ ಐಟಿ, ಇಡೀ ದೇಶಕ್ಕೆ ಒಂದೇ ನೀಟ್ (ನ್ಯಾಷನಲ್ ಎಲಿಜಬಲಿಟಿ ಆಂಡ್ ಎಂಟ್ರೆನ್ಸ್ ಟೆಸ್ಟ್), ಇಡೀ ದೇಶಕ್ಕೆ ಸಿಬಿಎಸ್‌ಸಿಯ ಒಂದೇ ಪಠ್ಯಕ್ರಮ (ಸಿಲಬಸ್), ಇಡೀ ದೇಶಕ್ಕೆ ಒಂದೇ ಮಾರುಕಟ್ಟೆ , ಇಡೀ ದೇಶಕ್ಕೆ ಒಂದೇ ಆರ್ಥಿಕತೆ, ಸಣ್ಣ ಬ್ಯಾಂಕುಗಳನ್ನು ವಿಲೀನಗೊಳಿಸಿ ದೊಡ್ಡ ಬ್ಯಾಂಕು ಮಾಡುವುದು, ಬೃಹತ್ ಮನೆ (ಮುಖೇಶ್ ಅಂಬಾನಿ ಅವರ ೨೭ ಅಂತಸ್ತುಗಳ, ೧ ಲಕ್ಷ ಚ. ಅ. ವಿಸ್ತೀರ್ಣದ, ೧೬೮ ಕಾರುಗಳನ್ನು ನಿಲ್ಲಿಸಲು ಆರು ಅಂತಸ್ತುಗಳ ನೆಲಮಹಡಿ ಗ್ಯಾರೇಜ್, ೬೦೦ ನೌಕರರು, ಮೂರು ಹೆಲಿಪ್ಯಾಡುಗಳು, ನಾಲ್ಕು ಅಂತಸ್ತುಗಳಲ್ಲಿ ಹರಡಿರುವ ಉದ್ಯಾನವನ, ಸುಮಾರು ರೂ. ೬೦೦೦ ಕೋಟಿ ಬೆಲೆಯ ವಾಸದ ಮನೆ), ಸುಮಾರು ರೂ. ೩೦೦೦ ಕೋಟಿ ವೆಚ್ಚದ ೬೦೦ ಅಡಿ ಎತ್ತರದ ಸರ್ದಾರ್ ಪಟೇಲ 'ಏಕತೆ ವಿಗ್ರಹ', ರೂ. ೧೦೦೦೦೦ ಕೋಟಿ ವೆಚ್ಚದ ಬುಲೆಟ್ ರೈಲು... ಇವೆಲ್ಲ ಏನನ್ನು ಸೂಚಿಸುತ್ತವೆ? ದೇಶವು ದೊಡ್ಡದು ಅನ್ನುವುದರ ವ್ಯಸನವನ್ನು ಹಚ್ಚಿಕೊಂಡುಬಿಟ್ಟಿದೆ. ದೊಡ್ಡದು ಅನ್ನುವುದು ಇಂದು ಸರ್ಕಾರದ ನೀತಿಗಳ ಮಾರ್ಗದರ್ಶಿ ಸೂತ್ರವಾಗಿದೆ. ಆದರೆ ಈ ದೊಡ್ಡದು ಅನ್ನುವುದರ ವ್ಯಸನದ ಬಗ್ಗೆ ನಾವು ಯೋಚಿಸಬೇಕಾಗಿದೆ. ಜರ್ಮನ್ ಮೂಲದ ಬ್ರಿಟಿಷ್ ಅರ್ಥಶಾಸ್ತ್ರಜ್ಞ ಈ. ಎಫ್. ಶುಮಾಂಕರ್ 'ಸಣ್ಣದು ಸುಂದರ' ಎಂಬ ಪ್ರಣಾಳಿಕೆಯನ್ನು ಪ್ರತಿಪಾದಿಸಿದರು. 'ಬಿಗ್ಗರ್ ಈಸ್ ಬೆಟರ್' ಅನ್ನುವುದು ಅಪಾಯಕಾರಿ ಎಂಬುದನ್ನು ಅವರು ತೋರಿಸಿಕೊಟ್ಟರು. ಅಂದಮೇಲೆ ದೊಡ್ಡದು ಅಸಹ್ಯಕರ ಎಂದು ನಾವು ಹೇಳಬಹುದು. ಸಣ್ಣದು ಸುಂದರ ಪ್ರಣಾಳಿಕೆಗೆ ಅನುಗುಣವಾಗಿ ಶುಮಾಂಕರ್ ಅವರು ಮಧ್ಯವರ್ತಿ ಸ್ವರೂಪದ ತಂತ್ರಜ್ಞಾನ ಅಥವಾ ಸುಸೂಕ್ತ ತಂತ್ರಜ್ಞಾನ ಎಂಬುದನ್ನು ಅಭಿವೃದ್ಧಿಪಡಿಸುವುದರ ಬಗ್ಗೆ ಶ್ರಮಿಸಿದರು. ಮಧ್ಯಮಗತಿ ಅನ್ನುವುದು ಇಂದು ಯಾರಿಗೂ ಬೇಡವಾಗಿದೆ. ದೊಡ್ಡದು ಎಂಬ ಅತಿಯು ಅಭಿವೃದ್ಧಿಯ ಚಾಲಕ ಶಕ್ತಿಯಾಗಿಬಿಟ್ಟಿದೆ.

ಮುಖೇಶ್ ಅಂಬಾನಿ ಅವರ ಬೃಹತ್ ವಾಸದ ಮನೆಯ ಅಸಾಧಾರಣ ಸಂಪತ್ತಿನ–ಐಶ್ವರ್ಯದ ಅಸಹ್ಯಕರ ಪ್ರದರ್ಶನದ ಬಗ್ಗೆ ಪ್ರಖ್ಯಾತ ಉದ್ಯಮಪತಿ ರತನ್ ಟಾಟಾ ಅವರು 'ಇದು ಬಡವರ ಬಗೆಗಿನ ಔದಾಸೀನ್ಯದ ಪರಮೋಚ್ಚ ಸೂಚಿ' ಎಂದು ಟೀಕಿಸಿದರು. ಬುಲೆಟ್ ರೈಲಿನ ಬಗ್ಗೆ ತಜ್ಞರಿಂದ ಅಪಸ್ವರ ಕೇಳಿ ಬರುತ್ತಿದೆ. ನಮ್ಮದು ಪ್ರಧಾನವಾಗಿ ಬಹುಸಂಸ್ಕೃತಿಯ, ಬಹುಭಾಷೆಯ, ಬಹುಚರಿತ್ರೆಯ ನಾಡು. ಈ ರೀತಿಯ ಸಾಮಾಜಿಕ ವ್ಯವಸ್ಥೆಯಲ್ಲಿ ಇಡೀ ದೇಶಕ್ಕೆ ಒಂದು ನೀಟ್ ಪರೀಕ್ಷೆ ಏಕೆ ಬೇಕು? ಕಳೆದ ವರ್ಷ ನಡೆದ ನೀಟ್ ಪರೀಕ್ಷೆಯಲ್ಲಿ ೧೧ ಲಕ್ಷ ಮಕ್ಕಳು, ೧೯೯೦ ಪರೀಕ್ಷಾ ಕೇಂದ್ರದಲ್ಲಿ ಪರೀಕ್ಷೆ ಬರೆದಿದ್ದಾರೆ. ಈ ಬೃಹತ್ ಕಾರ್ಯವನ್ನು ಒಂದು ಕೇಂದ್ರದಿಂದ ನಡೆಸಲು ಸಾಧ್ಯವೋ? ಒಂದು ವೇಳೆ ನಡೆಸಬಹುದು ಎಂದರೂ ಅದರ ಅವಶ್ಯಕತೆ ಇದೆಯೆ? ಇಡೀ ದೇಶಕ್ಕೆ ಒಂದು ನೀಟ್ ಪರೀಕ್ಷೆ ನಡೆಸುವುದಕ್ಕೆ ಕಾರಣ ಶಿಕ್ಷಣದಲ್ಲಿ ಗುಣಮಟ್ಟವನ್ನು ಕಾಯ್ದುಕೊಳ್ಳುವುದು ಎಂದು ಹೇಳಲಾಗುತ್ತಿದೆ. ಶಿಕ್ಷಣ, ಪರೀಕ್ಷೆ, ಬೋಧನೆ ಇತ್ಯಾದಿಗಳಲ್ಲಿ ಗುಣಮಟ್ಟ ಕಾಯ್ದುಕೊಳ್ಳಲು ಇಡೀ ದೇಶಕ್ಕೆ ಒಂದು ಪರೀಕ್ಷಾ ವ್ಯವಸ್ಥೆ ಬೇಕು ಅನ್ನುವುದನ್ನು ಒಪ್ಪುವುದು ಸಾಧ್ಯವಿಲ್ಲ. ಕೇಂದ್ರದಿಂದ ಪರೀಕ್ಷೆ ನಡೆದರೆ ಮಾತ್ರ ಗುಣಮಟ್ಟ ಇರುತ್ತದೆ, ರಾಜ್ಯಗಳು ಅದನ್ನು ನಡೆಸಿದರೆ ಗುಣಮಟ್ಟ ಇರುವುದಿಲ್ಲ ಅಂದರೆ ಇದರ ಅರ್ಥವೇನು? ಐಟಿ ತಂತ್ರಜ್ಞಾನ ಲಭ್ಯವಿದೆಯೆಂದು ಇಂತಹ ಸಾಹಸಕ್ಕೆ ತೊಡಗುವುದು ದೇಶಕ್ಕೆ ಅಪಾಯ ಕಾರಿಯಾಗಬಹುದು. ತಲೆ ಗಟ್ಟಿ ಇದೆಯೆಂದು ಬಂಡೆಗೆ ಚಚ್ಚಿಕೊಳ್ಳಲು ಸಾಧ್ಯವೆ? ತಂತ್ರಜ್ಞಾನವೇ ಎಲ್ಲವೂ ಅಲ್ಲ ತಾನೆ? ಹೆಮ್ಮರದ ಅಡಿಯಲ್ಲಿ ಏನೂ ಬೆಳೆಯುವುದಿಲ್ಲ.

ಈ ಹಿನ್ನೆಲೆಯಲ್ಲಿ ಜಿಎಸ್‌ಟಿ ಸುಧಾರಣಾ ಕ್ರಮವನ್ನು ನೋಡಬೇಕು. ಈ ಕ್ರಮದ ಮೂಲದಲ್ಲಿಯೂ 'ಒಂದು ದೇಶ, ಒಂದು ಮಾರುಕಟ್ಟೆ, ಒಂದು ತೆರಿಗೆ, ಒಂದು ಆರ್ಥಿಕತೆ' ಅನ್ನುವ ಮಂತ್ರವನ್ನು ಪಠಿಸಲಾಗುತ್ತಿದೆ. ಅದರ ಅನುಷ್ಠಾನದ ಸಮಸ್ಯೆಗಳ ಬಗ್ಗೆ ತಕರಾರುಗಳಿವೆ. ಆದರೆ ಹೀಗೆ ಇಡೀ ದೇಶಕ್ಕೆ ಒಂದು ಅಪ್ರತ್ಯಕ್ಷ ತೆರಿಗೆ ಅವಶ್ಯಕತೆಯಿತ್ತೇ ಎಂಬ ಪ್ರಶ್ನೆಯನ್ನು ಇಲ್ಲಿ ಕೇಳಬೇಕಾಗುತ್ತದೆ. ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಅದರ ಐದು ಸಹವರ್ತಿ ಬ್ಯಾಂಕುಗಳನ್ನು ಇತ್ತೀಚೆಗೆ ವಿಲೀನಗೊಳಿಸಲಾಯಿತು. ಈಗಾಗಲೆ ಅವು ಅದರ ಸಹವರ್ತಿ ಸಂಸ್ಥೆಗಳಾಗಿದ್ದವು. ಈ ವಿಲೀನ ಬೇಕಿತ್ತೆ? ಅವುಗಳ ವಿಲೀನಕ್ಕೆ ಕೊಟ್ಟ ಅನೇಕ ಉತ್ತರಗಳಲ್ಲಿ ಅದು ಜಗತ್ತಿನಲ್ಲಿ ಬೃಹತ್ ಬ್ಯಾಂಕಾಗುತ್ತದೆ ಎಂಬುದು ಒಂದಾಗಿತ್ತು. ಜಗತ್ತಿನಲ್ಲಿಯೇ ಬೃಹತ್ ಬ್ಯಾಂಕಾದರೆ ಏನಾಗುತ್ತದೆ? ಕಳೆದ ಅನೇಕ ದಶಕಗಳಿಂದ ಅದು ನಮ್ಮ ಆರ್ಥಿಕತೆಯಲ್ಲಿ ಸೇವೆ ಸಲ್ಲಿಸುತ್ತಾ ಬಂದಿತ್ತು. ಈಗ ಅದರ ಸೇವೆ ಬೇರೆಯಾಗಿಬಿಡುತ್ತದೆಯೇ? ರಾಷ್ಟ್ರೀಕೃತ ಬ್ಯಾಂಕುಗಳೆಲ್ಲವನ್ನು ವಿಲೀನಗೊಳಿಸಿ ಒಂದು ಅಥವಾ ಎರಡು ದೊಡ್ಡ ಬ್ಯಾಂಕುಗಳನ್ನು ಮಾಡುವ ಕ್ರಮಕ್ಕೆ ಸರ್ಕಾರ ಮುಂದಾಗಿದೆ. ಇಲ್ಲಿರುವುದು ಬೃಹತ್ತಿನ ಒಂದು ವ್ಯಸನವೇ ಆಗಿದೆ !

**ಟಿ. ಆರ್. ಚಂದ್ರಶೇಖರ**

ಅದೇ ರೀತಿಯಲ್ಲಿ ಹಿಂದಿ ಭಾಷೆಯ ಬಗೆಗಿನ ಕೇಂದ್ರದ ಪೂರ್ವಗ್ರಹ ಪೀಡಿತ ಧೋರಣೆಯೂ ಕೂಡ ಬೃಹತ್ತಿನ ಸಂಗತಿಯೇ ಆಗಿದೆ. ಬಹುಸಂಖ್ಯಾತರು ಆ ಭಾಷೆಯನ್ನು ಆಡುತ್ತಾರೆ ಎಂಬುದು ಇಲ್ಲಿನ ತರ್ಕವಾಗಿದೆ.

ಒಟ್ಟಾರೆ ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ನಮ್ಮ ದೇಶದಲ್ಲಿರುವ ಒಕ್ಕೂಟ ವ್ಯವಸ್ಥೆಯನ್ನು ಏಕಾತ್ಮಕ ವ್ಯವಸ್ಥೆಯ ಕಡೆಗೆ ಒಯ್ಯುತ್ತಿರುವುದನ್ನು ಇಲ್ಲಿ ಕಾಣಬಹುದು. ಇದನ್ನು ಸೂಕ್ಷ್ಮವಾಗಿ ಪರಿಶೀಲಿಸ ಬೇಕಾಗಿದೆ. ದೊಡ್ಡದು ಅನ್ನುವುದು ಕೇಂದ್ರೀಕರಣದ ಸೂಚಿ. ಈ ಬೃಹತ್ತಿನ ವ್ಯಸನವು ನಮ್ಮ ದೇಶದಲ್ಲಿನ ರಾಜ್ಯಗಳ ಸ್ವತಂತ್ರ ಗುರುತನ್ನು ನಾಶಮಾಡುವ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಿರುವಂತೆ ಕಾಣುತ್ತದೆ. ಉದಾಹರಣೆಗೆ ನಮ್ಮ ರಾಜ್ಯದಲ್ಲಿದ್ದ ಮೈಸೂರು ಬ್ಯಾಂಕಿಗೆ ರಾಜ್ಯದ ಚರಿತ್ರೆಯೊಂದಿಗೆ, ಅದರ ಅಸ್ಮಿತೆಯೊಂದಿಗೆ ಸಂಬಂಧವಿತ್ತು. ನಮ್ಮ ರಾಜ್ಯದ ಬೆಳವಣಿಗೆಯೊಂದಿಗೆ ಅದೂ ಕೂಡ ಬೆಳೆಯುತ್ತಾ ಬಂದಿತ್ತು. ಅದೀಗ ಅಳಿಸಿಹೋಯಿತು. ನೀಟ್‌ನಿಂದಾಗಿ ರಾಜ್ಯವು ಅತ್ಯಂತ ಆದರ್ಶಪ್ರಾಯವಾಗಿ ನಡೆಸಿಕೊಂಡು ಬರುತ್ತಿದ್ದ ಮತ್ತು ದೇಶದಲ್ಲಿ ಹೆಸರುವಾಸಿಯಾಗಿದ್ದ ಸಿಇಟಿ ರದ್ದಾಗುತ್ತಿದೆ. ಒಂದು ಕಾಲದಲ್ಲಿ ಸಿಇಟಿ ಬರೆಯಲು ಬೇರೆ ಬೇರೆ ರಾಜ್ಯಗಳಿಂದ ವಿಶೇಷ ರೈಲುಗಳಲ್ಲಿ ಮಕ್ಕಳು ಬೆಂಗಳೂರಿಗೆ ಬರುತ್ತಿದ್ದರು. ಈ ಎಲ್ಲ ಬೆಳವಣಿಗೆಯಿಂದಾಗಿ ಮತ್ತು ಕೇಂದ್ರೀಕರಣ ಕ್ರಮಗಳಿಂದಾಗಿ ರಾಜ್ಯವು 'ಕರ್ನಾಟಕತ್ವ'ವನ್ನು ಕಳೆದುಕೊಳ್ಳುತ್ತಿದೆ. ಕವಿರಾಜಮಾರ್ಗಕಾರ ಹೇಳುವ 'ವಸುಧಾ ವಲಯ ವಿಲೀನ ವಿಶದ ವಿಷಯ ವಿಶೇಷಂ' ಅನ್ನುವ ಸೂತ್ರದಲ್ಲಿ ಪ್ರತಿಪಾದಿಸಿರುವಂತೆ 'ವಿಲೀನಗೊಂಡೂ ವಿಶಿಷ್ಟವಾಗಿ' ಉಳಿಯುವುದು ಇಂದು ಸಾಧ್ಯವಿಲ್ಲ. ನಮ್ಮ ಸಂವಿಧಾನದ ಕರ್ತೃಗಳು ವಿಲೀನ (ಏಕಾತ್ಮಕತೆ) ಮತ್ತು ವಿಶಿಷ್ಟಗಳ (ಒಕ್ಕೂಟ) ನಡುವೆ ಸಮತೋಲನವನ್ನು ಅದರಲ್ಲಿ ಸಾಧಿಸಿಕೊಂಡಿದ್ದರು. ನಮ್ಮ ಸಂವಿಧಾನವು ಒಕ್ಕೂಟ ವ್ಯವಸ್ಥೆಯಾಗಿ ಕಂಡುಬಂದರೂ ಅದರ ಮೂಲದಲ್ಲಿ ಏಕಾತ್ಮಕತೆ ಆಶಯ ಹರಿಯುತ್ತಿದೆ ಎಂದು ಟೀಕಾಕಾರರು ಹೇಳುತ್ತಿದ್ದಾರೆ. ಇಂದಿನ ಬೆಳವಣಿಗೆಗಳು ಈ ಟೀಕೆಗೆ ನೆಲೆಯನ್ನು ಒದಗಿಸುತ್ತಿರುವಂತಿದೆ. ಇಂದು ವಿಲೀನಕ್ಕೆ ಒತ್ತು ದೊರೆತು ವಿಶಿಷ್ಟತೆಯು ಅರ್ಥವಿಲ್ಲದ ಸಂಗತಿಯಾಗಿಬಿಟ್ಟಿದೆ. ಬೃಹತ್ತು ಅನ್ನುವುದನ್ನು ಬಿಟ್ಟರೆ ಬುಲೆಟ್ ರೈಲಿಗೆ ಯಾವುದೇ ಸಮರ್ಥನೆ ಸಾಧ್ಯವಿಲ್ಲ. ಅದು ಉಳ್ಳವರ ಹಿತಾಸಕ್ತಿಯನ್ನು ಮಾತ್ರ ಪೂರೈಸಬಲ್ಲದು. ಮೇಲಾಗಿ ಅದು ಬಂಡವಾಳ ಸಾಂದ್ರ–ಶ್ರಮ ಮಿತವ್ಯಯ ತಂತ್ರಜ್ಞಾನವನ್ನು ಆಧಾರ ಮಾಡಿಕೊಂಡಿರುವ ಸಾಹಸವಾಗಿದೆ. ಒಂದು ಲಕ್ಷ ಕೋಟಿ ಸಣ್ಣ

ಮೊತ್ತವಲ್ಲ. ಇದು ಕೇಂದ್ರದ ೨೦೧೬-೧೭ರ ಒಟ್ಟು ಸಾರ್ವಜನಿಕ ವೆಚ್ಚದ (ರೂ. ೨೪.೨೦ ಲಕ್ಷ ಕೋಟಿ) ಸುಮಾರು ಶೇ. ೪೮ರಷ್ಟಾಗುತ್ತದೆ. ಅರ್ಥಶಾಸ್ತ್ರದಲ್ಲಿನ ಮೊದಲ ಪಾಠವೆಂದರೆ ಇಡೀ ದೇಶಕ್ಕೆ ಒಂದು ಮಾರುಕಟ್ಟೆಯಿದ್ದರೆ ಅಂತಹ ವ್ಯವಸ್ಥೆಯು ಬೃಹತ್ ಆರ್ಥಿಕ ಬಿಕ್ಕಟ್ಟು ಸಂಭವಿಸಿದರೆ ಅದನ್ನು ನಿಭಾಯಿಸುವುದು ಸಾಧ್ಯವಿಲ್ಲ. ನಮ್ಮ ದೇಶ ೨೦೦೮ರಲ್ಲಿ ಜಾಗತಿಕ ಆರ್ಥಿಕ ಬಿಕ್ಕಟ್ಟನ್ನು ರವಷ್ಟಾದರೂ ಯಶಸ್ವಿಯಾಗಿ ನಿಭಾಯಿಸಿದ್ದರೆ ಅದರ ಮೂಲದಲ್ಲಿದ್ದ ವೈವಿಧ್ಯಮಯ ಮಾರುಕಟ್ಟೆ, ವೈವಿಧ್ಯಮಯ ಸರಕುಗಳ ಉತ್ಪಾದನೆ, ವೈವಿಧ್ಯಮಯ ಬೇಡಿಕೆ ಮುಂತಾದ ಬಹುವಚನ ವ್ಯವಸ್ಥೆಯ ಕಾಣಿಕೆ ಅಪಾರವಾಗಿತ್ತು. ಬಹುವಚನ ಮಾರುಕಟ್ಟೆಯಲ್ಲಿ ಒಂದು ಸರಕಿನ ಬೇಡಿಕೆ ಕುಸಿದರೆ ಅಥವಾ ದೇಶದ ಒಂದು ಪ್ರದೇಶದಲ್ಲಿ ಆರ್ಥಿಕ ಬಿಕ್ಕಟ್ಟು ಉಂಟಾದರೆ ಅದನ್ನು ಬೇರೆ ಸರಕಿನ ಬೇಡಿಕೆ ಮೂಲಕ ಅಥವಾ ಬೇರೆ ಪ್ರದೇಶದಲ್ಲಿನ ಆರ್ಥಿಕ ಬೆಳವಣಿಗೆ ಮೂಲಕ ನಿರ್ವಹಿಸಬಹುದು. ಒಂದು ಮಾರುಕಟ್ಟೆ, ಒಂದು ತೆರಿಗೆ, ಒಂದು ಬ್ಯಾಂಕು, ಒಂದು ಆರ್ಥಿಕತೆಯಲ್ಲಿ ಇದು ಸಾಧ್ಯವಾಗುವುದಿಲ್ಲ. ಆದ್ದರಿಂದ ದೊಡ್ಡದಾದ, ಬೃಹತ್ತಾದ, ದೈತ್ಯಸದೃಶ ವ್ಯವಸ್ಥೆಯು ಪರಿಸರಕ್ಕೆ ಅಪಾಯಕಾರಿ, ನಮ್ಮ ಒಕ್ಕೂಟ ವ್ಯವಸ್ಥೆಗೆ ಮೃತ್ಯುಪ್ರಾಯ ಮತ್ತು ಅನವಶ್ಯಕ. ಈ ಬಗ್ಗೆ ನಾವು ಗಂಭೀರವಾಗಿ ಯೋಚಿಸಬೇಕಾಗಿದೆ.

**ಟಿ. ಆರ್. ಚಂದ್ರಶೇಖರ**
ಸಮಾಲೋಚಕರು, ನಾಲ್ಕನೆ ರಾಜ್ಯ ಹಣಕಾಸು ಆಯೋಗ
ದಕ್ಷಿಣ ಭಾಗ, ಮೂರನೆಯ ಮಹಡಿ
ಖನಿಜಭವನ, ರೇಸ್ ಕೋರ್ಸ್ ರೋಡ್
ಬೆಂಗಳೂರು – ೫೬೦ ೦೦೧



# ಕ್ರಿಕೆಟ್ ಈಸ್ ಇಂಡಿಯಾ ಮತ್ತು ಇಂಡಿಯಾ ಈಸ್ ಕ್ರಿಕೆಟ್



(೧)

ಕ್ರಿಕೆಟ್ ಋತುವಿನಲ್ಲಂತೂ ಸಂಪೂರ್ಣ ಭಾರತ
ಮುದುಡಿಕೊಂಡು ಕ್ರಿಕೆಟ್ ಮೈದಾನದಷ್ಟಾಗಿಬಿಡುತ್ತದೆ
ಅದರಲ್ಲೂ ಫೈನಲ್ ಮ್ಯಾಚ್ ಆದರಂತೂ
ಮೈದಾನಕ್ಕಿಂತಲೂ ಮುದುಡಿಕೊಂಡು
ಪಿಚ್‌ನಷ್ಟಾಗಿಬಿಡುತ್ತದೆ
ಅದರಲ್ಲೂ ಹಣಾಹಣಿ ಪಾಕಿಸ್ತಾನದೊಡನಿದ್ದರಂತೂ
ಮಾಶಾಅಲ್ಲಾಹ್ ! ಹಲ್ಲಾಗುಲ್ಲಾ !
ಭಾರತ ಪಿಚ್‌ಗಿಂತ ಇನ್ನಷ್ಟು-ಮತ್ತಷ್ಟು ಮುದುಡಿ
ತೆಂಡೂಲ್ಕರ್‌ನ ಬ್ಯಾಟ್ ಆಗಿಬಿಡುತ್ತದೆ
ಹಾಗಾಗಿಯೇ ಸಚಿನ್ ಅಷ್ಟೊಂದು
ರೆಕಾರ್ಡ್ ಮುರಿದದ್ದು
ಪಿಚ್‌ನಲ್ಲಿ ಅವನೊಬ್ಬನೇ ಅಲ್ಲ ಸಮಗ್ರ ದೇಶ ಓಡುತ್ತಿತ್ತು.

(೨)

ಬೆಣ್ಣೆ ಕದ್ದ ಮುದ್ದುಕೃಷ್ಣನ
ಆ...ಎಂದು ಬಾಯಿ ತೆರೆಸಿದಾಗ
ಬೆಸ್ತುಬಿದ್ದ ಯಶೋದೆ ನೋಡಿದ್ದು-
ಈ ಬಾರಿ ಮುದ್ದುಕೃಷ್ಣನ ಬಾಯೊಳಗೆ
ಅಖಂಡ ಭೂಮಂಡಲದ ಸ್ಥಾನದಲ್ಲಿ
ತಿರುಗುತಿರುವ ಕ್ರಿಕೆಟ್ ಚೆಂಡು !
ಈ ಅನುಪಮ ದೃಶ್ಯ ನೋಡಿ
ಮುದ್ದುಕೃಷ್ಣನ ಬಿಗಿದಪ್ಪಿ ಚುಂಬಿಸದೆ
ಯಶೋದೆ ತೆಪ್ಪಗಿದ್ದಾಳಾದರೂ ಹೇಗೆ...
ಬರಸೆಳೆದು ತುಟಿಗಳ ಹಣೆಯಮೇಲೊತ್ತಿ
ಹೇಳಿದಳು, ಓ ನನ್ನ ಮುದ್ದು ಸಚಿನ್ !

(೩)

ಭಾರತದ ಸಂಬಂಧ ಕ್ರಿಕೆಟ್‌ನೊಡನೆ
ಹಾಗೆಯೇ ಕ್ರಿಕೆಟ್‌ನ ಸಂಬಂಧ ಭಾರತದೊಡನೆ
ಆಳವಾಗಿ ಎಷ್ಟೊಂದು ಬೇರೂರಿದೆಯೆಂದರೆ,
ಭಾರತದ ಸೋಲಿಗೆ ಸಮಗ್ರ ದೇಶದ ಮುಖ
ಬಿಳಿಚಿಕೊಳ್ಳುತ್ತದೆ ಅಷ್ಟೇ ಏಕೆ,
ವಿವರ್ಣವಾಗಿಬಿಡುತ್ತದೆ
ಅಂಥಲ್ಲಿ ವಿರಾಟ್‌ನ ಸಿಕ್ಸರ್ ಕಂಡು
ಒಬ್ಬ ಭಕ್ಕಾ ಕೂಡ ಕೆಲಕಾಲದ ಮಟ್ಟಿಗೆ
ಗಂಡಾಗಿಬಿಡುತ್ತಾನೆ !

(೪)

ನಿನ್ನೆ ಫೈನಲ್ ಇತ್ತು, ಭಾರತದಿಂದ
ಒಂದೇ ಒಂದು ಆತ್ಮವೂ ಬಂದಿಲ್ಲ
ಯಮಲೋಕಕ್ಕೆ, ಪಾಪ
ಸಿಕ್ಕಾಪಟ್ಟೆ ಬೇಜಾರಾಗಿ ಯಮಧರ್ಮ
ಚಚ್ಚಿಕೊಳ್ಳುತ್ತಿದ್ದನಂತೆ ತಲೆ-ತಲೆ
ಪ್ರಾಣ ತೆಗೆಯಲು ಕಳಿಸಿದ ಯಮದೂತರಲ್ಲಿ
ಕೆಲವರು ನೋಡುತ್ತಿದ್ದರಂತೆ ಟಿ.ವಿ.
ಕೆಲವರು ಕೇಳುತ್ತಿದ್ದರಂತೆ ಕಾಮೆಂಟರಿ

(೫)

ನಮ್ಮ ಬೆಳೆ ನಮ್ಮ ಹಸಿವಿನ ಅನುಪಾತಕ್ಕಿಂತ
ಸಿಕ್ಕಾಪಟ್ಟೆ ಕಮ್ಮಿಯಿದೆ
ನಮಗೆ ಆ ಬಗ್ಗೆ ಖಂಡಿತವಾಗಿಯೂ ದುಃಖವಿಲ್ಲ
ದುಃಖವಿದೆಯೆಂದಾದರೆ ಇಷ್ಟೆ,
ನಮ್ಮ ರನ್‌ಗಳು ನಮ್ಮ ಎದುರಾಳಿಗಳಿಗಿಂತ
ಇಷ್ಟೇಕೆ ಕಮ್ಮಿಯಿವೆ !

(೬)

ಹಾಲಿಲ್ಲದ ಅಮ್ಮನ ಬರಡೆದೆ ಚೀಪುತ್ತ
ಹಸುಳೆಯ ಉಸಿರಾಟ ನಿಂತುಹೋದಾಗ
ನಮ್ಮ ಎದೆ ನಡುಗುವುದೇ ಇಲ್ಲ
ನಮ್ಮ ಎದೆ ನಡುಗುವುದಾಗ
ಧೋನಿಯಂತಹ ಆಟಗಾರ
ಸುಲಭವಾಗಿ ಸಿಕ್ಕ ಕ್ಯಾಚ್
ಹಿಡಿಯದೇ ಹೋದಾಗ

(೭)

ನೋಡಿಲ್ಲವೆ ಮತ್ತೆ ಕೆಲವರು
ಧೋನಿ-ವಿರಾಟ್‌ರಂತೆಯೇ
ಬೌಲಿಂಗ್-ಬ್ಯಾಟಿಂಗ್ ಮಾಡುವುದನ್ನು
ಆರೋಪ ಮಾಡದಿರಿ ಯಾವುದೇ ವಿಧದಲ್ಲಿ...
ಕ್ರಿಕೆಟ್ ಒಂದು ಅಮಲು
ಬೇಕಿದ್ದರೆ ಅನುಭವಿಸಿ ಆತ್ಮಾನಂದದಲಿ
ಆಟವನ್ನು ಆಟದಂತೆ ನೋಡಿ
ಬಳಿಯದಿರಿ ಅದಕ್ಕೆ ಯಾವುದೇ ಬಣ್ಣವನ್ನು

(೮)

ಹಸಿವು-ಬಡತನ-ನಿರುದ್ಯೋಗ
ಬೆಲೆಯೇರಿಕೆ-ಭಯೋತ್ಪಾದನೆ
ನಮ್ಮ ಸುತ್ತ-ಮುತ್ತ ತುಂಬಿ ತುಳುಕುತ್ತಿವೆ
ಅದೆಷ್ಟೋ ರಾಷ್ಟ್ರೀಯ ನೋವು-ವೇದನೆಗಳಿವೆ
ಇವೆಲ್ಲವುಗಳ ನಡುವೆ ನಗು-ನಗುತ್ತ
ಚಪ್ಪಾಳೆ ತಟ್ಟುತ್ತ ಟಿ.ವಿ.ಯಲ್ಲಿ
ಮ್ಯಾಚ್ ವೀಕ್ಷಿಸುವ ನಾವು ನಿಜಕ್ಕೂ
ಯಾವುದೇ ಮ್ಯಾನ್ ಆಫ್ ದಿ ಮ್ಯಾಚ್ -
ಗಿಂತ ಕಮ್ಮಿಯಿದ್ದೇವೆಯೆ !

ಹಿಂದಿ ಮೂಲ : **ಘನಶ್ಯಾಮ ಅಗ್ರವಾಲ್**, ಕನ್ನಡ ಅನುವಾದ : **ಡಾ॥ ಮಾಧವಿ ಎಸ್. ಭಂಡಾರಿ**
'ಮಂದಾರ', ಪದ್ಮನಾಭನಗರ, ಡಯಾನಾ ಥಿಯೇಟರ್ ರಸ್ತೆ ಹಿಂಭಾಗ, ಉಡುಪಿ – ೫೭೬ ೧೦೧

# ಧರ್ಮದ ರೂಪಗಳು, ಅಸ್ಮಿತೆ ಮತ್ತು ಹಿಂಸೆ

**ಇಂಗ್ಲಿಷ್ ಮೂಲ : ಮುಕುಂದ ರಾವ್**
**ಕನ್ನಡಕ್ಕೆ : ಸಂತೋಷ್ ನಾಯಕ್ ಆರ್.**

**ನಾ**ನು ಧರ್ಮ ವಿರೋಧಿ ಅಲ್ಲ ಎಂಬುದನ್ನು ಮೊದಲೇ ಹೇಳಿಬಿಡುತ್ತೇನೆ. ನಾನು ನಿರೀಶ್ವರವಾದಿಯೂ ಅಲ್ಲ ಮತ್ತು ನನಗೆ ಹಿಂಸೆಯಲ್ಲಿಯೂ ನಂಬಿಕೆಯಿಲ್ಲ. ಏಕೆಂದರೆ ಹಿಂಸೆಯನ್ನು ಹಿಂಸೆಯಿಂದಲೇ ತೊಡೆಯಲಾಗುವುದಿಲ್ಲ ಎಂಬ ಹಿರಿಯರ ಹೇಳಿಕೆಯು ಸಂಪೂರ್ಣ ಸತ್ಯವಾದುದು.

ಸಂಬಂಧಗಳಲ್ಲಿ ಸಂಘರ್ಷ ಇರುವುದು ಅನಿವಾರ್ಯವೇ ಸರಿ, ಇದು ಯಾವುದೇ ಬಗೆಯ ಸಂಬಂಧಗಳಿರಬಹುದು, ಪೋಷಕರ ಮತ್ತು ಮಕ್ಕಳ ನಡುವಿನ ಸಂಬಂಧವಿರಬಹುದು, ಪತಿ ಮತ್ತು ಪತ್ನಿಯ ನಡುವಿನ ಸಂಬಂಧವಿರಬಹುದು, ಬೇರೆ ಬೇರೆ ಧರ್ಮ ಮತ್ತು ರಾಜಕೀಯ ವಿಚಾರಧಾರೆಗಳಿಗೆ ಸೇರಿದ ಜನರ ಮಧ್ಯೆಯೂ ಇರಬಹುದು ಅಥವಾ ದೇಶಗಳ ನಡುವೆಯೂ ಕೂಡ ಇರಬಹುದು. ನಮಗೆ ತಿಳಿದಿರುವುದು ಮಾತ್ರ ಸರಿಯಾದದ್ದು ಎಂಬ ನಂಬಿಕೆಯಿಂದಾಗಿ ಇಲ್ಲಿ ಸಂಘರ್ಷ ಉಂಟಾಗುತ್ತದೆ. ನಾವೆಲ್ಲರೂ ನಮ್ಮ ಧರ್ಮ ಮಾತ್ರ ಸತ್ಯವಾದದ್ದು, ನಮ್ಮ ಮೌಲ್ಯಗಳು ಮಾತ್ರ ಶ್ರೇಷ್ಠವಾದದ್ದು – ಹೀಗೆ ಈ ರೀತಿಯ ಖಚಿತವಾದ ನಿಲುವುಗಳನ್ನು ಹೊಂದಿರುತ್ತೇವೆ ಮತ್ತು ಇದೇ ಒಂದು ಸಮಸ್ಯೆಯಾಗಿದೆ ಹಾಗೂ ಸಂಘರ್ಷಗಳ ಮೂಲವಾಗಿದೆ.

ಆದರೆ ಗಾಂಧೀಜಿ ಹೇಳುವ ಹಾಗೆ, ನಮಗೆ ಶುದ್ಧ ಸತ್ಯ ಎಂದರೇನೆಂದು ತಿಳಿದಿಲ್ಲ ಹಾಗಾಗಿ ನಮಗೆ ತಿಳಿದಿರುವ ನಮ್ಮ ದೃಷ್ಟಿಕೋನವೇ ಶ್ರೇಷ್ಠವಾದದ್ದು ಮತ್ತು ಇದು ಸರ್ವಕಾಲಕ್ಕೂ, ಸರ್ವರಿಗೂ ಉತ್ತಮವಾದದ್ದು ಎಂದು ನಾವು ವಾದಿಸಲಾಗುವುದಿಲ್ಲ. ನಮಗೆ ಸಿಕ್ಕಿರುವುದೆಲ್ಲಾ ಕೇವಲ ಸಾಪೇಕ್ಷ ಸತ್ಯ; ನಮ್ಮ ಇತಿಹಾಸ, ನಮ್ಮ ಭೂತಕಾಲ, ವರ್ತಮಾನ, ನಮ್ಮ ಅನುಭವಗಳು, ನಮಗಿರುವ ಆಶಯಗಳು, ಭವಿಷ್ಯದ ಕುರಿತಾದ ಕಲ್ಪನೆಗಳು ಇವೆಲ್ಲಾ ನಮಗೆ ಸಾಪೇಕ್ಷ ಸತ್ಯಗಳನ್ನು ಕಟ್ಟಿಕೊಡುತ್ತವೆ. ಹಾಗಾಗಿ, ಸಾಪೇಕ್ಷ ಸತ್ಯಗಳ ಜಗತ್ತಿನಲ್ಲಿ ಜೀವಿಸುತ್ತ, ಸಂಘರ್ಷಾತ್ಮಕ ಸಿದ್ಧಾಂತಗಳು ಮತ್ತು ಆದರ್ಶಗಳ ನಡುವೆ ಸಿಲುಕಿರುವ ನಮಗೆ ಸತ್ಯವನ್ನು ಕಂಡುಕೊಳ್ಳಲು ಇರುವ ಏಕೈಕ ಮಾಧ್ಯಮವೆಂದರೆ ಅಹಿಂಸೆಯೊಂದೇ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಸಾಪೇಕ್ಷ ಸತ್ಯಗಳಿಂದ ಕೂಡಿರುವ ಜಗತ್ತಿನಲ್ಲಿ ವಾಸಿಸುತ್ತ, ಅಪರಿಪೂರ್ಣವಾದ, ಇನ್ನೂ ವಿಕಾಸವಾಗುತ್ತಿರುವ ಸಮಾಜದೊಳಗಿರುವ, ದೇವರೂ ಆಗಿರದ ಅಥವಾ ಆತ್ಯಂತಿಕ ಸತ್ಯದ ಒಡೆತನವನ್ನೂ ಹೊಂದಿರದ ಮನುಷ್ಯನು ಇತರರನ್ನು ಶಿಕ್ಷಿಸುವ, ಕೊಲ್ಲುವ ಅಥವಾ ನಾಶಗೊಳಿಸುವ ಹಕ್ಕನ್ನಾಗಲಿ ಅಥವಾ ಸಮರ್ಥನೆಯನ್ನಾಗಲಿ ಹೊಂದಿರುವುದಿಲ್ಲ. ಆದ್ದರಿಂದಲೇ ಅಹಿಂಸೆಯೊಂದೇ ಸಂಘರ್ಷಗಳನ್ನು ಪರಿಹರಿಸುವ ಏಕಮಾತ್ರ ಮಾಧ್ಯಮವಾಗಬೇಕು. ಏಕೆಂದರೆ ಅಹಿಂಸೆಗೆ ಮಾತ್ರ ಪೀಡಿಸುವವನ ಮತ್ತು ಪೀಡಿತನ ನಡುವೆ ಸಮಾನ ಅಂಶವಾಗಿರುವ ಮನುಷ್ಯತ್ವವನ್ನು ಅರಿತುಕೊಳ್ಳಲು ಮತ್ತು ತಮ್ಮ ತಮ್ಮ ಸ್ವಾತಂತ್ರ್ಯ ಮತ್ತು ಸಂತೋಷಗಳನ್ನು ಸಾಧಿಸಿಕೊಳ್ಳುವ ಸೃಜನಶೀಲ ಅವಕಾಶಗಳನ್ನು ಒದಗಿಸಿಕೊಡಬಲ್ಲುದು.

ಅಹಿಂಸೆಯಲ್ಲಿ ಖಚಿತವಾದ ವಿಶ್ವಾಸವನ್ನಿರಿಸಿಕೊಂಡಿದ್ದ ಡಾ॥ ಅಂಬೇಡ್ಕರ್‌ರವರು ಮನುಷ್ಯರ ನಡುವಿನ ಸಂಘರ್ಷಗಳನ್ನು ಪ್ರಜಾಪ್ರಭುತ್ವ ಪ್ರಕ್ರಿಯೆಗಳು, ಶಿಕ್ಷಣ, ಮಾತುಕತೆಗಳು, ಸಾರ್ವಜನಿಕ ಜಾಗೃತಿ ಮೂಡಿಸುವುದು, ಕಡೆಗೆ ಪ್ರತಿಭಟನೆಗಳ ಮೂಲಕವಾಗಿ ಕೂಡ (ಪ್ರಜಾಸತ್ತಾತ್ಮಕ ಮತ್ತು ಅಹಿಂಸಾ ಮಾದರಿಗಳಲ್ಲಿ) ಸೃಜನಾತ್ಮಕವಾಗಿ ಹಾಗೂ ಸಮರ್ಥವಾಗಿ ನಿರ್ವಹಿಸಲು ಸಾಧ್ಯವೆಂದು ತೋರಿಸಿಕೊಟ್ಟಿರುವಂತಹ ಮಾದರಿ ನಮಗೆ ದಾರಿಯಾಗಬೇಕು. ಈ ಎಚ್ಚರಿಕೆಯ ಅಂಶವನ್ನು ಗಮನದಲ್ಲಿರಿಸಿಕೊಂಡು, ಧರ್ಮದ ಸ್ವಭಾವ ಮತ್ತದರ ವಿವಿಧ ರೂಪಗಳು, ಅಸ್ಮಿತೆಯ ಸಮಸ್ಯಾತ್ಮಕ ಸ್ವರೂಪಗಳು ಹಾಗೂ ಸಂಘರ್ಷ ಮತ್ತು ಹಿಂಸೆಯ ಹೊರತಾಗಿ ಇರಬಹುದಾದ ಪರ್ಯಾಯ ಮಾರ್ಗಗಳ ಕುರಿತು ಚರ್ಚಿಸೋಣ.

ಎಲ್ಲ ಧರ್ಮಗಳೂ ಎರಡು ಬದಿಯನ್ನು ಹೊಂದಿವೆ; ಒಂದು ಬದಿಯು ಬಹು ಉದಾತ್ತವಾದ ಕಲೆ ಮತ್ತು ಅತ್ಯದ್ಭುತ ವಾಸ್ತುಶಿಲ್ಪವನ್ನು ಪ್ರೇರೇಪಿಸುವ, ಜ್ಞಾನೋದಯದ ಮತ್ತು ಔನ್ನತ್ಯದ ಮೂಲವಾಗಿದೆ. ರಿಲಿಜನ್ ಎಂಬ ಪದ ಲ್ಯಾಟಿನ್ ಭಾಷೆಯ ರಿ–ಲಿಜಿಯೊ ಎಂಬುದರಿಂದ ಬಂದಿದೆ. ಅದರರ್ಥ 'ಮತ್ತೆ ಸಂಪರ್ಕಿಸುವ, ಕೂಡಿಸುವ, ಮೂಲಕ್ಕೆ ಕರೆದೊಯ್ಯುವ, ನಮ್ಮ ನಿಜವಾದ ಸ್ಥಿತಿಗೆ ಒಯ್ಯುವ' ಎಂದು. ಭಾರತೀಯ ಪರಿಕಲ್ಪನೆಯಾದ ಧರ್ಮ, ಧೃ ಎಂಬ ಧಾತುವಿನಿಂದ ವ್ಯುತ್ಪನ್ನವಾಗಿದ್ದು, ಅದರರ್ಥ 'ಎತ್ತಿ ಹಿಡಿಯುವ, ಆಧಾರ ಅಥವಾ ತಾಳಿಕೊಳ್ಳುವ, ಉಳಿಸಿಕೊಳ್ಳುವ' ಎಂಬರ್ಥಗಳನ್ನು ಹೊಂದಿದ್ದು, ಇದನ್ನೇ ಕೆಲವೊಮ್ಮೆ ರಿಲಿಜನ್ ಎಂಬುದಕ್ಕೆ ಸಮಾನವಾಗಿ ಬಳಸಲಾಗುತ್ತದೆ. ಆದರೆ ಇದು ರಿಲಿಜನ್‌ಗೆ ಸಮಾನಾರ್ಥಕ ಪದವಲ್ಲ. ಏಕೆಂದರೆ ಧರ್ಮದ ಪರಿಕಲ್ಪನೆ ಸ್ವಲ್ಪ ಸಂಕೀರ್ಣವಾದುದು. ಅದು ಬಹಳಷ್ಟು ವಿಚಾರಗಳನ್ನು ಸೂಚಿಸುತ್ತದೆ. ಆದರೆ ವಾಸ್ತವದಲ್ಲಿ ಯೋಗ ಎಂಬ ಪರಿಕಲ್ಪನೆ (ಕ್ಲೀಷೆ ಎನಿಸಿದರೂ, ಇತ್ತೀಚೆಗೆ ಬಹಳ ದುರುಪಯೋಗಕ್ಕೊಳಗಾದ ಪದ) ಯುಜ್ ಎಂಬ ಧಾತುವಿನಿಂದ ಹೊಮ್ಮಿದ್ದು ಅದರರ್ಥ ಕೂಡಿಸು, ಸೇರಿಸು, ಒಂದಾಗಿಸು ಮುಂತಾದವು ಲ್ಯಾಟಿನ್‌ನ ರಿ–ಲಿಜಿಯೊ ಪದಕ್ಕೆ ಅತ್ಯಂತ ಸಮೀಪದ್ದಾಗಿದೆ.

ನಾವು ಧಾರ್ಮಿಕ ಅನ್ವೇಷಣೆ ಎಂದು ಕರೆಯುವಂಥದ್ದು ಹೀಗೆ 'ಮತ್ತೆ ಸಂಪರ್ಕಿಸುವ', 'ಒಂದಾಗುವ', ಮೂಲಸ್ಥಾನಕ್ಕೆ ಹಿಂದಿರುಗುವ' ನಮ್ಮ ಅಭಿಲಾಷೆಯಿಂದ ಪ್ರೇರಿತವಾಗಿರುತ್ತದೆ. ಇದು ಸತ್ಯಾನ್ವೇಷಣೆಯ, ಶೋಧನೆಯ, ಆಧ್ಯಾತ್ಮಿಕ ಪಯಣವನ್ನು ಪ್ರಾರಂಭಿಸಲು ಕಾರಣವಾಗುತ್ತದೆ. ಉದಾಹರಣೆಗೆ ಕೆಲವರನ್ನು ಹೆಸರಿಸುವುದಾದರೆ, ಬುದ್ಧ, ಬಸವಣ್ಣ ಮತ್ತು ರಮಣ ಮಹರ್ಷಿಗಳಂತಹ ಅನೇಕ ಸಂತರು ಮತ್ತು ಋಷಿಗಳ ಜೀವನದಲ್ಲಷ್ಟೇ ಅಲ್ಲದೆ ಇನ್ನೂ ಅನೇಕ ಜನರ ಜೀವನದಲ್ಲಿ ಧರ್ಮದ ಈ ಅಂಶವಿರುವುದನ್ನು

ಧರ್ಮವು ಮೂಲತಃ ಒಳ್ಳೆಯದೇ ಆಗಿದ್ದು, ಈ ಕಗ್ಗೊಲೆಗಳೆಲ್ಲಾ ಹಾದಿತಪ್ಪಿದ ನಡವಳಿಕೆಗಳು ಮತ್ತು ಎಲ್ಲಾ ಹತ್ಯಾಕಾಂಡಗಳು ಅಡ್ಡದಾರಿ ಹಿಡಿದವರ ಮತ್ತು ಮೂಲಭೂತವಾದಿಗಳ ಕೃತ್ಯವೆಂದು ನಂಬುವುದು ಅತ್ಯಂತ ಸರಳ ಹಾಗೂ ಮುಗ್ಧವಾಗಿಬಿಡುತ್ತದೆ. ಏಕೆಂದರೆ ಎಲ್ಲಾ ಧರ್ಮಗಳೂ ವಿಭಜಿಸುವ ಪ್ರಜ್ಞೆಯಿಂದಲೇ ಉದ್ಭವಿಸಿದ್ದು, ಒಳಗೂ ಹೊರಗೂ ತಾನೇ ಮಿತಿಯನ್ನು ಕಲ್ಪಿಸುವಂಥದು ಆಗಿರುವಂತೆಯೇ, ತಾವಿರುವ ನೆಲೆಯಿಂದ ಮೇಲೇರುವ ತವಕವನ್ನು ಜನರಲ್ಲಿ ಹುಟ್ಟಿಸುವುದರೊಂದಿಗೆ ದೇವರ ಹೆಸರಲ್ಲಿ ಕೊಲ್ಲುವುದನ್ನು ಸುಲಭ ಮತ್ತು ಪಾಪಪ್ರಜ್ಞೆರಹಿತ ಕೃತ್ಯವನ್ನಾಗಿಸಿದೆ ಎಂಬ ವಿಚಾರವನ್ನು ನಾವು ಗಮನಿಸದಿದ್ದರೆ ಅತ್ಯಂತ ದೊಡ್ಡ ಪ್ರಮಾದವಾಗುತ್ತದೆ.

ಕಾಣಬಹುದಾಗಿದ್ದು, ಇದು ಸತ್ಯ ಸಾಕ್ಷಾತ್ಕಾರಕ್ಕಾಗಿ ನಡೆಸಿದ ಪವಿತ್ರ ಮತ್ತು ವೈಯಕ್ತಿಕ ಅನ್ವೇಷಣೆಯಾಗಿದ್ದು, ಇದು ಸಾಮಾನ್ಯವಾಗಿ ಅನಿರ್ವಚನೀಯ ಹಾಗೂ ಅವರ್ಣನೀಯ ಸಂಗತಿಯಾಗಿರುತ್ತದೆ.

ಈಗ ಮೊದಲಿನದಕ್ಕೆ ಸಂಪೂರ್ಣ ತದ್ವಿರುದ್ಧವಾದ, ಧರ್ಮದ ಮತ್ತೊಂದು ಬದಿಯನ್ನು ನೋಡೋಣ. ಇದು ತನ್ನನ್ನು ತಾನು ಎರಡು ಸ್ವರೂಪಗಳಲ್ಲಿ ವ್ಯಕ್ತಪಡಿಸಿಕೊಳ್ಳುತ್ತದೆ. ಮೊದಲನೆಯದು, ದೇವರನ್ನು ನಂಬುವ ಮತ್ತು ಆರಾಧಿಸುವ ಆಧಾರದ ಮೇಲೆ ಶ್ರದ್ಧೆಯ ಪದ್ಧತಿಯಾಗಿ ಕಾರ್ಯ ನಿರ್ವಹಿಸುತ್ತದೆ. ಇದಕ್ಕೆ ಸಂಬಂಧಿಸಿದಂತೆ ಕೆಲ ನೈತಿಕ ನಿಯಮಗಳು ಅಥವಾ ಆದೇಶಗಳು ಅಥವಾ ನಿಯಮಗಳಿದ್ದು, ಇವು ನಿಗದಿತ ಗುರಿಯನ್ನು (ಧಾರ್ಮಿಕ) ಸಾಕ್ಷಾತ್ಕರಿಸಿಕೊಳ್ಳುವ ಸಲುವಾಗಿ ವಿಧಿಸಲ್ಪಟ್ಟಿರುವಂಥವು. ಎರಡನೆಯದು ಕೆಡುಕಿನ ಮುಖವಾಗಿದ್ದು ಸಂಘಟನಾತ್ಮಕ, ವ್ಯವಸ್ಥಿತ, ಅಧಿಕಾರಯುತ ಸ್ವರೂಪದ್ದಾಗಿದ್ದು ಇದು ಆಳ್ವಿಕೆಯ, ಒಡಕುಂಟುಮಾಡುವ, ದಬ್ಬಾಳಿಕೆಯ ಮತ್ತು ಹಿಂಸೆಯ ನೆಲೆಗಳಲ್ಲಿ ಹರಡಿಕೊಂಡಿದೆ. ಬಲವಂತದ ಮತಾಂತರಗಳು, ಕ್ರೌರ್ಯ ಮತ್ತು ಮಾರಣಹೋಮಗಳು ದೇವರ ಮತ್ತು ಧರ್ಮದ ಹೆಸರಿನಲ್ಲೇ ನಡೆದಿದ್ದು, ಇದು ಧರ್ಮದ ಕೆಡುಕಿನ, ಕುಟಿಲ ಮುಖದ ಅನಾವರಣವಾಗಿ ಕಾಣುತ್ತದೆ.

ಹಾಗಾಗಿ, ಜೀವನದ ಅರ್ಥವನ್ನು ಹುಡುಕುವ, ಔನ್ನತ್ಯದ ಅನ್ವೇಷಣೆಯನ್ನು ಮಾಡುವ, ಸಕಲ ಜೀವರಾಶಿಗಳೆಡೆಗೂ ಪ್ರೇಮ ಮತ್ತು ಕರುಣೆ ಸೂಸುವ ಧರ್ಮವು ನಿಜವಾಗಿಯೂ ನಮ್ಮ ಅಸ್ತಿತ್ವದಲ್ಲಿನ ಒಂದು ಉನ್ನತವಾದ ಮತ್ತು ಸುಂದರವಾದ ಅಂಶವಾಗಿ ಕಾಣುತ್ತದೆ. ಆದರೆ ಇಷ್ಟಕ್ಕೆ ಮಾತ್ರ ನಿಲ್ಲದೆ, ಧರ್ಮಗಳು ಅಥವಾ ಕೆಲ ಧಾರ್ಮಿಕ ವ್ಯಾಖ್ಯಾನಗಳು ದೇವರ ಹೆಸರಿನಲ್ಲಿ ಅತ್ಯಂತ ಘೋರ ಸಂಘರ್ಷಗಳನ್ನು, ಭಯ, ದ್ವೇಷ, ಒಡಕು ಹಾಗೂ ಅತ್ಯಂತ ಕ್ರೂರ ಅಪರಾಧಗಳನ್ನು ಉಂಟುಮಾಡುವಲ್ಲಿ ಪ್ರಮುಖ ಕಾರಣವಾಗುತ್ತಿರುವ ವಿಚಾರವನ್ನು ಅರಿಯಲು ಮತ್ತು ಒಪ್ಪಿಕೊಳ್ಳಲು ನಾವು ವಿಫಲರಾಗಬಾರದು.

ದೇವರ ಬಗೆಗಿನ ಆದರ್ಶಗಳು ಬಹುತೇಕ ಜನರನ್ನು ತಮ್ಮ ಆಂತರ್ಯದೆಡೆಗೆ ತಿರುಗಲು ಪ್ರೇರೇಪಿಸಿವೆ ಮತ್ತು ಅದರಿಂದಾಗಿಯೇ ಅನೇಕರು ಅತ್ಯುನ್ನತ ಕಲಾವಿದರಾಗಿ, ಕವಿಗಳಾಗಿ, ಅನುಭಾವಿಗಳಾಗಿ ಮತ್ತು ಕರುಣಾಮಯಿಗಳಾದ ಮಾನವ ಜೀವಿಗಳಾಗಿ ಬದಲಾಗಿದ್ದಾರೆ ಮತ್ತು ಅವೇ ಆದರ್ಶಗಳು ಘೋರ ಹಿಂಸೆಗಳಿಗೆ, ಇತಿಹಾಸದ ಅತ್ಯಂತ ಕ್ರೂರ ಅಪರಾಧಗಳಿಗೆ ಮೂಲ ಕಾರಣವಾಗಿದ್ದನ್ನು ಸಹ ನಾವು ಕಾಣಬಹುದು. ಮುಂಬೈ ಸ್ಫೋಟಗಳು, ಗುಜರಾತ್ ಹತ್ಯಾಕಾಂಡ, ಲಂಡನ್ ಮತ್ತು ಪ್ಯಾರಿಸ್‌ನಲ್ಲಿನ ಬಾಂಬ್ ದಾಳಿಗಳು ಮತ್ತು ಇತ್ತೀಚಿಗೆ ಭಾರತದಲ್ಲೂ ಧರ್ಮದ ಹೆಸರಿನಲ್ಲಿ ನಡೆದಿರುವ ಕಗ್ಗೊಲೆಗಳು ಮತ್ತೆ ಮತ್ತೆ ಧರ್ಮದ ಅಪಾಯಕಾರಿ ಮುಖವನ್ನು ಬಹಿರಂಗಗೊಳಿಸುತ್ತಿವೆ.

ಧರ್ಮವು ಮೂಲತಃ ಒಳ್ಳೆಯದೇ ಆಗಿದ್ದು, ಈ ಕಗ್ಗೊಲೆಗಳೆಲ್ಲಾ ಹಾದಿತಪ್ಪಿದ ನಡವಳಿಕೆಗಳು ಮತ್ತು ಎಲ್ಲಾ ಹತ್ಯಾಕಾಂಡಗಳು ಅಡ್ಡದಾರಿ ಹಿಡಿದವರ ಮತ್ತು ಮೂಲಭೂತವಾದಿಗಳ ಕೃತ್ಯವೆಂದು ನಂಬುವುದು ಅತ್ಯಂತ ಸರಳ ಹಾಗೂ ಮುಗ್ಧವಾಗಿಬಿಡುತ್ತದೆ. ಏಕೆಂದರೆ ಎಲ್ಲಾ ಧರ್ಮಗಳೂ ವಿಭಜಿಸುವ ಪ್ರಜ್ಞೆಯಿಂದಲೇ ಉದ್ಭವಿಸಿದ್ದು, ಒಳಗೂ ಹೊರಗೂ ತಾನೇ ಮಿತಿಯನ್ನು ಕಲ್ಪಿಸುವಂಥದು ಆಗಿರುವಂತೆಯೇ, ತಾವಿರುವ ನೆಲೆಯಿಂದ ಮೇಲೇರುವ ತವಕವನ್ನು ಜನರಲ್ಲಿ ಹುಟ್ಟಿಸುವುದರೊಂದಿಗೆ ದೇವರ ಹೆಸರಲ್ಲಿ ಕೊಲ್ಲುವುದನ್ನು ಸುಲಭ ಮತ್ತು ಪಾಪಪ್ರಜ್ಞೆರಹಿತ ಕೃತ್ಯವನ್ನಾಗಿಸಿದೆ ಎಂಬ ವಿಚಾರವನ್ನು ನಾವು ಗಮನಿಸದಿದ್ದರೆ ಅತ್ಯಂತ ದೊಡ್ಡ ಪ್ರಮಾದವಾಗುತ್ತದೆ.

ನಮ್ಮ ಸಮಸ್ಯೆ ತೀವ್ರತರದ ಆಕ್ರಮಣಶೀಲತೆಯಲ್ಲಿಲ್ಲ, ಆದರೆ 'ಸ್ವಾರ್ಥ ರಹಿತ' ಆದರ್ಶಗಳೆಡೆಗಿನ ತೀವ್ರವಾದ ಅಂಧಾಭಿಮಾನದಲ್ಲಿದೆ. ಅದು ಧಾರ್ಮಿಕ ಅಸ್ಮಿತೆ, ಅಥವಾ ಎಡ, ಬಲ ಮುಂತಾದ ರಾಜಕೀಯ ಪಂಥ, ಆದರ್ಶಗಳೆಡೆಗಾಗಿರ ಬಹುದು. ನಾವು ದ್ವೇಷ ಪ್ರವೃತ್ತಿಯವರಾಗಿಲ್ಲದೇ ಇರಬಹುದು, ಆದರೆ ನಮಗಿರಬಹುದಾದ ಯಾವುದಾದರೂ ಮತಧರ್ಮದೆಡೆಗಿನ ನಿಷ್ಠೆಯೇ ನಮ್ಮನ್ನು ಕಟುಕರನ್ನಾಗಿಸುತ್ತದೆ. ವಾಸ್ತವವೇನೆಂದರೆ ತಿರಸ್ಕಾರ ಅಥವಾ ದ್ವೇಷಗಳು, ಪ್ರೇಮ ಅಥವಾ ನಿಷ್ಠೆಗೆ ಸಂಬಂಧಿಸಿದ ಹೊರತಾಗಿ ಪ್ರತ್ಯೇಕ ಅಸ್ತಿತ್ವವನ್ನೇನೂ ಹೊಂದಿಲ್ಲ. ಮತ್ತೊಂದು ರೀತಿಯಲ್ಲಿ ಹೇಳಬೇಕೆಂದರೆ, ದ್ವೇಷವು 'ಪ್ರೇಮ' ಅಥವಾ 'ನಿಷ್ಠೆ'ಯ ಗರ್ಭದಿಂದಲೇ ಜನಿಸಿದೆ.

ಈ ದಂಗೆಗಳು, ಹತ್ಯೆಗಳು ಹಾಗೂ ನರಮೇಧಗಳನ್ನು ಸೂಕ್ಷ್ಮವಾಗಿ ಗಮನಿಸಿ. ಇದರಲ್ಲಿ ಭಾಗವಹಿಸುವ ವ್ಯಕ್ತಿಗಳು ಈ ಬಗೆಯ ವಿನಾಶಕಾರಿ ಪ್ರವೃತ್ತಿಗಳಲ್ಲಿ ತೊಡಗಿಕೊಳ್ಳುವುದು, ಕೊಲೆಗೈಯ್ಯುವುದು ಇತ್ಯಾದಿ ಕೃತ್ಯಗಳನ್ನು ಮಾಡುವುದಾದರೂ ಹೇಗೆ? ಭಯ, ಅವಮಾನ, ಅನ್ಯಾಯಕ್ಕೊಳಗಾದ ಭಾವನೆಗಳು – ಯಾವುದೇ ಬಗೆಯ ಪ್ರಭುತ್ವ ಅಥವಾ ಶಕ್ತಿಗಳಿಂದ – ಅಥವಾ ತಮ್ಮ ಮಹತ್ತರವಾದ ಉನ್ನತ ಆಶಯಗಳು ಹಾಗೂ ಮಹಾನ್ ಯೋಜನೆಗಳಲ್ಲಿ ಇತರರು ಹಸ್ತಕ್ಷೇಪ ನಡೆಸುತ್ತಿದ್ದಾರೆಂಬ ಭಾವನೆಗಳಿಂದಾಗಿ ದಮನಕಾರಿ ಕೃತ್ಯಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ಮನುಷ್ಯನ ಆಂತರ್ಯದೊಳಗಿರುವ ಈ ವಿನಾಶಕ ಪ್ರವೃತ್ತಿ ಆತನ 'ರಕ್ಷಣಾತ್ಮಕ' ಗುಣವುಳ್ಳದ್ದೆಂದೂ ಅದು ನಾಶಕಾರಕ ಸ್ವಭಾವ ಅಥವಾ 'ಸಾವಿನ ಬಯಕೆ'ಯಿಂದ ಆಗಿದ್ದಲ್ಲವೆಂದೂ ಕೆಲವರು ವಾದಿಸಬಹುದು.

ಹಾಗಾದರೆ ಈಗ ಮತ್ತೊಂದು ಪ್ರಶ್ನೆ, ಇವೆಲ್ಲಾ ಯಾವುದನ್ನು ರಕ್ಷಿಸುವುದಕ್ಕಾಗಿ ? ವಾಸ್ತವವಾಗಿಯೇ ಏನಾದರೂ ಅಪಾಯ ಉಂಟಾಗಿದೆಯಾ ಅಥವಾ ಇವು ಕೇವಲ ಕಾಲ್ಪನಿಕ ಮತ್ತು ಉತ್ಪ್ರೇಕ್ಷೆಯಾಗಿರಬಹುದಾ ? ಕೆಲವೊಮ್ಮೆ ಇವು ಪೂರ್ತಿಯಾಗಿ ಕಾಲ್ಪನಿಕವಲ್ಲದೆ ಹೋದರೂ ಉತ್ಪ್ರೇಕ್ಷಿತ ಸಂಗತಿಯಂತೂ ಆಗಿರುತ್ತವೆ. ಈ ಬಗೆಯ ಭ್ರಾಂತ ಮನಸ್ಥಿತಿಗೆ ಹಲವಾರು ಅಂಶಗಳು ಕಾರಣವಾಗಿರುತ್ತವೆ. ಪೂರ್ವಗ್ರಹಪೀಡಿತವಾದ, ಏಕಪಕ್ಷೀಯವಾದ ಇತಿಹಾಸದ ಓದಿನಿಂದ ಬಂದಿರಬಹುದಾದ ಮಿಥ್ಯಾಪ್ರಜ್ಞೆ, (ತರ್ಕರಹಿತ)ಅಸ್ಮಿತೆಗಳು, ಮತಾಂಧತೆಯಿಂದ ಪ್ರಚೋದಿಸಲ್ಪಟ್ಟ ಪೂರ್ವಗ್ರಹಗಳು, ಸಾಮಾಜಿಕ/ರಾಜಕೀಯ ಗುಂಪುಗಳೊಡನೆ ಅನರ್ಹ ಗುರುತಿಸಿಕೊಳ್ಳುವಿಕೆ ಮತ್ತು ಅವುಗಳ ಸಿದ್ಧಾಂತಗಳು ಹಾಗೂ ನಂಬಿಕೆಗಳನ್ನು ವಿಮರ್ಶೆರಹಿತವಾಗಿ ಒಪ್ಪಿಕೊಳ್ಳುವುದು, ಇವುಗಳೆಲ್ಲಾ ಕಾರಣವಾಗಿರುತ್ತವೆ. ಈ ಹಿನ್ನೆಲೆಯಲ್ಲಿ 'ನ್ಯಾಯ'ವನ್ನು ಗಳಿಸುವ ಕಲ್ಪನೆ ಸಹ ಸ್ವಯಂ ಅತಿಕ್ರಮಣವಾಗಿ, ಆದರ್ಶವಾಗಿ, ವ್ಯಕ್ತಿಗಳನ್ನೂ, ಗುಂಪುಗಳನ್ನೂ ದ್ವೇಷದ ಕೃತ್ಯಗಳಲ್ಲಿ ತೊಡಗುವಂತೆ ಪ್ರೇರೇಪಿಸಬಲ್ಲುದು.

ಸೇಡು ತೀರಿಸಿಕೊಳ್ಳುವುದು ಎನ್ನುವುದು ನಾವು ಆಗಾಗ ಆಡುವ ಯುದ್ಧ ಎಂಬ ನಾಟಕದ ಅತ್ಯಂತ ಮಹಾನ್ ಹಾಗೂ ಅಸಹ್ಯಕರ ಭಾಗ. 'ಕಣ್ಣಿಗೆ ಕಣ್ಣು' ಎಂಬ

## ಅಭಿನಂದನೆಗಳು....

ವಿವಿಧ ಕ್ಷೇತ್ರಗಳಲ್ಲಿ ೨೦೧೭ರ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪಡೆದ ಕೆಳಕಂಡ ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದವರಿಂದ ಅಭಿನಂದನೆಗಳು

| | |
|---|---|
| **ನ್ಯಾ. ಎಚ್. ಎನ್. ನಾಗಮೋಹನ ದಾಸ್** | *(ನ್ಯಾಯಾಂಗ)* |
| **ಬಸವರಾಜ ಸಬರದ** | *(ಸಾಹಿತ್ಯ)* |
| **ವೈದೇಹಿ** | *(ಸಾಹಿತ್ಯ)* |
| **ಸಿ. ಕೆ. ಗುಂಡಣ್ಣ** | *(ರಂಗಭೂಮಿ)* |
| **ರಾಮಚಂದ್ರ ಗುಹಾ** | *(ಸಂಕೀರ್ಣ)* |
| **ಪ್ರೊ॥ ಬಿ. ಗಂಗಾಧರ ಮೂರ್ತಿ** | *(ಸಂಕೀರ್ಣ)* |
| **ಸಿ. ಯತಿರಾಜು** | *(ಕೃಷಿ – ಪರಿಸರ)* |
| **ಕುಸುಮಾ ಶಾನುಭಾಗ್** | *(ಮಾಧ್ಯಮ)* |
| **ಡಾ॥ ಎಂ. ಆರ್. ಶ್ರೀನಿವಾಸನ್** | *(ವಿಜ್ಞಾನ – ತಂತ್ರಜ್ಞಾನ)* |
| **ಡಾ॥ ಲೀಲಾವತಿ ದೇವದಾಸ್** | *(ವೈದ್ಯಕೀಯ)* |
| **ನಾಗನೂರು ವಚನ ಅಧ್ಯಯನ ಕೇಂದ್ರ ಹಾಗೂ ಪ್ರಕಾಶನ** | *(ಸಂಘ – ಸಂಸ್ಥೆ)* |

ಮಾದರಿಯ ಸಂದೇಶಗಳ, ರೋಚ್ಚೆಬ್ಬಿಸುವ, ಆಕರ್ಷಕ ಹಾಗೂ ಮಂತ್ರಮುಗ್ಧರನ್ನಾಗಿಸುವ ಕಥಾವಸ್ತುಗಳನ್ನುಳ್ಳ, ಹಾಲಿವುಡ್‌ನಿಂದ ನಮ್ಮ ಬಾಲಿವುಡ್‌ನವರೆಗೂ ಇರುವ ಜನಪ್ರಿಯ ಚಲನಚಿತ್ರಗಳಿಂದ ಹಿಡಿದು ಗುಜರಾತ್‌ನ ಹತ್ಯಾಕಾಂಡ, ಆಫ್ಘಾನಿಸ್ತಾನದ ಮರುಭೂಮಿಯಲ್ಲಿ ಅಮೇರಿಕ ನಡೆಸುತ್ತಿರುವ 'ಪರಮನ್ಯಾಯ'ದ ಹೆಸರಿನ ಒಮ್ಮುಖ ಯುದ್ಧ, ಇರಾಕ್‌ನ ಸ್ವಾಧೀನ, ೯/೧೧ರ ದಾಳಿ ಮತ್ತು ಪ್ಯಾರಿಸ್‌ನ ಸ್ಫೋಟಗಳ ತನಕ ಹಬ್ಬಿದೆ.




ಒಟ್ಟು ಪರಿಣಾಮದಲ್ಲಿ, ಈ ಕೊಲೆಗಳು ಅಥವಾ ದ್ವೇಷದ ಕೃತ್ಯಗಳು ಮತ್ತು ಅಪಾಯಕಾರಿ ನಡವಳಿಕೆಗಳು ಆತನ ಸ್ವಾರ್ಥ ಹಾಗೂ ಆವೇಶಕ್ಕಿಂತಲೂ, ಮತಾಂಧತೆ ಮತ್ತು ಅನ್ಯ ಆದರ್ಶಗಳಿಗಿರುವ ಸಮರ್ಪಣಾ ಭಾವವೇ ಕಾರಣವಾಗಿರುತ್ತದೆ. ಹಾಗಾಗಿಯೇ ಆರ್ಥರ್ ಕೊಸ್ಲರ್ 'ಮನುಷ್ಯನು ತನ್ನ ವೈಯಕ್ತಿಕ ಉದ್ದೇಶಗಳಿಗೋಸ್ಕರ ನಡೆಸಿದ ಅಪರಾಧ ಕೃತ್ಯಗಳಿಗಿಂತಲೂ ಹೆಚ್ಚಿನ ಕಗ್ಗೊಲೆಗಳನ್ನು ತಾನು ನಂಬಿದ ದೇವರು, ರಾಜ, ದೇಶ ಅಥವಾ ರಾಜಕೀಯ ವ್ಯವಸ್ಥೆಗಳಿಗೋಸ್ಕರ ನಡೆಸಿದ್ದಾನೆ ಎನ್ನುವುದನ್ನು ಯಾವುದೇ ಇತಿಹಾಸಕಾರ ನಿರಾಕರಿಸಲಾರ' ಎಂದು ಅಭಿಪ್ರಾಯಪಡುತ್ತಾನೆ.

ಮತ್ತೊಂದು ರೀತಿಯಲ್ಲಿ ಹೇಳಬೇಕೆಂದರೆ, ಒಬ್ಬ ವ್ಯಕ್ತಿಯು ಯಾವುದಾದರೂ ಗುಂಪಿನೊಡನೆ ಗುರುತಿಸಿಕೊಳ್ಳುವುದು – ಅದು ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಆಗಿರಬಹುದು – ಹಾಗೆಯೇ ರಾಜಕೀಯ ಆದರ್ಶಗಳಿಗಾಗಿರಬಹುದು, ಅದು ಸ್ವ-ಅತೀತ ಕೃತ್ಯವಾಗಿ ಅವನ ಸ್ವಸಮರ್ಥನೆಯ ಅಥವಾ ಆಕ್ರಮಣಶೀಲ ಮನೋಭಾವದ ಅಭಿವ್ಯಕ್ತಿಯಾಗಿ ಅವನು ಇತರರನ್ನು ಕೊಲ್ಲಲು, ಹಾನಿಮಾಡಲು ಅಥವಾ ಈ ಕಾರಣಕ್ಕಾಗಿ ತನ್ನ ಪ್ರಾಣವನ್ನೇ ಬಲಿಕೊಡಲು ಮುಂದಾಗುವಂತೆ ಮಾಡುತ್ತದೆ.

ವ್ಯಕ್ತಿಯೊಬ್ಬನ ಹತ್ಯೆಯಾದಾಗ, ಅದು ಸಮೂಹದಿಂದಲೇ ಆದಾಗ, ಅನೇಕರು ಸೇರಿ ಮಾಡಿದಾಗ ಅದನ್ನು ಕೊಲೆ ಎಂದು ಪರಿಗಣಿಸದೆ ಬಲಿ ಎಂದು ಪರಿಗಣಿಸುವುದುಂಟು. ಹಿಂದೆ ಬುಡಕಟ್ಟು ಗುಂಪುಗಳಲ್ಲಿದ್ದ ತಮ್ಮ ಅಸೂಯಾಪರನಾದ ದೈವಕ್ಕೆ ಮಾನವ ರಕ್ತವನ್ನು ಅರ್ಪಿಸುತ್ತಿದ್ದ ಕ್ರಿಯೆಗಿಂತ ಇದು ಭಿನ್ನವಾದುದಲ್ಲ. ಮತ್ತೂ ವಿಶೇಷವೆಂದರೆ ಈ ಕೃತ್ಯಗಳು ಅನೈತಿಕವಾದದ್ದೆಂದು ಪರಿಗಣಿಸದೆ ಉನ್ನತ ಆದರ್ಶಕ್ಕಾಗಿ ಮಾಡಲಾದ ಮಹಾನ್ ಕೃತ್ಯ ಎಂದು ನೋಡಲಾಗುತ್ತದೆ. ಹಾಗಾಗಿ ಇಲ್ಲಿ ಅನೈತಿಕತೆ ಎಂಬುದು ಸಮಸ್ಯೆ ಆಗಿರದೆ ನೈತಿಕತೆಯ ಪರಿಕಲ್ಪನೆಯೇ ಸಮಸ್ಯೆ ಆಗಿದೆ. ಅನ್ಯಾಯದ ವಿಚಾರವಲ್ಲ, ನ್ಯಾಯದ ಪರಿಕಲ್ಪನೆಯೇ ಇಲ್ಲಿ ಅಪಾಯಕಾರಿಯಾಗಿದೆ. ಬಲಿಯನ್ನು ಕೇಳುವ ನ್ಯಾಯ !!

ಧಾರ್ಮಿಕ ಕೃತಿಗಳು (ಎಲ್ಲಾ ತಾತ್ವಿಕ, ಆಧ್ಯಾತ್ಮಿಕ ಅಥವಾ ಅನುಭಾವಗಳ ಗ್ರಂಥಗಳಿಗೆಲ್ಲ ಇದು ಅನ್ವಯಿಸುವುದಿಲ್ಲ) –ಪೌರ್ವಾತ್ಯ ಅಥವಾ ಪಾಶ್ಚಾತ್ಯದವುಗಳಾಗಿರಬಹುದು ಅವು ಮಾನವನ ಅಸ್ತಿತ್ವದ ಮೂಲಭೂತ ಸಂಕಟಗಳನ್ನು, ಪ್ರಶ್ನೆಗಳನ್ನು ಮುಕ್ತವಾಗಿ ಕೇಳಲಾಗದ ಹಾಗೆ ಅದುಮುವ, ತಡೆಗಟ್ಟುವ ಕೆಲಸಗಳನ್ನು ಮಾಡುತ್ತವೆ. ಜೀವನದ ಸಮಸ್ಯೆಗಳಿಗೆ ಉತ್ತರಗಳನ್ನು ಹಾಗೂ ಪರಿಹಾರಗಳನ್ನು ನೀಡುವಲ್ಲಿ ಈ ಎಲ್ಲಾ ಗ್ರಂಥಗಳು ವಿಫಲವಾಗಿವೆ. ಆದರೂ ನಾವು ಅವುಗಳನ್ನು ಆರೋಗ್ಯಕರ ವೈಚಾರಿಕ ದೃಷ್ಟಿಕೋನದಿಂದ ಗಮನಿಸಲು ಸಿದ್ಧರಿಲ್ಲ. ಹಾಗಾಗಿ ಇದೊಂದು ವಿಚಿತ್ರ ಸನ್ನಿವೇಶವಾಗಿದೆ. ಈ ಧರ್ಮಗ್ರಂಥಗಳು ನಮ್ಮ ಸಮಸ್ಯೆಗಳಿಗೆ ಪರಿಹಾರವಾಗುವ ಬದಲು ನಮ್ಮ ಸಮಸ್ಯೆಗಳ ಬಹುಮುಖ್ಯ ಅಂಶವಾಗಿ ಪರಿಣಮಿಸಿವೆ ಎಂದು ನಾವು ಪ್ರಚೋದನಕಾರಿ ಅಥವಾ ಧರ್ಮವಿರೋಧಿಯಾಗದೆಯೇ ಹೇಳಬಹುದು.

ವಿಜ್ಞಾನ, ರಾಜಕೀಯ ಅಥವಾ ಮಾನವಿಕ ವಿಚಾರಗಳಲ್ಲಿ ಮೂಡುತ್ತಿರುವ ಹೊಸ ಪ್ರಜ್ಞೆಯ ಹಿನ್ನೆಲೆಯಲ್ಲಿ ಗಮನಿಸಿದಾಗ ಊಳಿಗಮಾನ್ಯ ಪದ್ಧತಿ, ಜಾತಿ ವ್ಯವಸ್ಥೆ, ಗುಲಾಮಗಿರಿ, ಬಾಲ್ಯ ವಿವಾಹ, ಸತಿ ಪದ್ಧತಿ ಇತ್ಯಾದಿಗಳೆಲ್ಲವೂ ಮಾನವ ನಿರ್ಮಿತವೆಂದೂ, ಇವು ಮನುಷ್ಯನ ಸ್ವಾತಂತ್ರ್ಯ, ನ್ಯಾಯ ಹಾಗೂ ಮಾನವೀಯತೆಯ ವಿರೋಧಿಯೆಂದೂ ಸುಲಭವಾಗಿ ಸಾಧಿಸಿ ತೋರಿಸಬಹುದು. ಹಾಗೆಯೇ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳು ಸಹ ಮಾನವ ನಿರ್ಮಿತವಾಗಿದ್ದು, ಅವುಗಳನ್ನು ದೇವರ ಹಸ್ತಕ್ಷೇಪವಿಲ್ಲದೆಯೇ ಬದಲಾಯಿಸಿಕೊಳ್ಳಬಹುದು. ಈ ಧಾರ್ಮಿಕ ಗ್ರಂಥಗಳೆಲ್ಲವೂ ಮಾನವ ನಿರ್ಮಿತವಾಗಿದ್ದು ಎಂದು ಸಾಧಿಸಿ ತೋರಿಸಲು ಬಹುತೇಕ ಅಸಾಧ್ಯವಾಗಿರುವ ಈ ಕಾಲಘಟ್ಟದಲ್ಲಿ ಇವೆಲ್ಲವನ್ನೂ ಮೀರಿ ಈ ವಿರೋಧದ ಅನೈತಿಕತೆಗಳಿಗೆ, ಪ್ರತ್ಯೇಕತೆಗೆ ಹೊರತಾದ ಉತ್ತಮ ಜಗತ್ತನ್ನು ಮರುನಿರ್ಮಿಸುವುದು ಸಾಧ್ಯವಿದೆ.

ಪವಿತ್ರ ಗ್ರಂಥಗಳನ್ನು ಪ್ರಶ್ನಿಸುವುದು ಅಥವಾ ಅವುಗಳ ಸರ್ವಾಧಿಕಾರವನ್ನು ತಿರಸ್ಕರಿಸಿ ನಮ್ಮ ಗೌರವಕ್ಕೆ ಧಕ್ಕೆ ತರುವ, ಸ್ವಾತಂತ್ರ್ಯವನ್ನು ನಾಶಪಡಿಸುವುದು ಹಾಗೂ ಅವುಗಳನ್ನು ತ್ಯಜಿಸುವುದು ಎಂದರೆ ನಾವು ನಿರೀಶ್ವರವಾದ ಅಥವಾ ಭರವಸೆ ರಹಿತ ನಿರಾಕರಣವಾದವನ್ನು ಅಪ್ಪಿಕೊಳ್ಳುವುದು ಎಂದರ್ಥವಲ್ಲ. ಅಥವಾ ದೇವಾಲಯಗಳನ್ನು, ಚರ್ಚುಗಳನ್ನು ನಾಶಪಡಿಸಿ, ಧರ್ಮಗ್ರಂಥಗಳನ್ನು ಸುಟ್ಟುಹಾಕಬೇಕಾಗಿಯೂ ಇಲ್ಲ. ಹಾಗೆಯೇ ಜೀವನದ ಅಲೌಕಿಕತೆಯನ್ನು, ವಿಶ್ವದ ಅದ್ಭುತವನ್ನು, ಭೂಮಿಯ ಸೌಂದರ್ಯವನ್ನು ನಿರಾಕರಿಸುತ್ತಾ, ಕರುಣೆಯಂತಹ ಶುದ್ಧವಾದ ಹಾಗೂ ವ್ಯಕ್ತಿಯನ್ನು ರೂಪಾಂತರಿಸಬಲ್ಲ ಗುಣವನ್ನು ತಿರಸ್ಕರಿಸುವುದೂ ಅಲ್ಲ.

ಮನುಷ್ಯ ಜೀವನದ ಪವಿತ್ರತೆಗೆ ಹಾಗೂ ನವಿರಾದ ಜೀವನ ಪ್ರೀತಿಗೆ ಯಾವುದೇ ಬಗೆಯ ಗ್ರಂಥಗಳ ದೃಢೀಕರಣ, ಅವು ಎಷ್ಟೇ ಪುರಾತನ ಹಾಗೂ ಗಾಢ ಪ್ರಭಾವವುಳ್ಳದ್ದೋ ಆಗಿದ್ದರೂ ಸಹ ನಮಗೆ ಬೇಕಾಗಿಲ್ಲ. ಈ ಗ್ರಂಥಗಳು, ಅವು ಪೂರ್ವದ್ದೇ ಆಗಿರಲಿ ಪಶ್ಚಿಮದ್ದೇ ಆಗಿರಲಿ, ಅವು ನಮ್ಮ ಜೀವನದ ಪ್ರಸ್ತುತ ಅನುಭವ ಹಾಗೂ ತಿಳಿವಳಿಕೆಗಳ ಆಧಾರದ ಮೇಲೆ ದೃಢೀಕರಿಸಲ್ಪಡಬೇಕಾಗಿದೆ.

ಆದರೆ, ಸ್ವಲ್ಪ ಗಂಭೀರವಾಗಿ ಚಿಂತಿಸಿದರೆ, ಧರ್ಮಗಳನ್ನು ಬದಲಾವಣೆಗೊಳಪಡಿಸಬಹುದೇ? ಅವುಗಳ ದ್ವಿಮುಖ, ದುರ್ಭರ ಅಂಶಗಳನ್ನು ಮೀರಿ ಅವುಗಳಿಂದ ದೊರೆಯಬಹುದಾದ ಬಿಡುಗಡೆಯ ಅರಿವನ್ನು ಪಡೆಯಬಹುದೇ? ಇದರಿಂದ ಸಮಾಜದಲ್ಲಿನ ಹಿಂಸಾತ್ಮಕ ಸ್ವರೂಪಗಳನ್ನು ಬದಲಾಯಿಸಲು ಸಾಧ್ಯವೇ? ಸ್ವಘೋಷಿತ ಗುರುಗಳು ಹಾಗೂ ದೇವಮಾನವರು ಸಾಮಾನ್ಯ ಜೀವನ ನಡೆಸುತ್ತಾ, ತಮ್ಮ ಉಪದೇಶಗಳನ್ನು ಸ್ಥಗಿತಗೊಳಿಸಿ, ಜನಸಾಮಾನ್ಯರನ್ನು ಅವರ ಪಾಡಿಗೆ ಇರಲು ಬಿಡುವರೇ? ಕೊನೆಯದಾಗಿ, ಧರ್ಮವೆಂಬುದು ವ್ಯಕ್ತಿಯ ಅತ್ಯಂತ ಖಾಸಗಿಯಾದ ಹಾಗೂ ಪವಿತ್ರವಾದ ವಿಚಾರವಲ್ಲವೇ? ಅಥವಾ ಸ್ವಾತಂತ್ರ್ಯ, ಸಮಾನತೆ, ಮಾನವ ಹಕ್ಕುಗಳು, ನ್ಯಾಯ, ಗೌರವ ಮತ್ತು ವ್ಯಕ್ತಿಯ ಸ್ವಯಂ ನಿರ್ಣಾಯಕತೆ ಎಂಬ ಜಾತ್ಯತೀತ ಪರಿಕಲ್ಪನೆಗಳು ಜಗತ್ತಿನಲ್ಲಿ ಸ್ಥಾಪಿತವಾಗಿರುವ ಪುರುಷಪ್ರಧಾನ ಹಾಗೂ ಹಿಂಸಾತ್ಮಕ ಸ್ವರೂಪದ ರಚನೆಯನ್ನು ಪ್ರಶ್ನಿಸುವ ಮತ್ತು ಬದಲಾಯಿಸುವ ಸಾಮರ್ಥ್ಯವನ್ನು ಹೊಂದಿಲ್ಲವೇ?

ಒಂದು ಮುಖ್ಯವಾದ ವಿಷಯವನ್ನೂ ಸಹ ನಾವಿಲ್ಲಿ ಗಮನಿಸಬೇಕು, ನಾವು ಜಾತ್ಯತೀತ ಎಂದು ಹೇಳುವ ಬಹುತೇಕ ಆದರ್ಶಗಳು ಕೂಡ ಹಲವು ಧಾರ್ಮಿಕ ಆದರ್ಶಗಳ ವಿಸ್ತೃತ ಅಥವಾ ಬದಲಾದ ಸ್ವರೂಪದವಾಗಿವೆ, ಈಗ ಅವು ಸಾಮಾಜಿಕ ಮುಖವಾಡವನ್ನು ಧರಿಸಿವೆ ಅಷ್ಟೆ. ಜಾತ್ಯತೀತ ಮತ್ತು ರಾಜಕೀಯ ಪರಿಕಲ್ಪನೆಗಳಾದ ಅಭಿವೃದ್ಧಿ, ವ್ಯವಸ್ಥೆ, ಉದ್ದೇಶ, ನ್ಯಾಯ ಮತ್ತಿತರ ಆದರ್ಶರಾಜ್ಯದ ಪರಿಕಲ್ಪನೆಗಳು ಯಾವುದೇ ಬೌದ್ಧಿಕ ನಿರ್ವಾತದಲ್ಲಿ ಹುಟ್ಟಿದವುಗಳಲ್ಲ. ಇವು ಧಾರ್ಮಿಕ ಆದರ್ಶಗಳಾದ ಒಳಿತು ಮತ್ತು ಕೆಡಕು, ಪಾಪ ಮತ್ತು ಪ್ರಾಯಶ್ಚಿತ್ತ, ಬಹುಮಾನ ಮತ್ತು ಶಿಕ್ಷೆ, ದೈವ ನಿಯಾಮಕ ಮತ್ತು ಮೋಕ್ಷ ಮುಂತಾದವುಗಳಿಂದ ಜನಿಸಿದವುಗಳು. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ನಮ್ಮ ಧಾರ್ಮಿಕ ಚಿಂತನಾಕ್ರಮವೇ ಮಾನವತೆಯನ್ನು ತಪ್ಪು ದಾರಿಯಲ್ಲಿಳಿಸಿ ಹೊರಬರಲಾರದ ವಿಷವೃತ್ತದ ಸುಳಿಯಲ್ಲಿ ಸಿಲುಕಿಹಾಕಿಸಿದ ಮೊದಲ ಕಾರಣ ಎನ್ನಬಹುದು. ಹಾಗಾಗಿ ನಮ್ಮ ಆದರ್ಶಗಳು

ಹಾಗೂ ಆರೋಪಗಳ ಧಾರ್ಮಿಕ ಮೂಲವನ್ನು ನಾವು ಮೊದಲಿಗೆ ಅರ್ಥಮಾಡಿಕೊಳ್ಳಬೇಕು. ಧರ್ಮವೇ ನಮ್ಮೆಲ್ಲಾ ಆದರ್ಶಗಳು ಹಾಗೂ ಸಿದ್ಧಾಂತಗಳಿಗೆ ತಾಯಿ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಧರ್ಮವನ್ನು ಅರ್ಥಮಾಡಿಕೊಳ್ಳಲು, ಮುಖ್ಯವಾಗಿ ಅದರ ವಿಭ್ರಾಂತ ಪಾರ್ಶ್ವವನ್ನು ಗಮನಿಸುವ ಮೂಲಕ ನಾವು ನಮಗೂ ಹಾಗೂ ಇತರ ಎಲ್ಲರಿಗೂ ನಿರ್ಮಿಸಿಕೊಂಡಿರುವ ಅಸಂಖ್ಯಾತ ಹಾಗೂ ಅಪರಿಮಿತ ಸಮಸ್ಯೆಗಳನ್ನು ಸಹ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬಹುದು.

**ಅಸ್ಮಿತೆಯ ಪರಿಕಲ್ಪನೆ**

ನಾವೆಲ್ಲರೂ ಆಶೆಗಳು, ಹಸಿವು, ಭಯ, ಚಿಂತೆ ಮತ್ತು ದುಃಖಗಳಿಂದ ಬಾಧಿತರಾಗಿರುತ್ತೇವೆ. ನೀವು ಅಮೆರಿಕನ್, ಉದ್ಯಮಿ, ಶ್ರೀಮಂತ ಅಥವಾ ಬಡವರಾಗಿರಿ, ಅಥವಾ ಯಾವುದೇ ಲಿಂಗಕ್ಕೆ ಸೇರಿದವರಾಗಿರಿ, ನೀವು ನಿಮ್ಮನ್ನು ಹಿಂದೂ ಎಂದೋ ಮುಸ್ಲೀಂ ಎಂದೋ, ಯಹೂದಿ ಅಥವಾ ಆಫ್ರಿಕನ್ ಅಥವಾ ಸೋಲಿಗ ಎಂದೋ ಕರೆದುಕೊಳ್ಳಿ, ಆದರೆ ನೀವೆಲ್ಲಾ ಅನುಭವಿಸುವ ಒತ್ತಡ, ಸಂತೋಷ, ದುಃಖ ಎಲ್ಲರಿಗೂ ಸಮಾನವಾದದ್ದು. ನಿಮ್ಮ ನಿಮ್ಮ ಧರ್ಮಗಳ ಮೂಲಕ, ನಂಬಿಕೆಗಳ ಮೂಲಕ ಹುಡುಕುತ್ತಿರುವ ಮಾನಸಿಕ ಭದ್ರತೆ ಕೂಡ ಎಲ್ಲರಿಗೂ ಸಮಾನವಾದದ್ದೇ. ಶಾಶ್ವತ ಸುಖ ಶಾಂತಿಗಳಿಗಾಗಿ, ದೇವರುಗಳು, ಆಚರಣೆಗಳು ಹಾಗೂ ನಂಬಿಕೆಗಳನ್ನು ಹುಡುಕುತ್ತಿರುವ ಯತ್ನ ಸಹ ಎಲ್ಲರದ್ದೂ ಆಗಿದೆ.

ಅಭಿವ್ಯಕ್ತಿಯ ಸ್ವರೂಪ ಭಿನ್ನವಾದರೂ ಅದರ ಸಾರ ಮಾತ್ರ ಸದಾ ಅದೇ ಆಗಿರುತ್ತದೆ. ಉದಾಹರಣೆಗೆ ದೇವರು, ಸ್ವರ್ಗ, ಮರಣಾನಂತರದ ಜೀವನ ಮೊದಲಾದ ಪರಿಕಲ್ಪನೆಗಳು ಕೆಲಮಟ್ಟಿಗೆ ಭಿನ್ನವಾಗಿರಬಹುದು. ಒಬ್ಬರು ಪುನರ್ಜನ್ಮ ಇಲ್ಲ ಎನ್ನಬಹುದು, ಆತ್ಮಗಳು ಸ್ವರ್ಗ ಅಥವಾ ದೇವರ ಬಳಿ ಹೋಗುತ್ತವೆ ಎನ್ನಬಹುದು, ಮತ್ತೆ ಕೆಲವರು, ಆತ್ಮಗಳು ಸಾವಿನ ನಂತರ ಭೂಮಿಗೇ ಇತರೆ ಜೀವಿಗಳ ರೂಪದಲ್ಲಿ ಹಿಂದಿರುಗುತ್ತವೆ ಎನ್ನಬಹುದು. ಆದರೆ ಸಾವಿನ ಭಯದಿಂದ ಪಾರಾಗಲು ಯತ್ನಿಸುವ ಮತ್ತು ಸುರಕ್ಷತೆಯನ್ನು ಬಯಸುವ ಮನಸ್ಸಿನ ಸ್ವರೂಪ ಮಾತ್ರ ಈ ಎರಡೂ ವಿಚಾರಗಳಲ್ಲಿ ಒಂದೇ ಆಗಿರುತ್ತದೆ.

ನಮ್ಮೆಲ್ಲರೊಳಗಿರುವ ಈ ಸಾಮ್ಯತೆಯೇ ಭೂಮಿಯ ಮೇಲೆ ವಾಸಿಸುವ ನಮ್ಮನ್ನೆಲ್ಲಾ ಮಾನವ ಜೀವಿಗಳು ಎಂಬ ಏಕ ಸೂತ್ರದೊಳಗೆ ತರುವಂಥದಾಗಿದೆ; ವಿವಿಧ ಅಸ್ಮಿತೆಗಳು, ಮನುಷ್ಯರನ್ನಾಗಿಸುವ ಈ ಮೂಲ ಭಾವನೆಗಳನ್ನು ಹೊದಿಸಿರುವ ಮುಸುಕುಗಳಾಗಿವೆ. ನಾವು ಬಯಸಿದ ಹಾಗೆ ಬದುಕುವುದರ ಮೇಲೆ ಈ ಅಸ್ಮಿತೆಗಳು ಕೇವಲ ಕಾರ್ಯಾತ್ಮಕ ಅರ್ಥ ಮತ್ತು ಉದ್ದೇಶಗಳನ್ನು ಮಾತ್ರ ಹೊಂದಿವೆ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ.

ಒಟ್ಟಾರೆ ಹೇಳಬೇಕೆಂದರೆ ಅಸ್ಮಿತೆಗಳು ಅತ್ಯಂತ ಪ್ರಬಲವಾಗಿದ್ದು ಬಹುಸಂಖ್ಯಾತವೂ ಆಗಿರುತ್ತವೆ, ಅವುಗಳಲ್ಲಿ ಯಾವುದಾದರೊಂದಕ್ಕೆ ಒಂದು ಸನ್ನಿವೇಶದಲ್ಲಿ ಮಹತ್ವ ನೀಡಿದ್ದರೂ ಉಳಿದ ಅಸ್ಮಿತೆಗಳಿಗೆ ಯಾವುದೇ ಧಕ್ಕೆ ಬರುವುದಿಲ್ಲ. ಉದಾಹರಣೆಗೆ ಒಬ್ಬ ವ್ಯಕ್ತಿಯ ಜೀವನ ನಿರ್ವಹಣೆಯ ಆರ್ಥಿಕ ಪರಿಸ್ಥಿತಿ.

ಈಗ ಇರುವ ಪ್ರಸ್ತುತ ಸಾಮಾಜಿಕ ಹಾಗೂ ರಾಜಕೀಯ ಸಮಸ್ಯೆಗಳ ಸ್ವರೂಪವನ್ನು ಅಧ್ಯಯನ ಮಾಡುವ ಸಲುವಾಗಿ ವ್ಯಕ್ತಿಗಳನ್ನು ಹಾಗೂ ಸಮುದಾಯಗಳನ್ನು ಅಸ್ಮಿತೆಗಳ ದೃಷ್ಟಿಕೋನದಿಂದ ಅಭ್ಯಾಸಮಾಡುವುದು ಒಂದು ಬೌದ್ಧಿಕ ತಡೆಯಾಗಿ ಪರಿಣಮಿಸುತ್ತದೆ. ಉದಾಹರಣೆಗೆ ಅಂತರ್‌ಧರ್ಮೀಯ ಮಾತುಕತೆಗಳು ಅಥವಾ ಕೋಮುಸೌಹಾರ್ದ ಸಭೆಗಳು ಮಿತಿಗಳಿಗೊಳಪಟ್ಟಿರುವುದು.

ವ್ಯಕ್ತಿಗಳನ್ನು ಅಸ್ಮಿತೆಗಳ ಹಿನ್ನೆಲೆಯಲ್ಲಿ ಅರ್ಥೈಸಿಕೊಳ್ಳುವ ಪ್ರಯತ್ನ ಅವರನ್ನು ಸ್ಟಿರಿಯೋಟೈಪ್ ಮಾಡುತ್ತದೆ. ಇದು ಸಮಾಜದ ಮತ್ತು ಜನರ ಮೂಲಭೂತ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಒಂದು ಪ್ರಮುಖ ತಡೆಯಾಗುತ್ತದೆ. ಉದಾಹರಣೆಗೆ, ಸಾಮಾನ್ಯವಾಗಿರುವ ಅಸ್ಮಿತೆಗಳೊಳಗಿನ ಒಳ ಅಸ್ಮಿತೆಗಳು ವ್ಯಕ್ತಿಗಳನ್ನು ಅಭೇದ್ಯರನ್ನಾಗಿಸುವ ಬದಲು, 'ಅನ್ಯ'ರನ್ನಾಗಿಸಿಬಿಡುತ್ತದೆ !

ನಾವು ಯಾವಾಗಲೂ ನಮ್ಮ ಅಸ್ಮಿತೆಗಳಿಗಿಂತ ಭಿನ್ನವಾಗಿದ್ದು, ಹೆಚ್ಚಿನ ವ್ಯಾಪಕತೆಯನ್ನು ಹೊಂದಿದ್ದೇವೆ ಮತ್ತು ನಮ್ಮ ಧರ್ಮಗಳಿಗಿಂತ, ನಮ್ಮ ಸಂಸ್ಕೃತಿ ಹಾಗೂ ರಾಜಕೀಯಗಳಿಗಿಂತಲೂ ಬಹಳಷ್ಟು ವಿಶಾಲ ವ್ಯಾಪ್ತಿಯುಳ್ಳವರಾಗಿದ್ದೇವೆ. ಉದಾಹರಣೆಗೆ, ಅಸ್ಮಿತೆಗಳು ಚಲನಶೀಲವಾದವು, ಸ್ವಯಂ ವೈರುಧ್ಯವುಳ್ಳವು ಮತ್ತು ತಮ್ಮನ್ನೇ ತಾವು ವಿಘಟಿಸಿಕೊಳ್ಳುವಂಥವೂ ಆಗಿವೆ.

ಕೊನೆಯದಾಗಿ ಹೇಳುವುದಾದರೆ, ಒಬ್ಬ ವ್ಯಕ್ತಿಯನ್ನು ಯಾವುದೇ ಒಂದು ಕವಚದೊಳಗೆ ತುರಕಲಾಗದು, ಒಂದು ಅಸ್ಮಿತೆಯೊಳಗೆ ಬಂಧಿಸಲಾಗದು. ಯಾಕೆಂದರೆ, ವ್ಯಕ್ತಿಯು ಆತನ ಧರ್ಮ ಅಥವಾ ಸಂಸ್ಕೃತಿಗಿಂತಲೂ ಹೆಚ್ಚಿನವನಾಗಿರುತ್ತಾನೆ. ಬಹುಶಃ ಮನುಷ್ಯನು ಇಡೀ ವಿಶ್ವದ ಮಗುವೇ ಆಗಿದ್ದಾನೆ ಎಂದು ಹೇಳಬಹುದು. ಈ ವಿಶ್ವದ ನಿಗೂಢತೆಯನ್ನು ಸೈದ್ಧಾಂತಿಕವಾಗಿ ಅರ್ಥಮಾಡಿಕೊಳ್ಳಲು ಬಹುಶಃ ಎಂದೆಂದಿಗೂ ಸಾಧ್ಯವಾಗದೇನೋ. ಈ ಅದ್ಭುತವಾದ, ಖಚಿತವಾದ ವಾಸ್ತವವು ಈ ಗ್ರಹದ ಮೇಲಿನ ನಮ್ಮ ಇರುವಿಕೆಯ ಅರಿವನ್ನು ವಿಸ್ತರಿಸಬೇಕಾಗಿದೆ.

*(ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ 'ಸಾಹಿತ್ಯ, ಸಾಹಿತಿ ಮತ್ತು ವರ್ತಮಾನ' ಎಂಬ ವಿಷಯದ ಮೇಲೆ ನಡೆದ ಎರಡು ದಿನಗಳ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧದ ಆಯ್ದ ಭಾಗ.)*


ಇಂಗ್ಲಿಷ್ ಮೂಲ : **ಮುಕುಂದ ರಾವ್**
ಕನ್ನಡಕ್ಕೆ : **ಸಂತೋಷ್ ನಾಯಕ್ ಆರ್.**
ಸಹಾಯಕ ಪ್ರಾಧ್ಯಾಪಕ, ಸಮಾಜಶಾಸ್ತ್ರ ವಿಭಾಗ,
ಕ.ರಾ.ಮು.ವಿ., ಮೈಸೂರು




## ದತ್ತು ಪಡೆಯುವುದಿಲ್ಲ

ಬಿಲ್ಕಿಸ್–ಕೌಸರ್ ಬಾನುಗಳು
ಉರಿಯುತ್ತಿರುವ ಬೆಂಕಿಯಿಂದ
ಒಂದು ಕ್ಯಾಂಡಲ್ಲೂ ಹತ್ತಿಕೊಳ್ಳಲಿಲ್ಲ
ನಿರ್ಭಯಾಳನ್ನು ಸಿಗಿದವನ
ಅಡುಗೆ ಬಲು ರುಚಿಯಂತೆ
ಅವಳ ಕರುಳ ತುಂಡುಗಳನ್ನು
ಗುಟ್ಟಾಗಿಟ್ಟುಕೊಂಡು ಬೆರೆಸುತ್ತಿರುವನೆ !
ಅಖ್ಲಾಕ್–ಪಹ್ಲೂಖಾನರ ಮಕ್ಕಳ
ಧ್ವನಿ ಕೇಳಿಸುತ್ತಿಲ್ಲವೇಕೆ
ತಂದೆಯನ್ನು ಬಡಿದು ಕೊಂದವರ
ತಲೆಗಳನ್ನು ಅವರು ಬೇಡುತ್ತಿಲ್ಲ
ಅವರಿಗೆ ಅನ್ನ ಅರಿವೆ ಬೇಕು
ದುಡಿವ ಕೈಗಳಿಗೆ ಕೆಲಸಬೇಕು
ಏಕೆಂದರೆ ಇವರನ್ನು
ಯಾರೂ ದತ್ತು ಪಡೆಯುವುದಿಲ್ಲ
ಇಷ್ಟಕ್ಕೂ ಆ ಮತಾಂಧರ ತಲೆಗಳ
ತಂದಿಟ್ಟರೆ ಅವೇನು ಮಾಡುತ್ತವೆ
ಪಾಕ್‌ಗೆ ಹೋಗಿ ಎಂದರಚುತ್ತವೆ !
ನಿರ್ಭಯಾ ನೀನು ನತದೃಷ್ಟೆಯಾದರೂ
ನಿನ್ನ ಮಾನ ಪ್ರಾಣಗಳಿಗೆ
ಗೌರವವಿದೆ : ಒಂದಿಷ್ಟು ಕಂಬನಿಯಿದೆ
ಮತ್ತೆ ಬಾ ...ಆದರೆ ನೂರಿಯೋ ನಫೀಸಳೋ
ಆಗಿ ಮಾತ್ರ ಅಲ್ಲ ...ಈ ದೇಶದಲ್ಲಲ್ಲ !


**ಕಸ್ತೂರಿ**
ಪಿ–೨೬, ತೋಟಗಾರಿಕೆ ಇಲಾಖೆ ರಸ್ತೆ
ಎಸ್.ಎಸ್.ಪುರಂ, ತುಮಕೂರು – ೫೭೨ ೧೦೨

**ಡಾ|| ಹುಸೈನ್ ರೆಂಡತಾನಿ**
ಅನುವಾದ : **ಉಮರುಲ್ ಫಾರೂಕ್ ಅಹ್ಮದ್**

ತಾಜ್‌ಮಹಲ್‌ನೊಂದಿಗೆ ಬಿಜೆಪಿಯು ನಡೆಸುತ್ತಿರುವ ವಿರುದ್ಧದ ಹೋರಾಟ ಅದರ ನಿರ್ಮಾಣ ಮುಸ್ಲಿಮರ ಕೈಯಿಂದಾಗಿತ್ತು ಎಂಬ ಕಾರಣಕ್ಕೆ ಮಾತ್ರ. ತಾಜ್‌ಮಹಲ್ ನೋಡಲು ಬರುವವರಲ್ಲಿ ಎಲ್ಲ ಜಾತಿ ಧರ್ಮದವರು ಇದ್ದಾರೆ. ಅಲ್ಲಿ ಮುಸ್ಲಿಂ ಹಿಂದೂ ಎಂದು ಕೇಳುವುದಿಲ್ಲ. ಭಾರತದ ಹಿರಿಮೆಯನ್ನು ಜಗದೆಲ್ಲೆಡೆ ಪರಿಚಯಿಸುವ ಅಭಿಮಾನದ ಸಂಕೇತವಾಗಿದೆ ಆ ಸೌಧ. ಹಿಂದೂ ಮುಸ್ಲಿಂ ಒಟ್ಟಿಗೆ ಅಭಿಮಾನಿಸಬಹುದು. ಅದರಿಂದ ಬರುವ ಲಾಭ ಈ ರಾಷ್ಟ್ರದ ಖಜಾನೆಗಾಗಿದೆ. ಅದು ನಿರ್ಮಿಸಿರುವುದು ಇಲ್ಲಿನ ಸಂಪತ್ತಿನಿಂದಾಗಿದೆ. ಅದಕ್ಕಾಗಿ ದುಡಿದವರು ನಾನಾ ಜಾತಿ ಧರ್ಮದ ಭಾರತೀಯರಾಗಿದ್ದಾರೆ. ವಿಶ್ವದ ೭ನೇ ಅದ್ಭುತವಾದ ತಾಜ್‌ಮಹಲ್‌ನೊಂದಿಗೆ ದ್ವೇಷ ತೋರಿಸಿದರೆ ಅವರ ಮನಸ್ಸಿನ ಮಾಲಿನ್ಯ ಹೇಗಿರಬಹುದು? ಮುಸಲ್ಮಾನ ನೊಂದಿಗೆ ಕೋಪ ಮುಗಿಸಲು ಬರೀ ತಾಜ್‌ಮಹಲ್ ಕೆಡವಿದರೆ ಸಾಕೇ? ಭಾರತದ ಸೌಂದರ್ಯವಾದ ಎಷ್ಟೆಷ್ಟು ಸೌಧಗಳನ್ನು ನೆಲಸಮ ಮಾಡಬೇಕು? ಆಗ್ರಾ, ದೆಹಲಿ, ಫತೇಪುರ್ ಸಿಕ್ರಿ. ಗುಜರಾತ್, ಬಂಗಾಳ, ಮಾಲ್ವಾ, ಜೋಧಪುರ, ಹೈದರಾಬಾದ್, ಕಾಶ್ಮೀರ ಹೀಗೆ ಹಲವೆಡೆ ಇರುವ ಎಣಿಸಲಸಾಧ್ಯ ಸೌಂದರ್ಯದ ಸಂಕೇತಗಳನ್ನು ಕೆಡವಿದರೆ ಮತ್ತೆ ಇಲ್ಲಿ ಇರುವುದಾದರೂ ಏನು? ಪ್ರತಿವರ್ಷ ಧ್ವಜ ಹಾರಿಸಿ ಆಚರಿಸುವ ಕೆಂಪು ಕೋಟೆ, ಅತಿಥಿ ಗೃಹವಾದ ಹೈದರಾಬಾದ್ ಹೌಸ್, ಜುಮ್ಮಾ ಮಸೀದಿ ಎಲ್ಲವನ್ನೂ ಕೆಡವಬೇಡವೇ? ಭಾರತದ ಸಂಸ್ಕೃತಿಯ ಕೀರ್ತಿಗೆ ಮುಕುಟ ವಾಗಿರುವ ಆ ಗೋಪುರಗಳಲ್ಲದೆ ಮತ್ತೇನುಂಟು ನಮಗೆ ? ಅಶೋಕನ ಸ್ತಂಭ, ಹಳೆಯ ಗುಹೆ ಚಿತ್ರಗಳು, ಕೆಲವೇ ಕ್ಷೇತ್ರಗಳಿಂದ ಮಾತ್ರವಾಗಿದೆಯೇ ಈ ದೇಶದ ನಿರ್ಮಾಣ? ಪಾರ್ಲಿಮೆಂಟ್ ಹೌಸ್ ಬ್ರಿಟಿಷರ ಕೊಡುಗೆಯಲ್ಲವೇ? ಅದನ್ನು ನಿರ್ನಾಮ ಮಾಡುವುದೇ? ಪಾಕಿಸ್ತಾನದಲ್ಲಿ ಹಿಂದೂಗಳಿಗೂ ಸಿಖ್ಖರಿಗೂ ಪ್ರತ್ಯೇಕ ಕ್ಷೇತ್ರಗಳುಂಟು, ಅದನ್ನು ನಾಶಮಾಡಲು ಅಲ್ಲಿನ ಉಗ್ರವಾದಿಗಳು ಬಯಸಿದರೆ ! ಭಾರತ, ಪಾಕಿಸ್ತಾನ, ಉಗ್ರವಾದಿಗಳು ಜನಿಸುವುದಕ್ಕಿಂತ ಮುಂಚೆಯೇ ಇಲ್ಲೊಂದು ಸಂಸ್ಕೃತಿಯಿತ್ತು. ಹಿಂದೂ ಮತ್ತು ಮುಸ್ಲಿಂ ನಿರ್ಮಿಸಿದ್ದ ಸಂಸ್ಕೃತಿಯದು. ಜೈನರು, ಬೌದ್ಧರು, ಸೂಫಿಗಳು ಈ ರಾಜ್ಯಕ್ಕೆ ಬೇಕಾಗಿ ಬದುಕಿದ್ದಾರೆ. ತಾಜ್‌ಮಹಲ್ ಕೆಡವಿ ಭಾರತದ ಮಾನ ಹರಾಜಿಡಲು ಉಗ್ರವಾದಿಗಳ ಜೊತೆಗೆ ಬಿಜೆಪಿಯ ಬೆಂಬಲವು ಬಂತು. ಇಸ್ಲಾಮಿಕ್ ಉಗ್ರಗಾಮಿಗಳು ಕೂಡ ಇದನ್ನು ಕೆಡವುತ್ತೇವೆಂದು ಹೇಳಿದರು. ಆದ್ದರಿಂದ ಇದು ಕೂಡ ಈ ದೇಶಕ್ಕೆ ಅವಮಾನವಲ್ಲವೇ? ಒಂದು ಸಮುದಾಯ ದೊಂದಿಗಿನ ಕೋಪವನ್ನು ಮುಗಿಸಲು ಅವರಿಂದ ನಿರ್ಮಾಣವಾದ ಸೌಧಗಳನ್ನೂ ನಾಶ ಮಾಡಬೇಕು ಎನ್ನುವುದು ಸರಿಯಲ್ಲ. ಬಾಮಿಯಾನಿನ ಬೌದ್ಧ ವಿಗ್ರಹ ಒಡೆದುರುಳಿಸಿದ ತಾಲಿಬಾನಿಗೂ ನಿಮಗೂ ಏನು ವ್ಯತ್ಯಾಸ ? ಇತಿಹಾಸವನ್ನು ಕೊಲ್ಲುವ ಕೆಲವು ಇತಿಹಾಸಜ್ಞರನ್ನು ಸಂಘಪರಿವಾರ ಸೃಷ್ಟಿಸುತ್ತಿದೆ. ಅವರಿಗೆ ತಾಜ್‌ಮಹಲ್ ಬೇಕು ಆದರೆ ಅದನ್ನು ಮುಸ್ಲಿಮರು ನಿರ್ಮಿಸಬಾರದು. ಅದಕ್ಕೊಬ್ಬನನ್ನು ಸೃಷ್ಟಿಸಿತು. ಅವನೇ ಓಕ್. ಅವನು ಇದನ್ನು ಶಿವ ಕ್ಷೇತ್ರವೆಂದು ಬಿಂಬಿಸಲೆತ್ನಿಸಿದ ಎಂಬರ್ಥದ ತೇಜೋಮಹಲ್ ತದನಂತರ ತಾಜ್‌ಮಹಲಾಗಿ ಮುಸಲ್ಮಾನರು ಬದಲಿಸಿದ್ದಾರೆಂದ. ಕ್ರಿಸ್‌ಮಸ್ ಹಿಂದೂ ಉತ್ಸವ ಎಂದು ಕೂಡ ಓಕ್ ಹೇಳುತ್ತಾನೆ. ಅದು ಕೃಷ್ಣ ಮಾಸವಂತೆ. ಒಂದಾನೊಂದು ಕಾಲದಲ್ಲಿ ಇಟಲಿ ಹಿಂದೂಗಳ ಕೇಂದ್ರವಾಗಿತ್ತೆಂದೂ ಲಂಡನಿನ ವೈಸ್ ಮಿನಿಸ್ಟರ್ ಆಬೆ ಒಂದು ಶಿವ ಕ್ಷೇತ್ರವಾಗಿತ್ತು ಎಂದು ಕೂಡ ಓಕ್ ಹೇಳಿದಾಗ ಇವನಿಗೆ ಹುಚ್ಚೆಂದು ತಿಳಿದು ಬಿಜೆಪಿ ಶಿವ ಶಿವ ಎಂದು ಹೇಳಿತು. ಉತ್ತರ ಪ್ರದೇಶ ಬಿಜೆಪಿ ಅಧ್ಯಕ್ಷ ಹೇಳುತ್ತಾರೆ – (ಲಕ್ಷ್ಮಿಕಾಂತ್ ವಾಜಪಾಯ್) ಜೈ ಪಾಲ್ ಎಂಬ ಹಿಂದೂ ರಾಜ ತಾಜ್‌ಮಹಲ್‌ನ್ನು ಷಾಹಜಹಾನನಿಗೆ ಮಾರಾಟ ಮಾಡಿರುವುದಾಗಿದೆ.

# ತಾಜ್‌ಮಹಲ್‌ನೊಂದಿಗೇಕೆ ದ್ವೇಷ



ಆರ್.ಎಸ್.ಎಸ್.ನ ಕಾರ್ಯಕರ್ತ ಶಂಕರ್ ಜೈನ ತಾಜ್ ಹಿಂದುಗಳದೆಂದು, ಅದನ್ನು ತಮಗೆ ಬಿಟ್ಟುಕೊಡಬೇಕೆಂದು ಆಗ್ರಾ ಕೋರ್ಟ್‌ನಲ್ಲಿ ಕೇಸ್ ದಾಖಲಿಸಿದ. ಹಲವು ಇತರೆ ಕೇಸ್‌ಗಳೂ ಬಂದವು. ಅದರೊಳಗಿನ ಖಬರ್‌ಸ್ತಾನ್ ಧ್ವಂಸ ಮಾಡಿ ಲಿಂಗ ಪ್ರತಿಷ್ಠಾಪಿಸಬೇಕು ಎಂಬ ಬೇಡಿಕೆ ಕೊನೆಗೆ ಸಂಸತ್ತಿಗೂ ತಲುಪಿತ್ತು. ೪೨ ಎಕರೆ ಪ್ರದೇಶದ ಮಧ್ಯಭಾಗದಲ್ಲಿರುವ ಕಿರೀಟ ತಾಜ್‌ಮಹಲ್. ೧೬೫೨ರಲ್ಲಿ ಪೂರ್ತಿಯಾದ ಈ ಸೌಧಕ್ಕೆ ಇಂದಿನ ಪ್ರಕಾರ ೫೨೭ ಮಿಲಿಯನ್ ಡಾಲರ್ ಖರ್ಚಾಗಿರಬಹುದು. ಅ=ಹ್ಮದ್ ಲಾಹೋರಿ ಎಂಬ ಆಸ್ಥಾನ ಶಿಲ್ಪಿಯ ಕಲ್ಪನೆ ಸಾಕಾರಗೊಳಿಸಲು ೨೦೦೦೦ ಜನ ತಮ್ಮ ಬೆವರು ಸುರಿಸಬೇಕಾಯಿತು. ಬಿಳಿ ಮಾರ್ಬಲಿನಿಂದ ಮಾಡಿದ ತಾಜ್ ಒಬ್ಬ ಅಪ್ಸರೆ ಕನ್ಯೆಯಂತೆ ಪೂರ್ಣಚಂದ್ರನ ಬೆಳಕಿನಲ್ಲಿ ನೃತ್ಯ ಮಾಡುವಂತೆ ಕಾಣುತ್ತದೆಂದು ಒಬ್ಬ ಇಂಗ್ಲಿಷ್ ಕವಿ ವಿವರಿಸುತ್ತಾನೆ. ಮಮ್ತಾಜ್ ನಗ್ನವಾಗಿ ಯಮುನೆಯಲ್ಲಿ ಸ್ನಾನಕ್ಕಿಳಿದಂತೆ ಕಾಣುತ್ತದೆ ಎಂದು ಮತ್ತೋರ್ವ ಬಣ್ಣಿಸುತ್ತಾನೆ. ಪ್ರಿಯತಮೆಯನ್ನು ಇಷ್ಟು ಪ್ರೀತಿಸಿದ ಮತ್ತೊಬ್ಬ ಪುರುಷ ಜಗತ್ತು ಕಂಡಿಲ್ಲವೆಂದು ಮತ್ತೊಬ್ಬ ಉರ್ದು ಕವಿ ಲೂದಿಯಾನ್ ಹೇಳಿದ್ದ.

**ಮಮ್ತಾಜ್ ಮಹಲ್**

ಮಮ್ತಾಜ್, ಅರ್ಜುಮಂದ್ ಬಾನು ಅಬುಲ್ ಹಸನ್ ಅಸಫ್ ಖಾನ್ ಎಂಬ ಪರ್ಷಿಯನ್ ಪ್ರಭುವಿನ ಮಗಳು. ಆಕೆಯ ಹೆಸರು ಬಾನು ಎಂದಿತ್ತು. ಷಹಜಹಾನ್ ೧೫ ವರ್ಷದ ಬಾನುವನ್ನು ಮದುವೆ ಮಾಡಿಕೊಳ್ಳಬೇಕೆಂದಿದ್ದ. ಆದರೆ ತಂದೆಯ ಒತ್ತಾಯಕ್ಕೆ ಮಣಿದು ಒಬ್ಬ ರಾಜಕುಮಾರಿಯನ್ನು ಮದುವೆಯಾದರೂ ಬಾನುವಿನೊಂದಿಗೆ ಪ್ರೇಮ ಹಾಗೆಯೇ ಇತ್ತು. ಅವಳನ್ನು ಷಹಜಹಾನ್ ಮೂರನೇ ಹೆಂಡತಿಯಾಗಿ ಸ್ವೀಕರಿಸಿದ. ಅಂದೇ ಅವಳಿಗೆ ಮಮ್ತಾಜ್ ಎಂಬ ಹೆಸರು ಕೊಟ್ಟ. ಆಗ ಅವಳಿಗೆ ೧೯ ವಯಸ್ಸು. ರಾಜಕೀಯ ಕಾರಣದಿಂದ ಇನ್ನಿಬ್ಬರು ಹೆಂಡತಿಯರನ್ನು ವರಿಸಬೇಕಾಗಿ ಬಂತು. ಮಮ್ತಾಜ್ ಮೇಲೆ ಅವನ ಪ್ರೀತಿ ಅಗಾಧವಾಗಿತ್ತು. ಪ್ರೀತಿ ಹೆಚ್ಚಾದಾಗ ಷಹಜಹಾನ್ ಮಾಲೀಕ 'ಸಮಾನ್' ಎಂದು ಕರೆಯುತ್ತಿದ್ದ. ಅವಳು ಯಾವತ್ತೂ ರಾಜನೊಟ್ಟಿಗೆ ಇದ್ದಳು. ಆಗ್ರಾ ಅರಮನೆಯ ಖಾಸ್ ಮಹಲ್‌ನಲ್ಲಾಗಿತ್ತು ಮಮ್ತಾಜಳ ಕೋಣೆ. ಸೌಂದರ್ಯದ ಅಪೂರ್ವ ವರ್ಣನೆಗೆ ಈ ಅರಮನೆ ಸೊಬಗೇ ಸಾಕು. ಮಮ್ತಾಜಳ ಕುರಿತು ರಾಜಸನ್ನಿಧಿಯ ಕವಿಗಳು ಬರೆದಿರುವ ಕವಿತೆಗಳಿಗೆ ಲೆಕ್ಕವೇ ಇಲ್ಲ. ಇತರೆ ಹೆಂಡತಿಯರು ಕೂಡ ಅಡ್ಡಿಪಡಿಸಲಿಲ್ಲ. ಶಾಸನ, ರೇಖೆಗಳಲ್ಲಿ ಸಹಿಮಾಡುವ ಅವಕಾಶ ಕೂಡ ಮಮ್ತಾಜಳಿಗೆ ಇತ್ತು. ರಾಜನಿಗೆ ಆಡಳಿತದಲ್ಲೂ ಸಲಹೆ ಇಡುತ್ತಿದ್ದಳು ಆಕೆ.

ದಖ್ಖನಿನ ಯುದ್ಧಕ್ಕಾಗಿ ಹೊರಟ ಚಕ್ರವರ್ತಿಯನ್ನು ಮಮ್ತಾಜ್ ಹಿಂಬಾಲಿಸಿದರು. ಪೂರ್ಣವಾಗಿ ಗರ್ಭಿಣಿಯಾಗಿದ್ದಳು. ದಾರಿ ಮಧ್ಯೆ ಕೊನೆಯ ಮಗುವಿಗೆ ಜನ್ಮ ಕೊಡುವಾಗಲೇ ಕೊನೆಯುಸಿರೆಳೆದಳು. ಷಹಜಹಾನ್‌ಗೆ ದುಃಖ ತಡೆಯಲಿಕ್ಕಾಗಲಿಲ್ಲ. ಅವನು ಒಂದು ವರ್ಷ ಕಾಲ ಹೊರಗೆ ಬರಲೇ ಇಲ್ಲ. ಮತ್ತೆ ಕಾಣುವಾಗ ಮುಖ ಬಾಡಿಹೋಗಿತ್ತು. ಬಿಳಿ ತಲೆಯಾಗಿ ಪರಿವರ್ತನೆಯಾಗಿ ಮುದುಕನಂತೆ ಕಾಣುತ್ತಿದ್ದನು. ಮಮ್ತಾಜ್‌ರ ಮೃತದೇಹ ಹೊರ ತೆಗೆದು ಚಿನ್ನದ ಪೆಟ್ಟಿಗೆಯಲ್ಲಿ ಹಾಕಿ ಮಗ ಶುಜಾ ಆಗ್ರಾಗೆ ತೆಗೆದುಕೊಂಡು ಬಂದ. ಅಲ್ಲಿ ಯಮುನಾ ನದಿ ದಡದಲ್ಲಿ ಒಂದು ಕಟ್ಟಡದಲ್ಲಿ ಶವಸಂಸ್ಕಾರ ನಡೆಯಿತು, ಆ ಕಟ್ಟಡವೇ ತಾಜ್‌ಮಹಲ್ ಆಗಿ ಪರಿವರ್ತನೆಯಾಗಿರುವುದು. ತಾಜ್‌ಮಹಲಿನ ಕೆಳಮಹಡಿಯಲ್ಲಿದೆ ಷಹಜಹಾನ್ ಮತ್ತು ಮಮ್ತಾಜ್‌ರ ಅಂತ್ಯ ವಿಶ್ರಾಂತ ಸ್ಥಳ. ತಾಜ್‌ಮಹಲ್‌ಅನ್ನು ವರ್ಣಿಸಲಸಾಧ್ಯವಾದ ರೀತಿಯಲ್ಲಿ ಕೆತ್ತಿದ್ದಾರೆ. ಅದರಲ್ಲಿ ಮೌಲ್ಯಯುತವಾದ ಮುತ್ತು ಚಿನ್ನ ರತ್ನಗಳನ್ನು ಅಂಟಿಸಿದ್ದರು, ಅದನ್ನು ಬ್ರಿಟಿಷರು ಕದ್ದು ತೆಗೆದುಕೊಂಡು ಹೋದರು. ಅಲ್ಲಾಹುವಿನ ೯೯ ನಾಮಗಳನ್ನು ಅಲ್ಲಿ ಬರೆಯಲಾಗಿದೆ.

ದೇಶದಲ್ಲಿ ಅಷ್ಟೊಂದು ಕಷ್ಟ ಸಮಸ್ಯೆಗಳಿದ್ದರೂ ಬಡತನವಿದ್ದರೂ ಏಕೆ ಈ ಸೌಧವನ್ನು ನಿರ್ಮಿಸಿದ್ದು ? ತಾಜ್‌ಗಾಗಿ ಸಂಪತ್ತು ಶೇಖರಿಸುವಾಗ ದೇಶದ ಒಂದು ಭಾಗದಲ್ಲಿ ಅನ್ನಕ್ಕೆ ಗತಿಯಿಲ್ಲದೆ ಸಾಯುತ್ತಿದ್ದರು ಜನ. ಆದರೂ ಅದು ಭಾರತದ ಸಂಪತ್ತಾಗಿದೆ. ಸೌಂದರ್ಯದ ಸಂಕೇತವಾಗಿದೆ. ಅಭಿಮಾನದ ಗೋಪುರವಾಗಿದೆ. ಐಶ್ವರ್ಯದ ಕೇಂದ್ರವಾಗಿದೆ. ಅದನ್ನು ಅವಮಾನಿಸುವುದು ದೊಡ್ಡ ದೇಶ ದ್ರೋಹ. ಮುಸ್ಲಿಂ ಸ್ಮಾರಕಗಳ ವಿನಾಶ ದೇಶ ಪ್ರೇಮವೆಂದು ಬಿಂಬಿಸುವವರು ಮೊದಲು ಮನುಷ್ಯ ಸ್ನೇಹ ಕಲಿಯಲಿ.

**ಡಾ॥ ಹುಸೈನ್ ರೆಂಡತಾನಿ**
ಇತಿಹಾಸಕಾರ, ಕೇರಳ
ಅನುವಾದ : **ಉಮರುಲ್ ಫಾರೂಕ್ ಅಹ್ಮದ್**
ಮರ್ಕಜ್ ಕೊಟ್ಟಮುಡಿ






ಭಾರತ ಕಮ್ಯುನಿಸ್ಟ್ ಪಕ್ಷ ಮತ್ತು ನವಕರ್ನಾಟಕ ಪ್ರಕಾಶನದವರು ಜಂಟಿಯಾಗಿ ಆಯೋಜಿಸಿದ ಕಾರ್ಯಕ್ರಮದಲ್ಲಿ ಎರಡು ಕ್ರಾಂತಿಕಾರಿ ಕೃತಿಗಳನ್ನು ರಷ್ಯನ್ ಸಮಾಜವಾದಿ ಕ್ರಾಂತಿಯ ಶತಮಾನೋತ್ಸವದ ಅಂಗವಾಗಿ ೦೫-೧೧-೨೦೧೭ರಂದು ಬೆಂಗಳೂರಿನ ಸಿ.ಪಿ.ಐ. ಕಛೇರಿ ಘಾಟೆ ಭವನದಲ್ಲಿ ಕಾ॥ ಎಂ. ಡಿ. ಹರಿಗೋವಿಂದ ಅವರ ಅಧ್ಯಕ್ಷತೆಯಲ್ಲಿ ಬಿಡುಗಡೆ ಮಾಡಲಾಯಿತು. 'ಜಗವ ನಡುಗಿಸಿದ ಆ ಹತ್ತುದಿನ' ಮತ್ತು 'ಕುಟುಂಬ, ಸ್ನೇಹಿತರು ಮತ್ತು ದೇಶ' ಎಂಬ ಎರಡು ಕೃತಿಗಳ ಅನಾವರಣ ಕಾರ್ಯಕ್ರಮದಲ್ಲಿ ಡಾ॥ ಬಿ. ಆರ್. ಮಂಜುನಾಥ್, ಕಾ॥ ಜಿ. ವಿ. ಶ್ರೀರಾಮರೆಡ್ಡಿ, ಡಾ॥ ಜಿ. ರಾಮಕೃಷ್ಣ, ಡಾ॥ ವಸುಂಧರಾ ಭೂಪತಿ, ಕಾ॥ ಎಂ. ಡಿ. ಹರಿಗೋವಿಂದ, ಕಾ॥ ಪಿ. ವಿ. ಲೋಕೇಶ್, ಶ್ರೀ ಜಿ. ಎಸ್. ನಾಗೇಂದ್ರನ್ ಹಾಗೂ ಡಾ॥ ಸಿದ್ದನಗೌಡ ಪಾಟೀಲ ಉಪಸ್ಥಿತರಿದ್ದರು.




ಸಂದರ್ಶಕರು

**ಸತೀಶ್ ಕುಲಕರ್ಣಿ, ವಿಜಯಕಾಂತ ಪಾಟೀಲ, ಅನುಸೂಯ ಕಾಂಬಳೆ**

# ಚಂಪಾರಣ್ಯದಲ್ಲೊಂದು ಇಣುಕು

ಬಹುಮುಖಿ ವ್ಯಕ್ತಿತ್ವದ, ಜನಪರ ಚಿಂತಕ ಚಂಪಾ ಮೈಸೂರಿನಲ್ಲಿ ನಡೆಯುತ್ತಿರುವ ೮೩ನೇ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಅವರಿಗೆ ಹೊಸತು ಬಳಗದ ಹಾರ್ದಿಕ ಶುಭಾಶಯಗಳು.

ಪ್ರಾಧ್ಯಾಪಕ, ಕವಿ, ನಾಟಕಕಾರ, ಅಂಕಣಕಾರ, ಸಂಕ್ರಮಣದ ಸಂಪಾದಕ, ಕನ್ನಡದ ಹೋರಾಟಗಾರ, ಬಂಡಾಯ ಸಾಹಿತ್ಯ ಚಳುವಳಿಯ ಸಂಘಟಕ ಹೀಗೆ ಹೇಳುತ್ತ ಹೋದರೆ ಚಂದ್ರಶೇಖರ ಪಾಟೀಲರ ಕ್ರಿಯಾಲೋಕ ಬೆಳೆಯುತ್ತಲೇ ಹೋಗುತ್ತದೆ. ಮೂಲತಃ ಒಬ್ಬ ಮಾನವತಾವಾದಿಯಾದ ಚಂಪಾ ಅವರು ಪ್ರತಿಕ್ರಿಯೆ ಮತ್ತು ಪ್ರತಿರೋಧದ ನೆಲೆಯಿಂದಲೇ ತಮ್ಮ ಸೃಜನಶೀಲತೆಯನ್ನು ಅಭಿವ್ಯಕ್ತಗೊಳಿಸಿದವರು. ಅವರು ಸ್ನೇಹಜೀವಿಯೂ ಹೌದು, ಕಟುವಿಮರ್ಶಕರೂ ಹೌದು, ವಿಡಂಬಕರೂ ಹೌದು. ೧೯೬೪ರಿಂದ ಇಂದಿನವರೆಗೆ ಅವರು ನಡೆಸಿಕೊಂಡು ಬಂದ ಸಂಕ್ರಮಣ ಸಾಹಿತ್ಯಿಕ ಪತ್ರಿಕೆ ಕನ್ನಡ ಸಾಹಿತ್ಯ–ಸಾಂಸ್ಕೃತಿಕ ಲೋಕದ ಗ್ಯಾಜಟೀಯರ್ ಎಂದು ಹೇಳಿದರೆ ತಪ್ಪಾಗಲಾರದು. ಸಾಹಿತ್ಯ, ಸಾಂಸ್ಕೃತಿಕ ಲೋಕದ ಬರಹಗಳಿಗೆ, ಚಿಂತನೆಗಳಿಗೆ, ಜಗಳಗಳಿಗೆ ಒಂದು ವೇದಿಕೆಯಾಗಿ ಅದು ಕೆಲಸ ಮಾಡಿದೆ. ಚಂಪಾ ಕಾಲಂ ಮೂಲಕ ಚಂಪಾ ಅವರು ಪ್ರಸ್ತಾಪಿಸದ ವಿಷಯಗಳೇ ಇಲ್ಲ. ತಾತ್ವಿಕ, ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ, ವೈಯಕ್ತಿಕ – ಹೀಗೆ ಎಲ್ಲ ನೆಲೆಗಳಿಂದ ಅವರು ವಿಮರ್ಶಕರಾಗಿ, ವಿಡಂಬಕರಾಗಿ, ಟೀಕಾಕಾರರಾಗಿ, ಜಗಳಗಂಟರಾಗಿ, ಕಿಡಿಗೇಡಿಯಾಗಿ ತಾವು ಕಂಡು ಕೇಳಿದ, ಓದಿ ನೋಡಿದ ಎಲ್ಲ ವಿಷಯಗಳನ್ನೂ ದಾಖಲಿಸಿದ್ದಾರೆ, ವಿಶ್ಲೇಷಿಸಿದ್ದಾರೆ. ಒಟ್ಟಾರೆ ಚಂಪಾ ಅವರ ಒಟ್ಟು ಅಭಿವ್ಯಕ್ತಿಯನ್ನು ಗಮನಿಸಿದರೆ ಅದೊಂದು 'ಚಂಪಾರಣ್ಯ'. ಒಂದು ಅರಣ್ಯ ಒಳಗೊಳ್ಳುವ ಎಲ್ಲ ರೀತಿಯ ವೈವಿಧ್ಯವೂ ಅವರ ಕೃತಿಗಳಲ್ಲಿದೆ. ಟೀಕೆ, ವಿಡಂಬನೆಗೆ ಹೆಸರಾದ ಚಂಪಾ ವ್ಯಕ್ತಿಗತ ನೆಲೆಯಲ್ಲಿ ಪ್ರೀತಿಯನ್ನೇ ತಮ್ಮ ಸಂವಹನ ಸಾಧನವನ್ನಾಗಿ ಬಳಸಿದವರು. 'ಪ್ರೀತಿ ಇಲ್ಲದೆ ನಾನೇನನ್ನೂ ಮಾಡುವುದಿಲ್ಲ, ದ್ವೇಷವನ್ನೂ ಸಹ' ಎಂದು ಹೇಳುವ ಚಂಪಾ ನಮ್ಮ ನಡುವಿನ, ನಮ್ಮ ಕಾಲದ ಒಂದು ಮಾದರಿ ವ್ಯಕ್ತಿತ್ವ .



ವಿದ್ಯಾರ್ಥಿಜೀವನದಿಂದಲೇ ಕವನ ರಚನೆಯ ಮೂಲಕ ಆರಂಭವಾದ ಅವರ ಸಮಾಜಮುಖಿ ಸಂವಹನ ಕೇವಲ ಲೇಖಕ, ಚಿಂತಕ, ಅಧ್ಯಾಪಕರಾಗಿ ಆ ಕ್ಷೇತ್ರಕ್ಕೆ ಸೀಮಿತವಾಗಲಿಲ್ಲ. ನಾಡಿನ ಎಲ್ಲ ಜನಪರ ಚಳುವಳಿಗಳ ಜೊತೆ ಒಂದು ಸಂಪರ್ಕವನ್ನೂ, ಸಂಬಂಧವನ್ನೂ ಬೆಳೆಸಿಕೊಂಡು ಬೆಳೆದವರು. ಕೋಮುವಾದದ ವಿರುದ್ಧ, ಜಾತ್ಯತೀತ ನಿಲುವಿಗೆ ಬದ್ಧರಾದ ಅವರ ನಡೆ, ನುಡಿ ಅವರನ್ನು ಹಲವಾರು ಬಾರಿ ಅಪಾಯಕ್ಕೂ ಸಿಲುಕಿಸಿದೆ. ಇಂಗ್ಲಿಷ್ ವಿದ್ಯಾರ್ಥಿ, ಪ್ರಾಧ್ಯಾಪಕರಾದ ಅವರು ಕನ್ನಡ ಸಾಹಿತ್ಯ ಮತ್ತು ಚಳುವಳಿಗೆ ಅಪಾರ ಕೆಲಸ ಮಾಡಿದವರು. ಗೋಕಾಕ್ ವರದಿ ಜಾರಿ ಚಳುವಳಿಯಿಂದ ಆರಂಭಿಸಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ, ಕನ್ನಡ ಸಾಹಿತ್ಯ ಪರಿಷತ್ತಿಗೆ ಪರ್ಯಾಯವಾಗಿ ಬಂಡಾಯ ಸಾಹಿತ್ಯ ಚಳುವಳಿ ಕಟ್ಟಿ ಬೆಳೆಸಿದವರಲ್ಲೊಬ್ಬರಾಗಿ, ನಂತರ ಸಾಹಿತ್ಯ ಪರಿಷತ್ತಿಗೆ ಅಧ್ಯಕ್ಷರಾಗಿ, ಈಗ ೮೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಅವರು ಸವೆಸಿದ ದಾರಿ ಸುವಿಹಾರಿ ದಾರಿಯಲ್ಲ. ಚಂಪಾ ಟೀಕಾಕಾರರಾಗಿ ಹೇಗೆ ಪ್ರಸಿದ್ಧರೋ ಹಲವಾರು ಟೀಕೆಗಳಿಗೂ ಒಳಗಾಗಿದ್ದಾರೆ. ಟೀಕೆಗಳನ್ನು ವಿಡಂಬಿಸುತ್ತಲೇ ಸ್ವೀಕರಿಸುವ ಗುಣ ಅವರಿಗಿದೆ. ಹಲವಾರು ಸಂದರ್ಭದಲ್ಲಿ ತಮ್ಮನ್ನೇ ತಾವು ಟೀಕಿಸಿಕೊಳ್ಳುವ ವಿಶಿಷ್ಟತೆಯೂ ಅವರಿಗಿದೆ. ಇಂಥ ಅಪರೂಪದ ಚಿಂತಕ ಚಂಪಾ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿರುವುದು ಸ್ವಾಗತಾರ್ಹ.

ಚಂಪಾ ಅವರ ಕುರಿತು ಕರ್ನಾಟಕ ಸಾಹಿತ್ಯ ಅಕಾಡೆಮಿ ಇತ್ತೀಚೆಗೆ ಹಾವೇರಿ ಜಿಲ್ಲೆಯ ಕಾಗಿನೆಲೆಯಲ್ಲಿ 'ಚಂಪಾ ವ್ಯಕ್ತಿ ಮತ್ತು ಅಭಿವ್ಯಕ್ತಿ' ಕಾರ್ಯಕ್ರಮ ಹಮ್ಮಿಕೊಂಡಿತ್ತು. ಆ ಸಂದರ್ಭದಲ್ಲಿ ಸತೀಶ್ ಕುಲಕರ್ಣಿ, ವಿಜಯಕಾಂತ ಪಾಟೀಲ ಹಾಗೂ ಅನಸೂಯ ಕಾಂಬಳೆ ಅವರು ಚಂಪಾ ಅವರ ಸಂದರ್ಶನವನ್ನು 'ಹೊಸತು'ಗಾಗಿ ಮಾಡಿದ್ದಾರೆ. ಅವರಿಗೆ ಹೊಸತು ಆಭಾರಿಯಾಗಿದೆ.

*– ಸಂ.*



ಗೌರಿ ಲಂಕೇಶ್ ಹತ್ಯೆ ಸಂದರ್ಭದ ಪ್ರತಿಭಟನೆಯಲ್ಲಿ ಚಂಪಾ

**ಹೊಸತು :** 'ಗೋಕಾಕ್ ಮಾದರಿಯ ಕನ್ನಡ ಚಳುವಳಿ ಮತ್ತೊಮ್ಮೆ ಆಗಬೇಕು; ಬಂಡಾಯ ಸಾಹಿತ್ಯ ಸಂಘಟನೆ ಮರುಹುಟ್ಟು ಪಡೆಯಬೇಕು'– ಎಂಬ ಮಾತುಗಳು ಆಗಾಗ ಕೇಳಿಬರುತ್ತವೆ, ಇವು ಸಾಧ್ಯವೇ?

**ಚಂಪಾ :** ಬರಗೂರು ರಾಮಚಂದ್ರಪ್ಪನವರಿಗೆ ಎಪ್ಪತ್ತು ತುಂಬಿದ ಪ್ರಯುಕ್ತ ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಿದ್ದ ಆತ್ಮೀಯ ಸನ್ಮಾನ ಸಮಾರಂಭದಲ್ಲಿ ಈ ಮಾತುಗಳು ಚರ್ಚೆಗೆ ಬಂದಿದ್ದವು, ಆಗ ನಾನು ಹೇಳಿದ್ದೆ : ರಾಜ್ಯದಲ್ಲಿ ರಾಷ್ಟ್ರದಲ್ಲಿರುವ ಅನೇಕ ಸಮಸ್ಯೆ ಪ್ರಶ್ನೆಗಳನ್ನು ಕೇಳಲು ದಲಿತ–ಬಂಡಾಯದಂಥ ಬಲವಾದ ಸಂಘಟನೆ ಒಂದು ಕಾಲದಲ್ಲಿತ್ತು. ಬೆಂಗಳೂರಿನ ಮೊದಲ (೧೯೭೯) ಬಂಡಾಯ ಸಾಹಿತ್ಯ ಸಮ್ಮೇಳನವು ಇದಕ್ಕೆ ಬೀಜ ಹಾಕಿದರೆ, ವಿಜಾಪುರದಲ್ಲಿ ನಡೆದ ಎರಡನೆಯ ಸಮ್ಮೇಳನದಲ್ಲಿ ಸೈದ್ಧಾಂತಿಕ ರೂಪ ನೀಡಿತ್ತು. ಅಂದು ಬೇರೆ ಬೇರೆ ಸಮಸ್ಯೆಗಳಿಗೆ ಬಂಡಾಯ ಸಂಘಟನೆ ಕೊಡುತ್ತಿದ್ದ ತಕ್ಷಣದ ಪ್ರತಿಕ್ರಿಯೆಗಳು ಒಂದು ಜಾಗೃತಿಯನ್ನು ಮಾಡುತ್ತಿತ್ತು. ಯಾರೋ ಕೇಳುವವರಿದ್ದಾರೆ ಎಂಬ ಭಾವನೆ ವ್ಯವಸ್ಥೆಯಲ್ಲಿ ಹುಟ್ಟಿತ್ತು. ಇಂದೂ ಸಹ ಅವೇ ಸಮಸ್ಯೆಗಳು ಈಗಲೂ ಮುಂದುವರಿದಿವೆ. ಅವನ್ನು ಸಂಘಟಿತವಾಗಿ ಎದುರಿಸುವ ಶಕ್ತಿ ಈಗ ನಮ್ಮಲ್ಲಿ ಉಳಿದಿಲ್ಲ. ಬಂಡಾಯ ಸಂಘಟನೆಯ ರಾಜ್ಯ ಸಂಚಾಲಕರು ಯಾರು ಅಂತೂ ನನಗೆ ಗೊತ್ತಿಲ್ಲ. ಕ್ಷೀಣವಾದ ಬಂಡಾಯ ಸಂಘಟನೆಯು ಈಗ ಭೂತಕಾಲ ಸೇರಿದೆ. ಆದರೆ, ಬೇರೆ ಬೇರೆ ಸ್ವರೂಪದಲ್ಲಿ ಅದರ ಆಶಯಗಳು ಬಂಡಾಯದ ಬರಹಗಾರರ ಕೃತಿಯಲ್ಲಿ ಕಾಣುತ್ತೇವೆ. ಅಂದಿನ ಸಮಸ್ಯೆಗಳು ಈಗ ಇನ್ನೂ ಹೆಚ್ಚು ಪ್ರಖರವಾಗಿವೆ. ಇತ್ತೀಚಿನ ೨–೩ ದಶಕಗಳ ಜಾಗತೀಕರಣ, ಮೂರನೇ ಜಗತ್ತಿನ ಬಡರಾಷ್ಟ್ರಗಳ ಮೇಲೆ ಆಕ್ರಮಣ ಮಾಡುತ್ತಿದೆ. ಯಾವುದೇ ಪಕ್ಷ ಆಡಳಿತದಲ್ಲಿರಲಿ, ಮೂಲಭೂತ ಸಮಸ್ಯೆಗಳಿಗೆ ಸ್ಪಂದಿಸುತ್ತಿಲ್ಲ. ಕಾಂಗ್ರೆಸ್ ಅಥವಾ ಬಿಜೆಪಿ ಯಾರೇ ಆಡಳಿತಕ್ಕೆ ಬರಲಿ, ಜಾಗತೀಕರಣವು ಹುಟ್ಟುಹಾಕಿದ ಸಂದಿಗ್ಧತೆಗೆ ಪ್ರತಿರೋಧ ಒಡ್ಡಬೇಕು. ಆದರೆ ಅದು ಆಗುತ್ತಿಲ್ಲ. ಇಂಥ ಸನ್ನಿವೇಶದಲ್ಲಿ ಬುದ್ಧಿಜೀವಿಗಳು ಮಾತುಗಳ ಮೂಲಕ ಪ್ರತಿರೋಧ ಒಡ್ಡಬಹುದು. ನಮ್ಮಲ್ಲಿಯ ಆಂತರಿಕ ಭಿನ್ನಾಭಿಪ್ರಾಯಗಳನ್ನು ಮರೆತು ನಮ್ಮ ಸಾಮಾನ್ಯ ಎದುರಾಳಿ ವೈರಿಯನ್ನು ಎದುರಿಸಬೇಕಾಗಿದೆ. ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ಮುಂತಾದ ದೇಶದ ಬೇರೆ ಬೇರೆ ರಾಜ್ಯಗಳ ಮೇಲೆ ಪ್ರಭಾವ ಬೀರಿದ ಕರ್ನಾಟಕದ ಬಂಡಾಯ ಸಂಘಟನೆಯ ವೇದಿಕೆ ಇವತ್ತು ಇರಬೇಕಾಗಿತ್ತು. ಈಗಲಾದರೂ ರಾಜ್ಯ ಮಟ್ಟದಲ್ಲಿ ಸಂಘಟನೆ ಮಾಡಲೇಬೇಕು. ಹೊಸ ಪೀಳಿಗೆಗೆ ಇದರ ಜವಾಬ್ದಾರಿಯನ್ನು ಕೊಡಬೇಕು. ಈಗಿರುವ ಚುರುಕಾದ ಮಾಧ್ಯಮಗಳನ್ನು, ಸೋಷಿಯಲ್ ಮೀಡಿಯಾಗಳನ್ನು ಬಳಸಿಕೊಂಡು ಒಟ್ಟಾರೆ ಜನಾಭಿಪ್ರಾಯ ಮೂಡಿಸಬೇಕು. ಬಂಡಾಯ ಸಂಘಟನೆಯ ಮರುಹುಟ್ಟು ಕೊಡಬೇಕು. ಯಾವುದೇ ಪಕ್ಷ ಆಡಳಿತಕ್ಕೆ ಬಂದರೂ ನಮ್ಮ ಸಮಸ್ಯೆಗಳು ಬಗೆಹರೆದಿಲ್ಲ–ಮಿಣಿಹರೆದಿಲ್ಲ.

ನಮ್ಮೆದುರಿಗೆ ರಾಜಕೀಯದ ಎರಡು ದಾರಿಗಳಿವೆ. ದೇವೇಗೌಡರ ಜೆಡಿಎಸ್ ಪಕ್ಷ ಮತ್ತು ವಾಟಾಳ್ ನಾಗರಾಜರ ವಾಟಾಳ್ ಪಕ್ಷ. ದೇವೇಗೌಡರದು ರಾಷ್ಟ್ರೀಯ ಪಕ್ಷವೂ ಹೌದು, ಪ್ರಾದೇಶಿಕ ಪಕ್ಷವೂ ಹೌದು. ತೊಂದರೆ ಎಂದರೆ ಅವರ ರಾಷ್ಟ್ರ, ರಾಜ್ಯ, ಜಿಲ್ಲಾಕೇಂದ್ರಗಳ ಪಕ್ಷದ ಎಲ್ಲಾ ಕಛೇರಿಗಳು ಒಂದೇ ಮನೆಯಲ್ಲಿವೆ. ಇನ್ನು ವಾಟಾಳರು ಉಗ್ರ ಹೋರಾಟಗಾರರು, ಕನ್ನಡ ಪ್ರೇಮಿ, ಅಗ್ರ ನಾಯಕರೂ ಹೌದು. ಇವರ ಮಾತುಗಳಿಗೆ ಕೆಲವು ಮಿತಿಗಳಿವೆ. ಇವರು 'ಇನ್‌ಕ್ಲಿಜಿವ್' ಅಲ್ಲ. ಪ್ರತಿ ಚುನಾವಣೆ ಬಂದಾಗ ನೂರು ಕ್ಯಾಂಡಿಡೇಟ್ ಹಾಕ್ತೇನೆ ಅಂತಾರೆ. ಒಂದಾದರೂ ಆರಿಸಿ ಬರಲಿ ಅಂತಾರೆ. ಆ ಒಂದು ನಾನೇ ಆಗಿರಬೇಕೆಂಬ ಧೋರಣೆ ಅವರದು. ಹೀಗಾಗಿ ನಮ್ಮ ಸಂಘಟನೆ, ಧ್ಯೇಯ–ಧೋರಣೆಗಳ ಮೂಲಕವೇ ಪ್ರತಿಪಕ್ಷರೂಪದಲ್ಲಿ ನಾವು ಬಂಡಾಯದವರು ಕೆಲಸ ಮಾಡಬೇಕು. ಪ್ರಸಂಗ ಬಂದರೆ ಸೂಕ್ತ ಪ್ರಾದೇಶಿಕ ಪಕ್ಷವೊಂದು ಕನ್ನಡ ಹಿತಾಸಕ್ತಿ ಕಾಪಾಡುವಂತೆ ಕಂಡರೆ ಅದರ ಜೊತೆ ಕೈಜೋಡಿಸಲೂ ಅಡ್ಡಿಯಿಲ್ಲ.

**ಹೊಸತು :** 'ಬಂಡಾಯ ಸಾಹಿತ್ಯ ಸಂಘಟನೆ' ಎಂಬ ಅದೇ ಹಳೆಯ ಹೆಸರು ಈಗಲೂ ಪ್ರಸ್ತುತವೇ?

**ಚಂಪಾ :** 'ಬಂಡಾಯ ಸಾಹಿತ್ಯ ಸಂಘಟನೆ' ಎಂಬ ಹೆಸರಿನಿಂದಲೇ ನಾನು ಹೇಳಿದ ಮೇಲಿನ ಕೆಲಸವಾಗಬೇಕು. ಈಗಾಗಲೇ ಬಂಡಾಯ ಎಂಬ ಶಬ್ದಕ್ಕೆ ಐತಿಹಾಸಿಕ ಬ್ರ್ಯಾಂಡ್ ಇದೆ. ಹೊಸ ತಂತ್ರಗಳಿಂದ ಕಟ್ಟಬೇಕು, ಗುಪ್ತವಾಗಿದ್ದ ಬಂಡಾಯವನ್ನು ಹೊಸ ರೂಪರೇಷೆಗಳಿಂದ ಚಲಾವಣೆಗೆ ತರಬೇಕು.

**ಹೊಸತು :** ಅಂದು (೭೦–೮೦ರ ದಶಕದಲ್ಲಿ) ಆಗಿನ ಪೀಳಿಗೆಯಲ್ಲಿದ್ದ ಸ್ಪಿರಿಟ್ ಇಂದಿನ ಪೀಳಿಗೆಯಲ್ಲಿ ಇದೆಯೆನ್ನಿಸುತ್ತದೆಯೇ?

**ಚಂಪಾ :** ಯಾವುದೇ ಪ್ರವೃತ್ತಿಯೇ ಆಗಲಿ ತಾನಾಗಿಯೇ ಬರುವುದಿಲ್ಲ. ಅದನ್ನು ಹುಟ್ಟುಹಾಕಲು ನಾವು ಪ್ರಯತ್ನಿಸಬೇಕು.

**ಹೊಸತು :** ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ಮೈಸೂರು ಸಮ್ಮೇಳನದಲ್ಲಿ ನೀವು ಏನಾದರೂ ಹೊಸದನ್ನು ಹೇಳಬಹುದೇ ?

**ಚಂಪಾ :** ಸಾಮಾನ್ಯವಾಗಿ ಈ ಅಧ್ಯಕ್ಷರ ಭಾಷಣಗಳು ಎರಡು ರೀತಿಯಲ್ಲಿ ಇರುತ್ತವೆ. ಏಕೀಕರಣ ಪೂರ್ವದಲ್ಲಿ ಕನ್ನಡ ನುಡಿ, ಕನ್ನಡ ಸಾಹಿತ್ಯ, ನಾಡ ಪ್ರೀತಿ ಇವೆಲ್ಲ ಸರ್ವೇಸಾಮಾನ್ಯವಾಗಿ ಕನ್ನಡ ಪ್ರೀತಿಯನ್ನು ಹುಟ್ಟಿಸುವ ಅವರವರ ಭಾಷಣಗಳಲ್ಲಿ ಪ್ರಸ್ತಾಪವಾದದ್ದನ್ನು ನಾ ನೋಡಿದ್ದೇನೆ. ಏಕೀಕರಣದ ನಂತರ ಅಂದರೆ ೧೯೫೭ರಲ್ಲಿ ಧಾರವಾಡದಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನದಲ್ಲಿ ಕುವೆಂಪುರವರು ಬಹಳ ಬೇರೆ ರೀತಿಯಲ್ಲಿ ಪ್ರಶ್ನೆಗಳನ್ನೆತ್ತಿ ಅಧ್ಯಕ್ಷರ ಸ್ಥಾನದಿಂದ ಮಾತನಾಡಿದ್ದರು. ದಕ್ಷಿಣದ ಕುವೆಂಪು, ನಾನು ಬೆಳೆದಂಥ ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ (ಈಗ ಸರ್ವಾಧ್ಯಕ್ಷರೆನ್ನುತ್ತಾರೆ !) ಅದ್ಭುತವಾಗಿ ನಾಡಿನ ಆಗುಹೋಗುಗಳ ಬಗ್ಗೆ ದೂರ ದೃಷ್ಟಿಯಿಟ್ಟುಕೊಂಡು ವೈಚಾರಿಕವಾಗಿ ವೈಜ್ಞಾನಿಕವಾಗಿ ಮಾತನಾಡಿದ್ದರು. ಅದೇ ಕುವೆಂಪುರವರ ಕ್ರಿಯಾಭೂಮಿಯಾದ ಮೈಸೂರಿನಲ್ಲಿ ಇಂದಿನ ಸಂದರ್ಭ–ವಿದ್ಯಮಾನಗಳ ಕುರಿತು ಬೇರೆ ಬೇರೆ ರೀತಿಯಲ್ಲಿ ನನ್ನ ವಿಚಾರಗಳನ್ನು ಹಂಚಿಕೊಳ್ಳುವ ಸಿದ್ಧತೆ ಮಾಡಿಕೊಳ್ಳುತ್ತಿದ್ದೇನೆ. ಕುವೆಂಪು ನೆಲದಲ್ಲಿ ನಾನು ಸರ್ವಾಧ್ಯಕ್ಷನಾಗಿ ಮಾತನಾಡುವುದು ನನಗೆ ಪುಳಕ ಕೂಡ ತಂದಿದೆ.

**ಹೊಸತು :** ಈ ಸಮ್ಮೇಳನ ಮುಗಿದು ಒಂದು ವರ್ಷದ ನಂತರ, ನೀವು ಮಾಜಿ ಆಗುತ್ತೀರಿ. ಈ ಅವಧಿಯಲ್ಲಿ ನೀವು ಏನೇನು ಮಾಡಬಹುದು, ಮಾಡುತ್ತೀರಿ?

**ಚಂಪಾ :** ಸರ್ವಾಧ್ಯಕ್ಷರ ಪಟ್ಟಾಭಿಷೇಕ ಬಹಳ ಗೌರವದ್ದು. ಮುಂದಿನ ಸಮ್ಮೇಳನದ ಅವಧಿಯ ತನಕ ತುಂಬ ವ್ಯಾಪಕವಾಗಿ ನಾಡಿನಾದ್ಯಂತ ಸುತ್ತಾಡುತ್ತೇನೆ. ಅವಶ್ಯವಾಗಿ ಶಕ್ತ್ಯಾನುಸಾರ ಪರಿಷತ್ತಿನ ಅಧ್ಯಕ್ಷರ ಜೊತೆ ಮಾಡಿಕೊಂಡು ನನ್ನ ಆರೋಗ್ಯದ ಇತಿಮಿತಿಯಲ್ಲಿ ಕನ್ನಡದ ಜಾಗೃತಿಗಾಗಿ ಕೆಲಸ ಮಾಡುತ್ತೇನೆ. ಅಕಾಡೆಮಿ, ಪ್ರಾಧಿಕಾರ ಎಲ್ಲ ಸಂಘಟನೆಗಳನ್ನು ನನ್ನ ಜೊತೆಗಿರುವಂತೆ ನೋಡಿಕೊಂಡು ಕನ್ನಡ ಚಳುವಳಿ ಮತ್ತಿತರ ಹೋರಾಟಗಳಲ್ಲಿ ಬೇರೆ ಬೇರೆ ಸಮಸ್ಯೆಗಳು ಒಳಗೊಳ್ಳುವಂತೆ ಮಾಡಿ, ಈ ಎಲ್ಲ ಚಳುವಳಿಗಳಿಗೆ ಅರ್ಥಬರುವಂತೆ ಪ್ರಯತ್ನಿಸುತ್ತೇನೆ.

**ಹೊಸತು :** ಇವೆಲ್ಲ ಒಂದು ವರ್ಷದಲ್ಲಿ ಸಾಧ್ಯವೆ?

**ಚಂಪಾ :** ಯಾವ್ಯಾವು ಸಾಧ್ಯವೊ ಅವನ್ನು ಬಗೆಹರಿಸಲು ಪ್ರಯತ್ನ ಮಾಡುವೆ. ಒಟ್ಟಾರೆ ಕನ್ನಡ ಸಾಹಿತ್ಯ ಪರಿಷತ್ತಿಗೆ ದೊಡ್ಡ ಶಕ್ತಿ ತಂದು ಕೊಡುವ ಕೆಲಸವನ್ನು ಖಾತ್ರಿಯಾಗಿ ಮಾಡುತ್ತೇನೆ.

**ಹೊಸತು :** ಇಲ್ಲಿ ಉತ್ತರ ಕರ್ನಾಟಕದಲ್ಲಿ ಮಹಾದಾಯಿ ಸಮಸ್ಯೆ ಹೊತ್ತಿ ಉರಿಯುತ್ತಿದೆ. ಇದರ ಪ್ರಸ್ತಾಪವನ್ನು ಸಮ್ಮೇಳನದಲ್ಲಿ ಮಾಡುವಿರಾ? ಇದು ಮುಂಬರುವ ಚುನಾವಣೆಯಲ್ಲಿ ಪ್ರತಿಯೊಂದು ಪಕ್ಷಗಳ ಪ್ರಣಾಳಿಕೆಯ ಭಾಗವಾಗಬೇಕೆ?

**ಚಂಪಾ :** ನನ್ನ ಅಧ್ಯಕ್ಷೀಯ ಭಾಷಣದಲ್ಲಿ ಮಹಾದಾಯಿ ಸಮಸ್ಯೆಯ ಪ್ರಸ್ತಾಪ ಖಂಡಿತವಾಗಿ ಬಂದೇ ಬರುತ್ತದೆ. ಮಹಾದಾಯಿ ಇದು ದೊಡ್ಡ ಸಮಸ್ಯೆಯಲ್ಲ. ಕೇಂದ್ರ ಸರ್ಕಾರ ಮನಸ್ಸು ಮಾಡಿದರೆ, ಇದು ಕೂಡಲೇ ಬಗೆಹರಿಯುತ್ತದೆ. ಮುಂಬರುವ ಚುನಾವಣೆಯಲ್ಲಿ ಮಹಾದಾಯಿಯು ಪ್ರತಿಯೊಂದು ಪಕ್ಷದ ಪ್ರಣಾಳಿಕೆಯಲ್ಲಿರಬೇಕು. ಮಹಾದಾಯಿ ಹೋರಾಟ ಕೇವಲ ರೈತರ ಹೋರಾಟ ವಾಗದೇ, ಕನ್ನಡ ಚಳುವಳಿಯ ಒಂದು ಭಾಗವೂ ಆಗಬೇಕು.

**ಹೊಸತು :** ನಾಲ್ಕನೇ ದರ್ಜೆ ನೌಕರರ ನೇಮಕಾತಿ ವಿಚಾರದಲ್ಲಿ ಸರೋಜಿನಿ ಮಹಿಷಿ ವರದಿ ಅನುಷ್ಠಾನಕ್ಕೆ ಬರಲು ಸಂವಿಧಾನಬದ್ಧವಾಗಿ ಸಾಧ್ಯವಿಲ್ಲ ಎಂಬ ವಾದವಿದೆ ನಿಮ್ಮ ಅಭಿಪ್ರಾಯವೇನು ?

**ಚಂಪಾ :** ಕಾನೂನು ಮತ್ತು ಸಂವಿಧಾನದ ಚೌಕಟ್ಟುಗಳ ಇಕ್ಕಟ್ಟಿನ ನಡುವೆಯೂ ರಾಜ್ಯ ಸರ್ಕಾರ ಪರ್ಯಾಯ ಮಾರ್ಗ ಹುಡುಕಲು ಮನಸ್ಸು ಮಾಡಿದರೆ, ಹಳೆಯ ಸರೋಜಿನಿ ಮಹಿಷಿ ವರದಿ ಬದಲು ಈಗಿನ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಸಲ್ಲಿಸಿರುವ 'ಪರಿಷ್ಕೃತ ಮಹಿಷಿ ವರದಿ' ಅನುಷ್ಠಾನಕ್ಕೆ ತರಲು ಅಂಥದೇನು ತೊಂದರೆಯಿಲ್ಲ ಎಂಬ ಭಾವನೆ ನನ್ನದು. ನಮ್ಮಲ್ಲೀಗ ಕನ್ನಡಸ್ನೇಹಿ ಸರ್ಕಾರವಿದೆ. ಅಕಾಡೆಮಿ, ಪ್ರಾಧಿಕಾರ, ಪರಿಷತ್ತು, ಪುಸ್ತಕ ಪ್ರಾಧಿಕಾರ– ಎಲ್ಲ ಕಡೆಗೂ ಬದ್ಧತೆ ಇರುವ ಲೇಖಕರು, ಹೋರಾಟಗಾರರು ಅಧಿಕಾರದಲ್ಲಿ ಇರುವುದರಿಂದ ಇಂಥ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದು ಬಹಳ ಸರಳ. ಈವರೆಗೆ ಬಂದಿರುವ ಪ್ರತಿಯೊಂದು ಸರ್ಕಾರ ಕನ್ನಡದ ಕೆಲಸಕ್ಕೆ ಎಂದೂ ವಿರೋಧ ಮಾಡಿಲ್ಲ. ಗುಂಡೂರಾವ ಮುಖ್ಯಮಂತ್ರಿಗಳಾಗಿದ್ದಾಗ ಪೇಜಾವರರ ಮೂಲಕ ಸಂಸ್ಕೃತಕ್ಕೆ ಅಗ್ರಪಟ್ಟ ಕೊಡಬೇಕೆಂಬ ಹುನ್ನಾರದಿಂದಾಗಿ ಕನ್ನಡವಿರೋಧಿ ಧೋರಣೆ ತಾಳಿದ್ದು ಬಿಟ್ಟರೆ, ಕರ್ನಾಟಕದ ಎಲ್ಲ ಸರ್ಕಾರಗಳು ಕನ್ನಡ ಭಾಷೆ, ಅದಕ್ಕೆ ಸಂಬಂಧಿಸಿದಂತೆ ಅನೇಕ ಕುಂದುಕೊರತೆಗಳಿಗೆ ಸ್ಪಂದಿಸಿವೆ. ಸ್ಪಂದಿಸದಿದ್ದರೆ ಏನಾಗುತ್ತದೆ ಎಂಬುದಕ್ಕೆ ಗುಂಡೂರಾವ ಸರ್ಕಾರದ ಪತನ ಒಂದು ಉದಾಹರಣೆಯಾಗಬಹುದು. ನಮಗೆ ಖಂಡಿತವಾಗಿ ಈಗ ಬೇಕಾಗಿರುವುದು ಕನ್ನಡ ಸರ್ಕಾರ.

**ಹೊಸತು :** ಕನ್ನಡಕ್ಕೆ ನಿಜಕ್ಕೂ ಹಿಂದಿ ಭಾಷೆ ತೊಡಕೇ? ಮತ್ತು ಅತಿಯಾದ ಪ್ರಾದೇಶಿಕತೆಯ ವಾದ–ಹೋರಾಟ ಪ್ರತ್ಯೇಕತೆಗೆ ಪುಷ್ಟಿ ಒದಗಿಸಿದಂತಾಗುವುದಿಲ್ಲವೇ?

**ಚಂಪಾ :** ಇದು ಭಾಳ ಸಂಕೀರ್ಣ ಪ್ರಶ್ನೆ. ಕನ್ನಡ ಒಂದು ಜನಭಾಷೆ. ಹಿಂದಿ ಕೂಡ ಜನ ಭಾಷೆ. ಇಂಗ್ಲಿಷೂ ಜನ ಭಾಷೆನೆ. ಭಾಷೆಗಳು ತಮ್ಮಷ್ಟಕ್ಕ ತಾವು, ತನ್ನ ಪಾಡಿಗೆ ತಾನು ಬೆಳಿಬೇಕಂತ ಇದ್ರ ಅದೇನ್ ತಪ್ಪಲ್ಲ. ಈಗ ಅಡವಿ ಒಳಗ ಎಲ್ಲ ಗಿಡ ಬೆಳಿತಾವು. ಅಲ್ಲಿ ಎಲ್ಲ ಜಾತಿಯ ಸಣ್ಣ–ದೊಡ್ಡ ಗಿಡಾನೂ ಇರ್ತಾವ. ಅಡವಿ ಅಂದ್ರ ಹಂಗ, ಅಲ್ಲಿ ಎಲ್ಲಾ ಥರದ್ದು ಬೆಳದ ತೀರ್ತತಿ. ಒಟ್ಟಾರೆ ಭೂಮಿ ಫಲವತ್ತಾಗಿ ಎಲ್ಲಿಬೇಕಲ್ಲಿ ಸಸ್ಯಸಂಪತ್ತನ್ನು ಬಿಂಬಿಸ್ತಿರ್ತತಿ. ಈಗ ಪ್ರಶ್ನೆ ಬಂದಿರೋದು, ಒಂದು ಜನ ಭಾಷೆ ಆಡ್ತಿರ್ತಕ್ಕಂತ ಜನ ಮತ್ತೊಂದು ಭಾಷೆಯ ಜನಸಮುದಾಯದ ಮ್ಯಾಲ ಬ್ಯಾರೆ ಬ್ಯಾರೆ ಕಾರಣಕ್ಕ ದಬ್ಬಾಳಿಕೆ ಮಾಡ್ತಿದ್ದರ ಅದು ಕಂಠಕ, ಕುತ್ತು, ಆಪತ್ತು ಅಂತ ಕರೀತೀವಿ. ಆ ಕಾರಣಕ್ಕ ಪ್ರತಿಭಟನೆ ಮಾಡಬೇಕಾತದ. ಆಗ ಸಂಸ್ಕೃತ ದೇವಭಾಷೆ ಅಂತಾ ಇತ್ತು. ಈಗ ಅದು ಸತ್ತು ಅಮರವಾಗಿದೆ. ಯಾರ ಮ್ಯಾಲೂ ಅದಕ್ಕ ದಬ್ಬಾಳಿಕೆ ಮಾಡಕಾಗಲ್ಲ. ಇಂಗ್ಲಿಷ್ ಭಾಷೆಯ ಆಕ್ರಮಣ ಬ್ಯಾರೆ ರೀತಿಯ ಮೂಲಕ ಬಂಡವಾಳಶಾಹಿ, ಸಾಮ್ರಾಜ್ಯಶಾಹಿ ರಾಷ್ಟ್ರಗಳ ಸಾಧನ ಆಗಿ ಅದ್ನ ತಮ್ಮ ವಿಸ್ತರಣೆಗೆ ಬಳಕೆ ಮಾಡ್ಕಂತಾರಲ್ಲ, ಅವಾಗ ನಾವು ಪ್ರತಿಭಟಿಸ ಬೇಕಾಗತದ. (ನಾ ಅವಾಗಿವಾಗ ಹೇಳ್ತಿರ್ತೆನಿ : "ಇಂಗ್ಲಿಷರು ಭಾರತವನ್ನು ಬಿಟ್ಟು ಹೋದರು; ಇಂಗ್ಲಿಷನ್ನು ಬಿಟ್ಟು ಹೋದರು...!") ಇಂಗ್ಲಿಷನ್ನು ನಾವು ಬಳಸಿಕೊಳ್ಳಬಹುದಿತ್ತು; ಬಳಸಿಕೊಳ್ತೀವಿ. ಇಂಗ್ಲಿಷ್ ಒಂದು ಅಂತರರಾಷ್ಟ್ರೀಯ ಭಾಷೆ. ಇದು ಜಾಗತೀಕರಣದ ಸಾಧನವಾಗಿ ಬರ್ತಾ ಐತಲ್ಲ, ಅದ್ನ ನಾವು ವಿರೋಧ ಮಾಡ್ಲೇಬೇಕು. ಹಂಗ ಹಿಂದಿ ರಾಷ್ಟ್ರಭಾಷೆ ಅಂತಾರ. ಆದರ ಅದು ರಾಷ್ಟ್ರಭಾಷೆ ಅಲ್ಲ. ಸಂವಿಧಾನದಲ್ಲಿ ನಮೂದಿತವಾದ ಎಲ್ಲ ಭಾಷೆಗಳಲ್ಲಿ ಅದೂ ಒಂದು ಭಾಷೆ ಅಷ್ಟೆ. ಹಿಂದಿ–ಇಂಗ್ಲಿಷ್ ಎರಡೂ ಸಂಪರ್ಕಭಾಷೆಗಳಷ್ಟೆ ಅವು. ತಮಿಳುನಾಡಿಗೆ 'ಹಿಂದಿ' ಸಂಪರ್ಕ ಭಾಷೆಯಾಗಿ ಬೇಕಾಗಿಲ್ಲ, ಅದೇ ಹಾದಿಯೊಳಗ ಕರ್ನಾಟಕ ಮುಂದುವರಿತಿರೋದು ಒಳ್ಳೇದು. ನಮ್ಮ ಒಳೊಳಗ ಕನ್ನಡ ನಮಗ ಮಾತೃಭಾಷೆ. ಬ್ಯಾರೆ ರಾಷ್ಟ್ರಗಳು, ರಾಜ್ಯಗಳು ತಮಗ ಎಷ್ಟು ಬೇಕೋ ಅಷ್ಟ ಇಂಗ್ಲಿಷ್ ಕಲಿತಾರ. ನಾವೂ ಅಷ್ಟ. ಹಿಂಗ ವೈಜ್ಞಾನಿಕ ಹಾದಿಯೊಳಗ ಕನ್ನಡಜನ ಬೆಳಿತಿದಾರಲ್ಲ, ಇದು ಒಳ್ಳೆ ಬೆಳವಣಿಗೆ. ಈ ಹಿನ್ನೆಲೆಯೊಳಗೆ ಖಂಡಿತವಾಗಿ ಹಿಂದಿ ಹೇರಿಕೆ ಒಪ್ಪಲಾಗದು. ಮೊದಲು ತ್ರಿಭಾಷಾ ಸೂತ್ರವಿತ್ತು. ಈಗ ಎರಡು ಭಾಷೆಗಳು ಇದ್ದರೆ ಮಾತ್ರ ಸಾಕು, ಹಿಂದಿ ನಮಗೆ ಬೇಕಾಗಿಲ್ಲ. ಕೇಂದ್ರ ಸರ್ಕಾರದ ಹಿಂದೀ ಹೇರಿಕೆ ಮಾತ್ರವಲ್ಲ, ಅದರ ಎಲ್ಲ ಧೋರಣೆಗಳ ಬಗ್ಗೆಯೂ ನಾವು ವಿಚಾರ ಮಾಡಬೇಕಾಗಿದೆ. ಪ್ರಭುತ್ವ ಎನ್ನುವುದು ಯಾವಾಗಲೂ ಟೆಂಪ್ರರಿ. ಕೇಂದ್ರದ ಆರ್ಥಿಕ ನೀತಿ ಮತ್ತು ಇನ್ನಿತರ ನೀತಿಯ ಬಗ್ಗೆ ಕನ್ಸಾಲಿಡೇಶನ್ ನಡೆದಿದೆ. ಯಶವಂತಸಿನ್ಹಾ, ಎಲ್. ಕೆ. ಅಡ್ವಾನಿ ಅಂಥವರು ಸಾವಕಾಶವಾಗಿ ದನಿ ಎತ್ತುತ್ತಿದ್ದಾರೆ.

ಆರ್ಥಿಕ ನೀತಿಗಳೆಲ್ಲ ಫೇಲ್ಯೂರ್ ಆಗಿವೆ. ಸಾಮಾನ್ಯ ಮನುಷ್ಯ–ಬುದ್ಧಿಜೀವಿಗಳು ಭ್ರಮನಿರಸನಗೊಂಡಿದ್ದಾರೆ. ಇವಕ್ಕೆಲ್ಲ ಉತ್ತರ ಕಂಡುಕೊಳ್ಳುವ ಮತ್ತು ಎಚ್ಚರ ಮೂಡಿಸುವ ಕೆಲಸ ನಾವು ಮಾಡಬೇಕು. ಯಾತಕ್ಕೂ ಭಯಪಡಬೇಕಾಗಿಲ್ಲ. ನನ್ನ

ಸಂದರ್ಶಕರಾದ ಅನಸೂಯ ಕಾಂಬಳೆ, ವಿಜಯಕಾಂತ ಪಾಟೀಲ ಹಾಗೂ ಸತೀಶ್ ಕುಲಕರ್ಣಿ ಅವರೊಂದಿಗೆ ಚಂಪಾ

ದೃಷ್ಟಿಯಲ್ಲಿ ಕರ್ನಾಟಕವೇ ನಿರ್ಣಾಯಕ ಪಾತ್ರ ವಹಿಸಬೇಕು. ಸ್ವಾತಂತ್ರ್ಯ ಬಂದನಂತರ, ಅನೇಕ ಸೈದ್ಧಾಂತಿಕ ತಿಕ್ಕಾಟಗಳು ನಡೆಯುತ್ತಿದ್ದವು.

ಆದರೆ, ಇಂದು ಪರಮೋಚ್ಚವಾದ ಸಂವಿಧಾನಕ್ಕೆ ಧಕ್ಕೆ ಬರುವ ರೀತಿಯಲ್ಲಿ ಒತ್ತಡಗಳು ಹೆಚ್ಚಾಗಿವೆ. ಇಡೀ ಸನ್ನಿವೇಶ ಅಸಂಗತವೆನಿಸುತ್ತಿದೆ. ಕೇಂದ್ರದಲ್ಲಿ ಈಗಿರುವ ಪ್ರಧಾನಿ ನರೇಂದ್ರ ಮೋದಿಯವರು ಪ್ರಜಾಸತ್ತಾತ್ಮಕವಾಗಿ ಆರಿಸಿ ಬಂದವರು. ಅವರು ನಮ್ಮ ಪ್ರಧಾನಿ. ರಾಜಕೀಯದಲ್ಲಿ ಅವರು ಆಡುವ ಮಾತುಗಳೇ ಬೇರೆ, ಅವರ ಬೆಂಬಗಲಿಗರು ಆಡುವ ಆಟಗಳೇ ಬೇರೆ. ಪ್ರಜಾಸತ್ತೆ ಕುಸಿಯುತ್ತಿದೆ. ಹೇಳುವುದಕ್ಕೂ ಆಚರಣೆಗೂ ಬಹಳ ವ್ಯತ್ಯಾಸವಿದೆ. ನಾವು ತಿಳುವಳಿಕೆ ಇದ್ದವರು, ಪ್ರಜ್ರಾಭುತ್ವವನ್ನು ಪ್ರೀತಿಸುವವರು ಇಂಥವುಗಳ ಬಗ್ಗೆ ಮಾತನಾಡಬೇಕು ಮತ್ತು ಪ್ರಶ್ನಿಸಬೇಕು.

ಅತಿಯಾದ ಪ್ರಾದೇಶಿಕತೆ ಬಗ್ಗೆ ಕೇಳಿದ್ರಿ, ನಿಮ್ಮ ಮಾತಿನೊಳಗ ಈ 'ಅತಿ' ಅನ್ನದು ಭಾಳ ಮುಖ್ಯ. ಅತೀ ಅನ್ನದು ಯಾವಾಗ್ಲೂ ಕೇಡು. ಅತಿ ಆಸೆ ಗತಿಗೇಡು ಅಂತಾರಲ್ಲ. ನಮ್ಮ ಕನ್ನಡದಾಗ ಮೂರು ಶಬ್ದ ಅದಾವು : 'ಇತಿ, ಮಿತಿ ಮತ್ತು ಅತಿ'. ಇತಿ ಅಂದ್ರ 'ಇದ್ದಷ್ಟು'; ಅದಕ್ಕ ಒಂದು ಗೆರಿ ಬೇಕು, ಅದು ಮಿತಿ; ಆದ್ರ ಆ ಮಿತಿ ದಾಟಿದ್ರ ಅದು 'ಅತಿ' ಆಕತಿ. ಅತಿ ಅನ್ನದು ಕೆಟ್ಟದ್ದು. ಆದರೆ, ಪ್ರಾದೇಶಿಕತೆ ಬೇಕೇ ಬೇಕು. ಕರ್ನಾಟಕಕ್ಕ ಕರ್ನಾಟಕದ ಐಡೆಂಟಿಟಿ, ಬಂಗಾಲಕ್ಕ ಬಂಗಾಲದ ಐಡೆಂಟಿಟಿ.. ಯಾಕಂದ್ರ, ನಮ್ದು ಒಕ್ಕೂಟ ವ್ಯವಸ್ಥೆ. ನಾವು ಭಾರತ ಜನನಿಯ ತನುಜಾತೆ. ಭಾರತ 'ಜನನಿ', ನಾವು ಅವಳಿಗೆ ಮಕ್ಕಳು. ಅಂದ್ರ ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು... ಎಲ್ಲಾ. ಈ ಮಕ್ಕಳಿಗೆ ಅಸ್ತಿತ್ವ ಇದ್ರನ ತಾಯಿಗೆ ಅಸ್ತಿತ್ವ. ಆ ದೃಷ್ಟಿಯಿಂದ ಭಾರತದ ಒಕ್ಕೂಟದ ಒಟ್ಟಂದದ ಸ್ವರೂಪಕ್ಕ, ಅದರ ಕಲ್ಪನೆಗೆ ಧಕ್ಕೆ ಬರದ ರೀತಿಯಲ್ಲಿ ಆಯಾ ಪ್ರದೇಶದಲ್ಲಿ ಅವು ಸಮೃದ್ಧವಾಗಿ ಆ ನೆಲದ ಸತ್ವ ಹೀರಿಕೊಂಡು ಬೆಳೀಬೇಕು. ಆ ದಿಕ್ಕಿನೊಳಗ ಇವತ್ತು ಇಂಡಿಯಾದ ರಾಜಕಾರಣ ನಡೀತಾ ಇರೋದು. ನಾವು ರಾಷ್ಟ್ರೀಯ ಪಕ್ಷ, ರಾಷ್ಟ್ರೀಯ ಪಕ್ಷ ಅಂತಾ ಹೇಳ್ತೀವಿ ಅಷ್ಟ. ಯಾವ್ದೂ ಇಲ್ಲ ಅಂಥದು ಈಗ. ಕೇಂದ್ರದಲ್ಲಿ ಒಂದೇ ಒಂದು ಆಡಳಿತ ಮಾಡೋವಂಥ ಪಕ್ಷಾನ ಇಲ್ಲ. ಯಾವ ಪಕ್ಷಾನೂ ಈಗ ಸ್ವತಂತ್ರವಾಗಿ ಸರಕಾರ ರಚನೆ ಮಾಡೋ ಪರಿಸ್ಥಿತಿ ಇಲ್ಲ. ಒಂದು ಯು.ಪಿ.ಎ. ಅಂತೀವಿ. ಇನ್ನಂದಕ್ಕ ಎನ್.ಡಿ.ಎ. ಅಂತೀವಿ. ಹಿಂಗಾಗಿ, ಒಕ್ಕೂಟದೊಳಗ ಪ್ರತಿ ರಾಜ್ಯ ಬೆಳೀಬೇಕು. ಒಂದು ಮನಿ ಬೆಳೀಬೇಕಂದ್ರ, ಆ ಮನಿ ಎಲ್ಲ ಸದಸ್ಯರೂ ಬೆಳೀಬೇಕು. ಹಂಗ ತನ್ನದೇ ಆದ ವ್ಯಕ್ತಿತ್ವ, ಲಾಂಛನವನ್ನು ಪಡೆದು ರಾಜ್ಯಗಳು ಸಮೃದ್ಧವಾಗಿ ಬೆಳೀಬೇಕು. ಹಿಂಗಾಗಿ, ಆ ದಿಕ್ಕಿನೊಳಗ ನಮ್ಮ ವರ್ತಮಾನದ ಚರಿತ್ರೆ ಆಕಾರಗೊಳ್ತಾ ಇರೋದು ಭಾಳ ಒಳ್ಳೇ ಬೆಳವಣಿಗೆ. ಡೆಮಾಕ್ರೆಟಿಕ್ ಆದಂಥ ಬೆಳವಣಿಗೆ ಇದು.

**ಹೊಸತು :** ಹಿಂದಿ ಬೇಡವಾದರೆ, ನಾವು ಬೇರೆ ಬೇರೆ ರಾಜ್ಯಗಳ ಜೊತೆಗೆ ಅದು ಹೇಗೆ ವ್ಯವಹರಿಸಲು ಸಾಧ್ಯ ?




**ಚಂಪಾ :** ಕನ್ನಡವೇ ಕರ್ನಾಟಕದಲ್ಲಿ ಆಡಳಿತ, ಶೈಕ್ಷಣಿಕ ಕ್ಷೇತ್ರಗಳ ಸಂಪರ್ಕ ಭಾಷೆ ಎಲ್ಲವೂ ಆಗಿರುತ್ತದೆ. ಬೇರೆ ರಾಜ್ಯಗಳ ಜೊತೆಗೆ ವ್ಯವಹರಿಸುವಾಗ ನಮ್ಮದೇ ಆದ ಭಾಷೆಯೊಂದರ ಆಯ್ಕೆ ತಾತ್ಕಾಲಿಕವಾಗಿ ಇರುತ್ತದೆ.

**ಹೊಸತು :** ಹೊಸ ಧರ್ಮಗಳ ಹುಟ್ಟು ನಮಗೆ ಈಗಲೂ ಬೇಕೇ?

**ಚಂಪಾ :** ಇಲ್ಲ, ಹೊಸ ಧರ್ಮಗಳ ಹುಟ್ಟು ಬೇಕಾಗಿಲ್ಲ. ಪ್ರಜಾಸತ್ತೆಯೇ ನಮ್ಮ ಹೊಸ ಧರ್ಮ. ನಮ್ಮ ಸಂವಿಧಾನವೇ ನಮ್ಮ ಧರ್ಮಗ್ರಂಥ ಅನಬಹುದು. ಆದ್ರ ಇವತ್ತಿನ ಕರ್ನಾಟಕದ ವಿದ್ಯಮಾನದೊಳಗ ಈ ಪ್ರಶ್ನೆ ಕೇಳೀರಿ. ಕರ್ನಾಟಕದ ಒಂದು ಬಲಾಢ್ಯ ಸಮುದಾಯದೊಳಗ ಇದು ಒಂದು ಒಳಗಿನ ಭೂಕಂಪ. ಒಳಗಿಂದಾನ ಹುಟ್ಟಿದ್ದಿದು. ಲಿಂಗಾಯತ ಧರ್ಮ ಅನ್ನದು ವೈದಿಕ ಧರ್ಮಕ್ಕಿಂತ ಭಿನ್ನವಾದದ್ದು. ಅದನ್ನ ವಿರುದ್ಧ ಹಾಕಿಕೊಂಡೇ ಬೆಳೆದಂತ ಧರ್ಮ. ಇದು ಹೊಸ ಧರ್ಮ ಅಲ್ಲ. ಹನ್ನೆರಡನೇ ಶತಮಾನ ದೊಳಗ ಬಸವಣ್ಣ ಮೊದಲಾದವರು ಏನು ಬೀಜ ಊರಿದ್ರು, ಆ ಬೀಜ ಭೂಮಿಯನ್ನು ಭೇದಿಸಿಕೊಂಡು ಹೊರಬರೋಕ್ಕಿಂತ ಮುಂಚೇನ ಅದು ಬೆಳಿಬೇಕಾದ ರೀತಿಯೊಳಗ ಬೆಳಿಬಾರದು ಅನ್ನೋದಕ್ಕ ಏನೇನು ಕುತಂತ್ರ ಮಾಡಬೇಕೋ ಅದ್ನ ಮಾಡ್ಕೊಂತ ಬಂದ್ರು. ಆದರ ಅದು ಕ್ರಾಂತಿಯ ಬೀಜ. ಅದು ಗಟ್ಟಿ ಬೀಜ. ಹುಳುಕು ಬೀಜ ಅಲ್ಲ; ಅದು ವಿಚಾರದ ಬೀಜ. ಭೂಮಿಯೊಳಗ ಅದು ತನ್ನದೇ ರೀತಿಯೊಳಗ ಸಾಹಿತ್ಯಿಕವಾಗಿ, ವೈಚಾರಿಕವಾಗಿ, ಒಂದು ಮನೋಧರ್ಮದ ರೀತಿಯಲ್ಲಿ ಬೆಳಕೊಂತ ಬಂದು, ಈಗ ಅದು ಎಲ್ಲ ಹಳೆಯದನ್ನು ಕೊಡವಿಕೊಂಡು ಮ್ಯಾಲ ಬರಾಕ ಪ್ರಯತ್ನ ಮಾಡ್ತಿದೆಯಲ್ಲ, ಇದು ನಮ್ಮಂಥವರಿಗೆ ಭಾಳ, ಒಂಥರಾ ಹೊಸ ಹುಟ್ಟು ನೀಡ್ತು. ಇದು ಹೊಸ ಹುಟ್ಟು. ಅದರ ಹೊಸ ಅವತಾರ. ನಾವೆಲ್ಲ ಏನು, ಬುದ್ಧ–ಬಸವ–ಅಂಬೇಡ್ಕರರ ಪರಂಪರೆಯೊಳಗ ಇರೋರ ಅದೇವಿ, ಬಸವಾದಿ ಪ್ರಮಥರ ಕೇಂದ್ರ ವ್ಯಕ್ತಿತ್ವ ಮತ್ತು ಕೇಂದ್ರ ವಿಚಾರ ಇಟ್ಕೊಂಡೇ ಎಲ್ಲರೂ ಪಾಲ್ಗೊಳ್ಳುವಂಥ ಆಂದೋಳನ ಇದು. ಇಲ್ಲಿ ಬರೀ ಸಾಹಿತಿಗಳಷ್ಟ ಅಲ್ಲ, ಇಡೀ ಜನಸ್ತೋಮನ ಐತಿ. ಇವತ್ತು ಇದ್ನ ಜನಾಂದೋಲನದ ಸ್ವರೂಪದಲ್ಲಿ ಏನು ಮಾಡ್ತಾ ಅದಾರು, ಇದು ಒಳ್ಳೆಯ ಬೆಳವಣಿಗೆ. ಇದ್ನ ನಾನು ನನ್ನ ಲೇಖನವೊಂದರಲ್ಲಿ, 'ಪರಿವರ್ತನೆಯ ಪರ್ವ' ಅಂತಾ ಕರೆದಿದ್ದೆ. ಇದು ಪರಿವರ್ತನೆ. ಇದ್ನ ನಾವೆಲ್ಲ ಏನು ಡೆಮಾಕ್ರೆಟಿಕ್, ಲೆಫ್ಟಿಸ್ಟ್, ಸೆಕ್ಯೂಲರಿಸ್ಟ್ ಅಂತ ಅನ್ನೋರು ಅದೇವಿ ಸ್ವಾಗತ ಮಾಡ್ಬೇಕು.

**ಹೊಸತು :** ಅಲ್ಪಸಂಖ್ಯಾತ ಸೌಲಭ್ಯ ಪಡೆಯ ಬೇಕೆನ್ನುವುದು ಈ ಪ್ರತ್ಯೇಕ ಧರ್ಮ ಮಾನ್ಯತೆಯ ಹಿಂದಿನ ಹುನ್ನಾರವಿರಬಹುದೆ?

**ಚಂಪಾ :** ಅನ್ನದಾನ–ಶಿಕ್ಷಣ ದಾನಗಳ ಮೂಲಕ ಬಲಾಢ್ಯವಾಗಿ ಬೆಳೆದಿರುವ ಲಿಂಗಾಯತ ಧರ್ಮಕ್ಕೆ ಅದರ ಯಾವ ಅವಶ್ಯಕತೆಯಿಲ್ಲ. ಬುದ್ಧ ಪರಂಪರೆಯ ರೀತಿಯದು. ಇದರಲ್ಲಿ ಕ್ರಿಯಾಶೀಲ ರಾಜಕಾರಣಿಗಳು, ಪ್ರಗತಿಪರ ಮಠಾಧೀಶರು ಇರುವವರಲ್ಲದೆ, ಆಂಧ್ರ, ತೆಲಂಗಾಣ, ಕರ್ನಾಟಕದ ಜನಸಾಮಾನ್ಯರೂ ಕೂಡ ಇದಕ್ಕೆ ಬೆಂಬಲಿಸಿದ್ದಾರೆ. ಇದೊಂದು ರೀತಿಯ ಜನಾಂದೋಲನ. ಇದಕ್ಕೆ ನನ್ನ ಸಮ್ಮತಿ ಮತ್ತು ಸಂಪೂರ್ಣ ಬೆಂಬಲವಿದೆ.

**ಹೊಸತು :** ಪೇಜಾವರರು ಬಸವಾದಿ ಶರಣರ ಮತ್ತು ವೀರಶೈವರ ಶಿವ ಒಂದೇ ಅಂದಿದ್ದಾರೆ, ಹೀಗಾಗಿ ಪ್ರತ್ಯೇಕ ಧರ್ಮ ಬೇಡ ಅಂದಿದ್ದಾರಲ್ಲ?

**ಚಂಪಾ :** ಅವರ ಶಿವ ಸ್ವರ್ಗಸ್ಥ ಶಿವ. ನಮ್ಮ ಶಿವ ಜಗದಗಲ ಮುಗಿಲಗಲ ವ್ಯಾಪಿಸಿದವನು. ನಮ್ಮ ಶಿವ ಕಲ್ಪನೆ ಸಾಕ್ಷಾತ್ಕಾರವೇ ಬೇರೇನೆ. ನಮ್ಮ ಪರಿಕಲ್ಪನೆ ಬೇರೆ, ಅವರ ಪರಿಕಲ್ಪನೆಯೇ ಬೇರೆ. ಪೇಜಾವರರ ವಾದ ಒಪ್ಪಲಾಗುವುದಿಲ್ಲ.

**ಹೊಸತು :** ಈ ಹೊತ್ತು ನಮ್ಮ ನಡುವಿನ 'ಚಿಂತಕರ ಹತ್ಯೆ'ಗಳನ್ನು ಒಬ್ಬ ಬರಹಗಾರರಾಗಿ ತಾವು ಹೇಗೆ ಪರಿಭಾವಿಸುವಿರಿ?

**ಚಂಪಾ :** ಈಗ, ಈ ನಿಮ್ಮ ಪ್ರಶ್ನೆಯೊಳಗ 'ಈ ಹೊತ್ತು' ಅನ್ನೋದು ಭಾಳ ಮುಖ್ಯ. ಅಂದ್ರ ಅದು ನಮ್ಮ ಸಮಕಾಲೀನ ಸಂದರ್ಭ. ನಮ್ಮ ಸುತ್ತಮುತ್ತಲೂ ನಮ್ಮ ಕಣ್ಣಾರೆ ನೋಡಿರತಕ್ಕಂತ ವಾಸ್ತವಗಳನ್ನು ಎದುರು ಇಟಗೊಂಡನ ಯಾವುದೇ ಚರ್ಚೆಯನ್ನು ಸ್ವಲ್ಪ ಹಿಂದೆ ಮುಂದೆ ಮಾಡಿ ನೋಡಬೇಕಾಕತಿ. ನಾವು ಇತ್ತೀಚೆಗೆ ನೋಡತಿದೀವಲ್ಲ, ಒಂದು ಎರಡು ಮೂರು ನಾಕು. ಹೀಂಗ ನಮ್ಮ ಕಣ್ಣೆದುರ ನೆರೆನಾಡು ಮಹಾರಾಷ್ಟ್ರದೊಳಗ ದಾಭೋಲ್ಕರ್, ಪನ್ಸಾರೆ; ನಮ್ಮ ಸಾಂಸ್ಕೃತಿಕ ರಾಜಧಾನಿ ಧಾರವಾಡ, ರಾಜಕೀಯ ರಾಜಧಾನಿ ಬೆಂಗಳೂರು ಒಳಗ ಎರಡು ಹತ್ಯೆ ನೋಡಿದ್ವಿ. ಇದ್ನೆಲ್ಲ ಒಬ್ಬ ಬರಹಗಾರನಾಗಿಯೇ ಖಂಡಿಸಬೇಕಂತಿಲ್ಲ. ಯಾವುದೇ ನಾಗರಿಕ ಸಮಾಜದ

ಒಬ್ಬ ಮನುಷ್ಯ, ಅವನಿಗೆ ಸಂವೇದನೆ ಅನ್ನೋದು, ಪ್ರಜ್ಞೆ ಅನ್ನೋದು ಇದ್ರ, ಎಲ್ಲಾ ರೀತಿಯಿಂದ ಇದ್ನ ಖಂಡನೆ ಮಾಡ್ಲೇಬೇಕು. ಮತ್ತು ಕಲ್ಬುರ್ಗಿ, ಗೌರಿ ಅವರ ಹತ್ಯೆ ಆದ ಮ್ಯಾಲ ಕರ್ನಾಟಕ, ಇಂಡಿಯಾ.. ಅಷ್ಟ ಅಲ್ಲ, ಇಡೀ ಜಗತ್ತಿನ್ಯಾಗ ಅದು ಏನು ಸಂಚಲನ ಉಂಟುಮಾಡೇತಲ್ಲ, ಅದು ಒಂದು ಪಾಜಿಟಿವ್ ಆದಂಥ ಬೆಳವಣಿಗೆ. ಈ ಆತಂಕಗಳನ್ನು ನಾವು ಕಣ್ಣ ಮುಚಿಗೊಂಡು, ಕಿವಿ ಮುಚಿಗೊಂಡು ಸಹಿಸಿಕೊಳ್ಳಲಿಕ್ಕೆ ಸಾಧ್ಯ ಇಲ್ಲ ಅನ್ನೋ ಒಂದು ಸ್ಪಷ್ಟವಾದ ಸಂದೇಶಾನ ಎಲ್ಲರೂ ಕೊಡ್ತಾ ಇರೋದು ಆರೋಗ್ಯಕರವಾದ ಬೆಳವಣಿಗೇನ ಅದು. ಬರಹಗಾರನಾಗಿ ಸಹಿತ ವಿಶೇಷ ಜವಾಬ್ದಾರಿ ಏನಂದರೆ, ನಾವೆಲ್ಲ ಅಕ್ಷರವನ್ನ ಮಾಧ್ಯಮವಾಗಿ ನಂಬಿಕೊಂಡವರು, ಇಲ್ಲಿ ಸಾಹಿತಿಗಳು ಬರ್ತಾರ, ಪತ್ರಕರ್ತರು ಬರ್ತಾರ, ಈ ಸಾಮಾಜಿಕ ಜಾಲತಾಣದೊಳಗೂ ಇರೋ ಮಾಧ್ಯಮಾನೂ ಬರಹಾನ. ಬರಹಗಾರ ಅನ್ನೋ ವ್ಯಾಖ್ಯಾನದೊಳಗ ಇವರೆಲ್ಲರೂ ಬರ್ತಾರ.. ಯಾಕಂದ್ರ ಪ್ರಜ್ಞಾಪೂರ್ವಕವಾಗಿ ನಾವೇನು ಪ್ರಜಾಸತ್ತೆ, ಸಂವಿಧಾನ ಅಂತಾ ಮಾಡ್ಕೊಂಡೀವಿ, ನಾವೆಲ್ಲ ಅದು ಕಲ್ಬುರ್ಗಿ, ಗೌರಿ ಯಾರೇ ಇರಬಹುದು. ನಾವು ಈ ವಿದ್ಯಮಾನವನ್ನು ಖಂಡಿಸಲೇಬೇಕು. ನಮಗೆ ಇವೆಲ್ಲ ಮೂಲ ಬೇರಿಗೇ ಕೊಡಲಿ ಹಾಕುವಂಥ ಘಟನೆಗಳು. ಇಡೀ ಇತಿಹಾಸದೊಳಗ ಇವು ಹೊಸವೇನಲ್ಲ, ನಿರಂತರವಾಗಿ ಚರಿತ್ರೆಯೊಳಗ ಇವು ನಡದಾವು. ಈ ಜಗತ್ತಿನ, ದೇಶದ ಚರಿತ್ರೆ ನೋಡಿದ್ರ ಇವು ಮಾಮೂಲಿ ವಿದ್ಯಮಾನ ಅನಿಸಿದ್ರೂ ಸಹಿತ ಮೌಲ್ಯಗಳ ಜೊತೆ ವಿಶೇಷ ಎಚ್ಚರ ಮೂಡ್ತಿರೋದು ಚಲೋ. ಇವತ್ತಿನ ವರ್ತಮಾನದ ಸಂದರ್ಭದೊಳಗ ಇಂಥ ಬೆಳವಣಿಗೆಗಳು ನೋಡ್ಲಿಕ್ಕೂ ಅಸಹ್ಯ ಮತ್ತು ಸಹನೆ ಮಾಡ್ಕೊಳಾಕೂ ಆಗಲ್ಲ. ಮೊದ್ಲಿಂದಾನೂ ಇದ ನನ್ನ ನಿಲುವು. ನಿಲುವು ಯಾವಾಗ್ಲೂ ಸ್ಪಷ್ಟ ಆಗೇ ಇರ್ತಾವು.

**ಹೊಸತು :** ನಮ್ಮಲ್ಲಿ ಸಾಕ್ಷರರ ಪ್ರಮಾಣ ಬೆಳೆದಂತೆ... ಕಂದಾಚಾರ, ಮೂಢನಂಬಿಕೆ, ಕೋಮುವಾದ, ಅಸಹಿಷ್ಣುತೆಗಳೂ ಬೆಳೆಯುತ್ತಲೇ ಇವೆ. ಇದಕ್ಕೆ ಬಹುಮುಖ್ಯ ಕಾರಣಗಳೇನು? ಇವುಗಳಿಗೆ ಕಡಿವಾಣ ಹಾಕುವ ಬಗೆ ನಿಮ್ಮ ಪ್ರಕಾರ..?

**ಚಂಪಾ :** ಇದು ಆತಂಕದ ವಿಷಯ. ಅಕ್ಷರ ಯಾವಾಗ್ಲೂ ಒಂದು ಬೆಳಕಿನ ಸಂಕೇತ. ಶತಮಾನಗಳುದ್ದಕ್ಕೂ ಬೇರೆ ಬೇರೆ ಕ್ರಾಂತಿಗಳ ಮೂಲಕ ಸಾಕ್ಷರರ ಪ್ರಮಾಣ ಬೆಳಿತಾನ ಬಂದಿರೋದು ಭಾಳ ಆರೋಗ್ಯಕರ ಬೆಳವಣಿಗೆ. ಆದರ, ಅಕ್ಷರ ಅನ್ನದು ಒಂದು ಮಾಧ್ಯಮ; ಅದು ಯಾರಪ್ಪನ ಸ್ವತ್ತೂ ಅಲ್ಲ. ನಮಗೆ ಸಾವಿರಾರು ವರ್ಷಗಳಿಂದ ನಮ್ಮಲ್ಲಿರೋ ಹಳೇ ಶಕ್ತಿಗಳು, (ಅವಕ ಮೊದ್ಲಿನ ಶಕ್ತಿ ಈಗ ಉಳ್ಕಂಡಿಲ್ಲ) ಅವು ಇನ್ನೂ ಕ್ರಿಯಾಶೀಲವಾಗಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ಮಾಡ್ತಾ ಅದಾವ. ಹೆಂಗಾರ ಮಾಡಿ ಉಳ್ಕೋಬೇಕು, ಬದ್ಕೋಬೇಕು ಅಂತಾ ಜೀವನದ ಕೊನೆ ಆಸೆ ಇಟ್ಕಂಡು ಈ ಅಕ್ಷರಗಳನ್ನು ದುರುಪಯೋಗ ಮಾಡ್ಕಂತ ಅದಾರ. ಇದ್ಕಾಗೀನ ಕಂದಾಚಾರ, ಮೂಢನಂಬಿಕೆಗಳನ್ನು ಬಳಸ್ಕಂತಿದಾರ. ಯಾವುದೇ ಅಕ್ಷರ ಅನ್ನದು ತಟಸ್ಥ ಮಾಧ್ಯಮ. ಅವರು ಯಾವ ರೀತಿ ಬಳಸಿಕೊಳ್ತಿದ್ದಾರೋ ನಾವೂ ಹಂಗ ಅದಕ್ಕ ವಿರುದ್ಧವಾಗಿ ಇದೇ ಮಾಧ್ಯಮಾನ ಬಳಸ್ಕೋಬೇಕು. ಅದೇ ಕಡಿವಾಣ. ನಿರಂತರ ಜಾಗೃತಿಯ ಸಂಘರ್ಷ ನಡೀತಾನ ಇರ್ಬೇಕು. ನಿರಂತರ ಸಂಘರ್ಷ–ಜಾಗೃತಿ ಮೂಲಕ ಮುಂದ ಮುಂದ ಹೋಗ್ತಾನ ಇರ್ಬೇಕು. ಆ ನಂಬಿಕೆ ನಮಗ ಬೇಕು. ಆದರೆ ಜನ ಇನ್ನೂ ಹಳೇ ಕಾಲದಲ್ಲಿ ಇದ್ದಾರ ಅಂತ ಅನಸ್ತತಿ. ಹಂಗ ಅನಸ್ತತಿ ಅಷ್ಟ. ಬೇಕಾದಷ್ಟು ಪರಿವರ್ತನೆ ಆಗೇತೀಗ. ತಮ್ಮ ನೀತಿ–ನಿರೂಪಣೆ ಮೂಲಕ, ರಾಜಕೀಯ–ಧರ್ಮದ ಮೂಲಕ ಕಲಿತವರು ವಿದ್ಯಾವಂತರು ವೇಗೋತ್ಕರ್ಷ (ಎಕ್ಸಲರೇಟ್) ಮಾಡಬೇಕು.

**ಹೊಸತು :** ಕನ್ನಡ ಸಾಹಿತ್ಯ ಪರಿಷತ್ತನ್ನು ಒಂದಾನೊಂದು ಕಾಲದಲ್ಲಿ ನೀವು 'ಕಸಾ' ಪರಿಷತ್ತು ಎಂದು ಗೇಲಿ ಮಾಡತಿದ್ದಿರಿ, ಆಮೇಲೆ ಅದರ ಅಧ್ಯಕ್ಷರಾದಿರಿ; ಈಗ ಸಮ್ಮೇಳನದ ಸರ್ವಾಧ್ಯಕ್ಷರೂ ಆಗಿ ಆಯ್ಕೆಯಾಗಿದ್ದೀರಿ. ಇದಕ್ಕೆ ಯಾರ ತಕರಾರೂ ಬಹುತೇಕ ಇಲ್ಲ. ಆದರೆ, ಎಲ್ಲೋ ಒಂದು ಕಡೆ ಈ ನಿಮ್ಮ 'ಒಪ್ಪಿಗೆ'ಯ ಮನೋಭಾವನೆ ನಿಮಗೆ ಮುಜುಗರ ಉಂಟುಮಾಡುತ್ತಿಲ್ಲವೆ? ಸಾಹಿತ್ಯ ಪರಿಷತ್ತಿನ ಬಗ್ಗೆ ಒಟ್ಟಾರೆ ಈಚಿನ ನಿಮ್ಮ ನಿಲುವೇನು?

**ಚಂಪಾ :** ಇದು ಅವಾಗ 'ಕಸಾ' ಪರಿಷತ್ತು ಆಗಿದ್ದು ಖರೆ. ನಂತರದಲ್ಲಿ ಅದು ನಮ್ಮಂಥವರ ಹೋರಾಟ, ಒತ್ತಾಯಗಳ ಮೂಲಕ ಹಲವು ರೂಪಾಂತರಗಳನ್ನು ಪಡೆದುಕೊಂಡು ಬದಲಾವಣೆ ಪರ್ವಕ್ಕೆ ಅಣಿಯಾಯಿತು. ಇದು ನಾನು ಅಧ್ಯಕ್ಷ ನಾದಾಗ ಇನ್ನಷ್ಟು ಇಂಬುಪಡೆದು ನಿಜದ ಕನ್ನಡದ ದನಿಯಾಗಿದ್ದನ್ನು ಶಿವಮೊಗ್ಗ ಸಮ್ಮೇಳನವನ್ನೂ ಸೇರಿದಂತೆ ನೀವು ನೋಡಿದ್ದೀರಿ. ಅದನ್ನೆಲ್ಲ ನಾನೀಗ ಬಿಡಿಸಿ ಹೇಳಬೇಕಾಗಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು ಇದೊಂದು ಅಧಿಕೃತ ಕನ್ನಡದ ಪ್ರಾತಿನಿಧಿಕ ಸಂಸ್ಥೆ. ಜನತೆಯ ಸಂಸ್ಥೆ. ಏಕೀಕರಣದಲ್ಲಿ ಇದರ ಪಾತ್ರವಿದೆ. ಕುವೆಂಪು ಒಳಗೊಂಡಂತೆ ಎಲ್ಲ ಕಾಲದ ಸಾಹಿತಿಗಳು ಇದಕ್ಕೆ ಬೆಂಬಲಿಸಿದ್ದಾರೆ.

ನವೋದಯದ ಸಾಹಿತಿಗಳು ಪರಿಷತ್ತಿಗೆ ಬಹಳ ಹತ್ತಿರವಿದ್ದರು. ಪ್ರಗತಿಶೀಲ ಸಾಹಿತ್ಯ ಚಳುವಳಿಯ ಕಟ್ಟೀಮನಿ, ನಿರಂಜನರಂಥವರು ಮಾತ್ರ ದೂರ ಉಳಿದರು. ಬಂಡಾಯದವರು ಸ್ವಲ್ಪಕಾಲ ದೂರವಿದ್ದು, ಅನಂತರ ಅದನ್ನೇ ಪರಿವರ್ತಿಸಿ ಪಾಲ್ಗೊಳ್ಳುತ್ತಿದ್ದಾರೆ. ಹಳಿ ತಪ್ಪಿದ ಗಾಡಿಯನ್ನು ಹಳಿಯ ಮೇಲೆ ತಂದವರು ಬಂಡಾಯದವರು. ಇದು ನಮ್ಮ ಸಂಸ್ಥೆ ಅಲ್ಲಿ ನಮ್ಮ ಬೆಳಕಿದೆ. ಖುಷಿ ಮತ್ತು ಸಮಾಧಾನಕರ ಸಂಗತಿ ಎಂದರೆ ಈ ಹಿಂದೆ ಕಟ್ಟೀಮನಿ, ಪಾಟೀಲ ಪುಟ್ಟಪ್ಪ, ಅನಂತಮೂರ್ತಿ ಅಂಥವರು ಸಮ್ಮೇಳನದ ಅಧ್ಯಕ್ಷರಾಗಿ ಹೋದದ್ದು. ಈಗ ಸಿದ್ಧಲಿಂಗಯ್ಯ, ಬರಗೂರರು ಹಾಗೂ ನಾನು, ನನ್ನಂಥವರ ಟ್ರೆಂಡ್ ಶುರುವಾಗಿದೆ. ಇದು ಆರೋಗ್ಯಪೂರ್ಣ ಸಂಗತಿ. ಪರಿಷತ್ತು ಯಾವಾಗಲೂ ಜನಮುಖಿಯಾಗಿರಬೇಕೆಂಬುದು ನಮ್ಮೆಲ್ಲರ ಆಶಯ. ಇತ್ತೀಚಿನ ಅನೇಕ ಸಾಹಿತ್ಯ ಸಮ್ಮೇಳನಗಳ ಆಮಂತ್ರಣ ಪತ್ರಿಕೆಗಳನ್ನು ನೋಡಿದಾಗ, ಅದರಲ್ಲಿ ಬಂಡಾಯ ಸಾಹಿತ್ಯ ಸಂಘಟನೆಯಲ್ಲಿ ಚರ್ಚೆಯಾಗುತ್ತಿದ್ದ ಅನೇಕ ವಿಷಯಗಳು ಬೇರೆ ಬೇರೆ ಗೋಷ್ಠಿಗಳ ರೂಪದಲ್ಲಿ ನಾವು ನೋಡುತ್ತಿದ್ದೇವೆ.

ಪರಿಷತ್ತಿನಲ್ಲಿಯೂ ಸಾಹಿತ್ಯ ಮತ್ತು ಸಮಾಜವನ್ನು ನೋಡುವ ದೃಷ್ಟಿಕೋನ ಬದಲಾವಣೆಯಾಗಿದೆ. ಹೀಗಾಗಿ ಈಗಿದಕ್ಕೆ 'ನನ್ನದೇ ಆದ' ಒಪ್ಪಿಗೆ ಇದ್ದೇ ಇದೆ.

**ಹೊಸತು :** ಕನ್ನಡ ಸಾಹಿತ್ಯ ಪರಿಷತ್ತಿಗೆ ಮಹಿಳೆಯೊಬ್ಬರು ಅಧ್ಯಕ್ಷರಾಗಬೇಕು. ಅದೂ ಅವಿರೋಧವಾಗಿ ಎಂಬ ವಾದವಿದೆ, ಅದಕ್ಕೆ ನಿಮ್ಮ ಅಭಿಪ್ರಾಯವೇನು ?

**ಚಂಪಾ :** ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರನ್ನು ಅದರ ಆಜೀವ ಸದಸ್ಯರು ಚುನಾವಣೆಯ ಮೂಲಕ


ಎಸ್. ಜಿ. ಸಿದ್ಧರಾಮಯ್ಯ, ಬರಗೂರು ರಾಮಚಂದ್ರಪ್ಪ ಜೊತೆ ಚಂಪಾ

## ಅಭಿನಂದನೆ...

ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಡಾ॥ ಆರ್. ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದ ವತಿಯಿಂದ ನೀಡುವ ೨೦೧೬ನೇ ಸಾಲಿನ 'ಪ್ರೊ॥ ಸ. ಸ. ಮಾಳವಾಡ ಗ್ರಂಥ ಪ್ರಶಸ್ತಿ'ಯು ಡಾ॥ ಹೆಚ್. ಚಂದ್ರಶೇಖರ ಅವರಿಗೆ ಲಭಿಸಿದೆ. ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ಆಯ್ಕೆಮಾಡಬೇಕು. ಅವಿರೋಧವಾಗಿ ಅನ್ನುವುದು ನಮ್ಮ ಪ್ರಜಾಸತ್ತೆಯ ವ್ಯವಸ್ಥೆಗೆ ವಿರೋಧವಾದದ್ದು. ಬೇಕಾದರೆ ೩-೪ ಜನ ಹೆಣ್ಣುಮಕ್ಕಳು ಚುನಾವಣೆಗೆ ನಿಲ್ಲಲಿ. ಆಗಬೇಕಾದರೆ ಪುರುಷರು ನಿಂತಿದ್ದರೆ, ಅವರು ಹಿಂಪಡೆಯಲಿ. ಚುನಾವಣೆಯ ಮೂಲಕವೇ ಮಹಿಳಾ ಅಧ್ಯಕ್ಷರ ಆಯ್ಕೆ ಯಾಗಬೇಕು. ಅದೇ ಸಾಧುವಾದ ಕ್ರಮ.

**ಹೊಸತು :** ನಿಮ್ಮ ಮಾತು-ಬರಹಗಳಲ್ಲಿ ಹಗಲಿ ಮುಗಲಿ 'ಭಾರತ' ಎಂಬ ಪದಕ್ಕೆ ಬದಲಿಯಾಗಿ 'ಇಂಡಿಯಾ' ಎಂದೇ ಬಳಸುತ್ತೀರಿ; 'ಭಾರತ' ಎಂಬೀ ಶಬ್ದದಿಂದ ಅದೆಂಥ ವಾಸನೆಯನ್ನು ನೀವು ಗ್ರಹಿಸಿದ್ದೀರಿ ಅನ್ನುವ ಕುತೂಹಲ ನಮಗೆ?

**ಚಂಪಾ :** 'ವಂದೇ ಮತರಂ', 'ಭಾರತ' - ಮುಂತಾದ ಶಬ್ದಗಳನ್ನು ನಮ್ಮ ಆರ್‌ಎಸ್‌ಎಸ್‌ಗಳು ತಮ್ಮ ಚಡ್ಡಿಯಲ್ಲಿ ಬಚ್ಚಿಟ್ಟುಕೊಂಡ ಮೇಲೆ, ನಾವೆಲ್ಲ ಈ ದೇಶವನ್ನು 'ಇಂಡಿಯಾ' ಅಂತ ಕರೆಯಲು ಸುರು ಮಾಡಿದೆವು. ಇಂಡಿಯಾ - ಇದು ಪ್ರಾದೇಶಿಕ ಹೆಸರು. ಜಗತ್ತಿನ ಎಲ್ಲ ದೇಶಗಳು ಇದನ್ನೇ ಬಳಸುತ್ತಿವೆ. 'ಭಾರತ' ಎನ್ನುವುದಕ್ಕೆ ಇತಿಹಾಸದ ಅದೂ ಸನಾತನತೆಯ ವಾಸನೆ ಇದ್ದರೆ, 'ಇಂಡಿಯಾ'ಕ್ಕೆ ಭೂಗೋಳದ ವಾಸನೆ ಇದೆ. ಹೀಗಾಗಿ, ಇತ್ತಿತ್ತಲಾಗಿ, ನಾ ಭಾಷಣ ಮಾಡಿಯಾದ ಕೊನೆಯಲ್ಲಿ, ಜೈ ಕರ್ನಾಟಕ, ಜೈ ಇಂಡಿಯಾ ಎಂದೇ ಹೇಳಿ ಮಾತು ಮುಗಿಸುತ್ತಿದ್ದೇನೆ. 'ಜೈ ಹಿಂದ್' ಅನ್ನುವುದಂತೂ ನನಗಾಗುವುದೇ ಇಲ್ಲ.

**ಹೊಸತು :** ಇಂದಿನ ಸಾಮಾಜಿಕ ಜಾಲತಾಣ ಗಳಿಂದ ಕನ್ನಡದ ಓದು-ಬರೆಹ ಕಡಿಮೆಯಾಗಿದೆ ಅನ್ನುವ ಮಾತು ನಿಜವೇ?

**ಚಂಪಾ :** ಪ್ರತಿ ಭಾಷೆಗೆ ಮಾತಾಡುವ, ಕೇಳುವ, ಬರೆಯುವ ಮತ್ತು ಓದುವ ಬೇಸಿಕ್ ಸ್ಕಿಲ್ಸ್‌ಗಳಿವೆ. ಮೊದಲು ತಾಳೆಗರೆಯ ಮೇಲೆ ಬರೆಯುತ್ತಿದ್ದರು. ಆಮೇಲೆ ಹಾಳಿ, ಪೆನ್ನು ಬಂತು. ಈಗ ಬೇರೆ ಬೇರೆ ಎಲೆಕ್ಟ್ರಾನಿಕ್ ಮಾಧ್ಯಮಗಳು ಬಂದಿವೆ. ಸೋಷಿಯಲ್ ಮೀಡಿಯಾ ಕೂಡ ಒಂದು ಮಾಧ್ಯಮ. ಇದು ಪರಿವರ್ತನೆ. ಓದುಗರನ್ನು ತಲುಪುವ ಮಾಧ್ಯಮದ ಸ್ವರೂಪ ಮಾತ್ರ ಬದಲಾಗಿದೆ. ಈಗೀಗ ಸಾಕಷ್ಟು ಪತ್ರಿಕೆಗಳು ಬರುತ್ತಿವೆ. ಜಿಲ್ಲಾ, ತಾಲ್ಲೂಕು ಕೇಂದ್ರಗಳಲ್ಲಿ ೨೦ ಕ್ಕೂ ಹೆಚ್ಚು ದಿನಪತ್ರಿಕೆಗಳು ಬರುತ್ತಿವೆ. ವರ್ಷಕ್ಕೆ ಕನ್ನಡದಲ್ಲಿ ೭೦೦೦ ರಕ್ಕೂ ಹೆಚ್ಚು ಪುಸ್ತಕಗಳು ಪ್ರಕಟವಾಗುತ್ತಿವೆ. ಓದುಗರ ಸಂಖ್ಯೆ ಹೆಚ್ಚಾಗಿದೆ. ಓದುವ ವಿಧಾನ ಮಾತ್ರ ಬದಲಾಗಿದೆ. ಆಮ್‌ಆದ್ಮಿ ಅನ್ನುವ ರಾಜಕೀಯ ಪಕ್ಷ ಸೋಷಿಯಲ್ ಮೀಡಿಯಾದ ಮೂಲಕ ಅಧಿಕಾರಕ್ಕೆ ಬಂದಿದೆ. ಭಾಷೆ ಯಾವಾಗಲೂ ವಿನಾಶವಾಗುವುದಿಲ್ಲ. ಈಗ ಸಾಮಾಜಿಕ ಜಾಲತಾಣಗಳಿಂದ ಪ್ರತಿಯೊಬ್ಬ ಬರಹಗಾರ ಒಂದು ರೀತಿಯಲ್ಲಿ ಪತ್ರಕರ್ತ, ಸಂಪಾದಕ, ಫೋಟೋಗ್ರಾಫರ್ ಎಲ್ಲವೂ ಆಗಿದ್ದಾನೆ. ಇವು ಅಭಿವ್ಯಕ್ತಿಯ ಬೇರೆ ಬೇರೆ ಫಾರ್ಮುಗಳು.

**ಹೊಸತು :** ಈ ಎಡ-ಬಲ-ಮಧ್ಯಮವಾದಗಳ ಬಗ್ಗೆ ನಿಮ್ಮ ಸ್ಪಷ್ಟ ನಿಲುವೇನು?

**ಚಂಪಾ :** ಈ ಎಡ-ಬಲ ಇವು ರಾಜಕೀಯ ಪರಿಕಲ್ಪನೆಗಳು. ಯಾರಿಗೆ ಕ್ರಾಂತಿ, ಪರಿವರ್ತನೆ, ಸುಧಾರಣೆ ಬೇಕೋ, ಅವರಿಗೆ ಎಡಪಂಥೀಯರು ಅಂತೀವಿ. ಯಾರಿಗೆ ಸಾಕಪ್ಪ, ಇದ್ದಷ್ಟ ಇರಲಿ, ಹಳೇದ ಇರ್ಲಿ, ಬದಲಾವಣೆ ಬೇಡ ಅಂತಾರ, ಅಂಥವರ್‍ನ ಬಲಪಂಥೀಯರು ಅಂತೀವಿ. ಎಡ-ಬಲ ಅನ್ನುವು ಎರಡು ದೃಷ್ಟಿಕೋನಗಳು (ಲೆಫ್ಟಿಸ್ಟ್-ರೈಟಿಸ್ಟ್; ಲೆಫ್ಟ್ ವಿಂಗ್-ರೈಟ್ ವಿಂಗ್). ಇನ್ನು, 'ಮಧ್ಯಮ ಮಾರ್ಗ' ಅನ್ನೋದು ಏನೈತಲ್ಲ, ಅದನ್ನ ಕೆಲವರು ಬುದ್ಧನ ಮಧ್ಯಮ ಮಾರ್ಗಕ್ಕ ಹೋಲಿಸಿ ಅದಕ್ಕ ಏನೋ ವಿಶೇಷ ಅರ್ಥ ಕೊಡ್ತಿದ್ದಾರೆ. ಒಬ್ಬ ಮನುಷ್ಯ ಒಂದು ವಾಸ್ತವದ ಮಧ್ಯದೊಳಗ ನಿಂತುಕೊಂಡಾಗ ಆ ನೆಲೆಯಿಂದ ನಾವು ಸುತ್ತಲೂ ನೋಡಿದಾಗ ಒಂದು ನಿಲುವು ತಳೀಬೇಕಲ್ಲ, ನಾನು ಆ ಕಡಿನೂ ಅದನಿ; ಈ ಕಡಿನೂ ಅದನಿ ಅಂದ್ರ ಅಲ್ಲ. ಸಾಮಾನ್ಯವಾಗಿ ಇಂಥವರನ್ನ ನಾವು ಎಡಬಿಡಂಗಿಗಳು, ಸಮನ್ವಯದವರು ಅಂತಾ ಗಂಭೀರ ಶಬ್ದ ಬಳಸ್ತೀವಿ. ಇಂಥವರನ್ನ ನಾವು ಸಮಯಸಾಧಕರು ಅನ್ನಬೇಕಾಕತಿ. ಹೆಂಗಾರೂ ಮಾಡಿ ಬದ್ಕದು. ರೋಡಿನಲ್ಲಿ ಹೋಗಬೇಕಾದ್ರ ನಾ ಎಡಕ್ಕೂ ಹೋಗಲ್ಲ, ಬಲಕ್ಕೂ ಹೋಗಲ್ಲ; ನಡುವ ಹೋಕನಿ ಅಂದ್ರ ಆಗಲ್ಲ. ಅಂಥವ ನೆಗದ್ ಬೀಳ್ತಾನ ಅಷ್ಟ. ಮನುಷ್ಯನಿಗೆ ಒಂದು ನಿಲುವು ಬೇಕು. ಲೆಫ್ಟ್ ಆರ್ ರೈಟ್, ಯಾವುದೇ ಇರಲಿ. ಈ ನಿಲುವು ಅನ್ನೋದು ನಿರಂತರ ಪರಿವರ್ತನೆಗೆ ಒಳಗಾಗಬೇಕು. ನಿಂತಲ್ಲೇ ನಿಂತು ನಾನು ಅದೇ ತ್ರಿಕಾಲ ಸತ್ಯವಂತ ಅಂತ ಕುಂತ್ರ ತಪ್ಪು ಅದು. ಅಂಥ ನಿಲುವು ಫೋರ್ಸ್‌ಗೆ ಒಳಪಡಿಸಿದರ ಅದ್ಕ 'ಬದ್ಧತೆ' ಎಂಬ ಅರ್ಥ ಬರ್ತತಿ.


ಗೌರಿ ಲಂಕೇಶ್ ಜೊತೆ ಚಂಪಾ

ಈ ಒಲವು ಮತ್ತು ನಿಲುವು ಅದಾವಲ್ಲ, ಇವು ಬ್ಯಾರೆ ಬ್ಯಾರೇನ. ನಿಲುವಿಗೆ ಖಚಿತತೆ ಇರ್ತತಿ. ಒಲವು ಐತಲ್ಲ ಅದು ಒಂದು ಕಡೆ ಬಾಗೋದು ಅಂತ. ಗಾಳಿ ಈ ಕಡೆ ಬಿಟ್ರ ಈ ಕಡೆ, ಗಾಳಿ ಆ ಕಡೆ ಬೀಸಿದ್ರ ಆ ಕಡೆ. ಗಾಳಿ ಬೀಸಿದಂಗ ಹೊಳ್ತಾವು ಅವು. ಜೋಳದ ನಿಲುವು ಇರ್ತಾವಲ್ಲ ಹಂಗ. ಅದು ಓಲವು ಆತು. ಈ ನಿಲುವು ಐತಲ್ಲ, ಅದು ನಿರಂತರವಾಗಿ ಪರಿವರ್ತನಶೀಲ ಆಗಿರ್ಬೇಕು.

ನಮ್ಮ ಕನ್ನಡದಾಗ ಎಲ್ಲಾ ನಮೂನಿನೂ ಅದಾರ. ಒಂದು ರೀತಿ ಕರ್ನಾಟಕದ ಬಹುತ್ವ ಅದು. ನಿರಂತರ ಸಂಘರ್ಷ, ಅನುಸಂಧಾನಾನೂ ಬೇಕು. ಪರಸ್ಪರ ಸಂವಾದ ಬೇಕು. ಸಂವಾದ ಸಾಧ್ಯ ಇಲ್ಲ ಅಂದ್ರ, ತಲೀ ಕಡಿತೀನಿ, ಕೈ ಕಡಿತೀನಿ, ನಾಲಿಗೆ ಸೀಳತೇನಿ ಅನ್ನೋ ಒಂದು ಹೊಸ ಪ್ರವೃತ್ತಿ ಬೆಳದೈತಲ್ಲ, ಇದ್ನ ಎಲ್ಲ ಪಂಥದವರೂ ಖಂಡಿಸಬೇಕು.

**ಹೊಸತು :** ಹೊಸ ಪೀಳಿಗೆಯು ಕೋಮುವಾದ, ರಾಜಕೀಯ ದಬ್ಬಾಳಿಕೆ ಇದಕ್ಕೆಲ್ಲ ಪೂರಕವೆಂಬಂತೆ ವರ್ತಿಸುತ್ತಿದ್ದಾರೆ. ಜನಪರ ಚಳುವಳಿಗಳಲ್ಲಿ ಆ ಪ್ರಮಾಣದಲ್ಲಿ ಭಾಗವಹಿಸುತ್ತಿಲ್ಲ ಎಂಬ ಮಾತಿದೆ. ಇದು ಸರಿಯೆ?

**ಚಂಪಾ :** ಇದರರ್ಥ ನಾವು ಸರಿಯಾಗಿ ಯುವ ಜನರನ್ನು ಸಿದ್ಧ ಮಾಡಿಲ್ಲವೆಂಬುದನ್ನು ತೋರಿಸುತ್ತದೆ. ನಾವು ನಮ್ಮ ಜವಾಬ್ದಾರಿಯನ್ನು ಮರೆತ್ತಿದ್ದೇವೆ. ಇಂದು ನಾವು ಅವರಿಗೆ ಹೇಳಿದರೆ, ನಾಳೆ ಅವರು ಮುಂದಿನವರಿಗೆ ಹೇಳುತ್ತಾರೆ. ಇದೇ ಪರಿವರ್ತನೆ. ಇದೇ ಕ್ರಾಂತಿ, ಇದೇ ಹೋರಾಟದ ಚಕ್ರ.

**ಹೊಸತು :** ನಿಮ್ಮ ಸರ್ವಾಧ್ಯಕ್ಷತೆಯಲ್ಲಿ ನಡೆಯು ತ್ತಿರುವ ೮೩ನೇ ಸಾಹಿತ್ಯ ಸಮ್ಮೇಳನ ಯಶಸ್ವಿ ಆಗಲಿ, ಕನ್ನಡ ನಾಡುನುಡಿಯ ಕುರಿತ ನಿಮ್ಮ ಆಶಯಗಳು ಈಡೇರಲಿ. ಹೊಸತು ಬಳಗದ ಪರವಾಗಿ ನಿಮಗೆ ಶುಭಾಶಯಗಳು.

**ವಿಜಯಕಾಂತ ಪಾಟೀಲ**
ನ್ಯಾಯವಾದಿ, ಹಾನಗಲ್ಲ - ೫೮೧ ೧೦೪

## ಅಭಿನಂದನೆ...

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಕೊಡಮಾಡುವ ೨೦೧೭ನೇ ಸಾಲಿನ 'ಪಂಪ ಪ್ರಶಸ್ತಿ'ಯು ಹಿರಿಯ ಸಾಹಿತಿ ಪ್ರೊ॥ ಕೆ. ಎಸ್. ನಿಸಾರ್ ಅಹಮದ್ ಅವರಿಗೆ ಹಾಗೂ 'ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ'ಯು ಶ್ರೀಮತಿ ಸ. ಉಷಾ ಅವರಿಗೆ ಲಭಿಸಿದೆ. ಇವರಿಬ್ಬರಿಗೂ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

# ಪುಂಡಿ ಪೂಜಾರಿಯಾದಾಗ




ಕೆಳಜಾತಿ ಅಥವಾ ಅವರ್ಣೀಯರು ಹಿಂದೂ ದೇವಾಲಯವನ್ನು ಪ್ರವೇಶಿಸುವುದಕ್ಕೆ ಇದ್ದ ನಿಷೇಧವನ್ನು ಟ್ರಾವಂಕೋರ್‌ನ ಮಹಾರಾಜ ಚಿತಿರಾ ತಿರುನಾಳ್ ಬಾಲರಾಮ ವರ್ಮ ಅವರು ೧೯೩೬ರಲ್ಲಿ ತೆಗೆದು ಹಾಕಿ ಸುಧಾರಣೆಯ ಗಾಳಿ ಬೀಸಿದರು. ಕೇರಳದ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. ಕೇರಳ ಸರ್ಕಾರವು ಈ ಮಹತ್ವದ ದಿನದ ಲಗನೆಯ ವಾರ್ಷಿಕೋತ್ಸವವನ್ನು ಆಚರಿಸುತ್ತಿರುವ ಇಂದಿನ ಸಂದರ್ಭದಲ್ಲಿ ಇತ್ತೀಚೆಗೆ ೩೬ ಮಂದಿ ಬ್ರಾಹ್ಮಣೇತರ ಅರ್ಚಕರನ್ನು ನೇಮಕ ಮಾಡಿಕೊಂಡಿದ್ದು, ಅದರಲ್ಲಿ ಆರು ಮಂದಿ ದಲಿತ ಪುರೋಹಿತರವ ರಾಗಿದ್ದಾರೆ. ಈ ಸುಧಾರಣೆಯ ಕ್ರಮವನ್ನು ಕರ್ನಾಟಕದ ಮುಖ್ಯ ಮಂತ್ರಿಯೂ ಸ್ವಾಗತಿಸಿ, ಅದನ್ನು ನಮ್ಮ ರಾಜ್ಯದಲ್ಲಿಯೂ ಕಾರ್ಯರೂಪಕ್ಕೆ ತರಬೇಕೆಂಬ ಹಂಬಲ ವ್ಯಕ್ತಪಡಿಸಿದ್ದಾರೆ. ೨೫ ವರ್ಷಗಳಿಗೂ ಹಿಂದೆಯೇ ತಮ್ಮ ಕತೆಗಾಗಿ ಇಂತಹ ಅಪರೂಪದ ಕಥಾವಸ್ತುವನ್ನು ಆಯ್ದುಕೊಂಡವರು ನಮ್ಮ ಹಿರಿಯ ಕನ್ನಡ ಲೇಖಕಿ ಗೀತಾ ನಾಗಭೂಷಣ ಅವರು. ಇಂದಿಗೆ ಸಕಾಲಿಕವೆನಿಸುವ ಅವರ 'ಪುಂಡಿ ಪೂಜಾರಿಯಾದಾಗ' ಕತೆಯನ್ನು ಇಲ್ಲಿ ಓದುಗರಿಗೆ ನೀಡುತ್ತಿದ್ದೇವೆ.

**ಗೀತಾ ನಾಗಭೂಷಣ**

ಶಿವಳ್ಳಿ ಅಂತ ಆ ಹಳ್ಳಿಯ ಹೆಸರು. ಆದರೆ ಹಳ್ಳಿಯಲ್ಲಾಗಲಿ, ಅದರ ಆಸುಪಾಸಿನ ಅಡಿವೆ, ಬೈಲು, ಕಣಿವೆಯಲ್ಲಾಗಲಿ, ಶಿವನ ಹರಕು–ಮುರುಕು ಗುಡಿಗುಂಡಾರವೂ ಇರಲಿಲ್ಲ. ಶಿವನದೂ ಇಲ್ಲ, ಅವನ ಲಿಂಗದ್ದೂ ಇಲ್ಲ. ಯಾಕೆ ಆ ಹಳ್ಳಿಗೆ ಶಿವಳ್ಳಿ ಅಂತ ಹೆಸರು ಬಂತೂ ಅನ್ನೋದು ಅಲ್ಲಿರುವ ಯಾರಿಗೂ ಗೊತ್ತಿಲ್ಲ.

ಅಲ್ಲಿರುವವರೆಂದರೆ ಬಹಳ ಜನರೇನೂ ಅಲ್ಲ. ಬರೀ ದೋನಸೆ ಗುಡಿಸಲುಗಳಿದ್ದ ಮೂಲ ಹಳ್ಳಿ ಈಗ ತನ್ನ ಕೈಕಾಲು ಚಾಚಿದೆ. ಊರು, ಹೊಲಗೇರಿ ಅಂತ ಎರಡೇ ಹಿಸ್ಸೆಗಳಿದ್ದುವು ಮೊದಲು. ಈಗ ಜನತಾ ಮನೆಗಳು ಅಂತ ಗೋರಮೆಂಟಿನವರು, ಹೊಲಗೇರಿ ದಾಟಿ ಆಚೆ ಬಯಲಿನಲ್ಲಿ ಸಾಲು ಮನೆ ಕಟ್ಟಿಸಿದ್ದಾರೆ. ಮಂದಿ ಬಂದು, ಶಾಂತಿಪೂಜೆ ಮಾಡಿಸಿಕೊಳ್ಳುವ ಮೊದಲೇ ಅವು ತೊಡೆಯ ಕಸುವಳಿದು, ಕಿಸಿದುಬಿದ್ದು ಅರ್ಧಮರ್ದ ಸೀಳಿ, ಗೋಡೆ ಬಿದ್ದು, ಬಾಗಿಲು ಮುರಿದು, ಹಳ್ಳಿಯ ಹತ್ತು ಹದಿನೆಂಟು ಹಲ್ಕಟ್ ದಂಧೆಗಳ ಆಸರೆದಾಣಗಳಾಗಿವೆ.

ಹಗಲು ಕೆಲಸವಿಲ್ಲದ ಮೈಗಳ್ಳರಿಗೆ ಹುಲಿಕಟ್ಟಿಯಾಟ, ಚಕಾರ ಆಟ ಆದರೆ ರಾತ್ರಿ ಕಾಮನಾಟ, ಕುಡಿವಾಟ, ಜೂಜಾಟ, ಜಗಳಾಟಗಳೆಲ್ಲ ಅಲ್ಲಿ ಬೇಕಾಬಿಟ್ಟಿಯಾಗಿ, ನಿರಾತಂಕವಾಗಿ ನಡೆಯುತ್ತವೆ. ಹೇಳಿಕೇಳಿ ಸರಕಾರ ಕಟ್ಟಿಸಿದ ಜನತಾ ಮನೆಗಳು, ಇನ್ನೂ ಬಡವರಿಗೆ ಅಲಾಟ್ ಆಗಿರಲಿಲ್ಲ. ಅಂದ ಮೇಲೆ ಹಳ್ಳಿಯ ಜನರ ಉಪಯೋಗಕ್ಕೆ ಯಾವ ಅಡ್ಡಿಆತಂಕಗಳೂ ಇರಲಿಲ್ಲ.

ಹೀಗಾಗಿ ಮೊದಲು ಹಳ್ಳಿಯ ಕೊನೆಯಲ್ಲಿದ್ದ ಹೊಲಗೇರಿ ಈಗ ಹಳ್ಳಿಯ ನಡುಗೇರಿಯಾಗಿ ನಿಂತಿದೆ. ನೂರಕ್ಕೆ ಹತ್ತಿರ, ಹೊಲೆಯರ ಗುಡಿಸಲು ಗಳಿವೆ ಅಲ್ಲಿ. ಸೇಂದಿ ಪೊರಕೆಯ, ಸೇಂದಿ ಬಚ್ಚಿನ ಝೋಪಡಿಗಳು. ಹೊಲಗೇರಿಯಂಥ ಕೇರಿಯಲ್ಲಿ ಹಗಲು ಹೊತ್ತು ದೀವಟಿಗೆ ಉರಿಸಿಕೊಂಡು ಹುಡುಕಿದರೂ ಸಹ ಒಂದೂ ಗಚ್ಚಿನ ಮನೆ, ಹೋಗಲಿ ಅರೆಚಪ್ಪರದ ಮನೆ ಬೇಡ, ಟಿನ್ ಛಾವಣಿಯ ಮನೆಯೂ ಸಿಗುವುದಿಲ್ಲ. ಅರೆ ಬರೆ ಉಪವಾಸ, ಅರೆಬೆತ್ತಲೆ ಮೈಯ ಈ ಮಂದಿಗೆ, ಅಂದಿಗೂ ಇಂದಿಗೂ ಒಂದೇ ರೀತಿಯ ಮನೆಗಳು ಅಂದರೆ ಝೋಪಡಿಗಳು.

ಹಾಂ... ಹಳ್ಳಿಯ ಮ್ಯಾಗೇರಿಗೆ ಹೋದರೆ ಮಾತ್ರ ಬೇಕಾದಷ್ಟು ಗಚ್ಚಿನ ಮನೆಗಳು ಸಿಗುತ್ತವೆ. ಎಲ್ಲವೂ ಅವೇ ಅಥವಾ ಅದರಂಥವೇ. ಆ ಮ್ಯಾಲಿನ ಗಲ್ಲಿಯ ಮಂದಿಯ ರೀತಿ ರಿವಾಜುಗಳೇ ಬೇರೆ, ಇರಸರಿಕೆಯೇ ಬೇರೆ, ಗರ್ದಿ ಗಮ್ಮತ್ತುಗಳೇ ಬೇರೆ. ಕಳ್ಳು ತುಂಬಿದರೆ ತಾನೆ ಮಳ್ಳಾಟ? ಪಾಪ... ಕೆಳಗೇರಿಯ ಹೊಲ ಮಾದಿಗ, ಕಾಟಕ ಕಬ್ಬಲಿಗ, ಕುರುಬ, ಕುಂಬಾರ ಅಂತ ಹಲವು ಹದಿನೆಂಟು ಜಾತಿಯ ಜನರ ಕಳ್ಳು ತುಂಬುವುದಂತೂ ದೂರ, ಯಾವಾಗಲೂ ಖಾಲಿಯೇ. ವರ್ಷಕ್ಕೊಮ್ಮೆ ನಡೆಯುವ ಮರಗವ್ವನ ಜಾತ್ರೆಯಲ್ಲಿಯೇ ಅವರು ಹೊಟ್ಟೆ ತುಂಬ ಉಣ್ಣುವುದು. ಅದೂ ದನ, ಕುರಿ, ಕೋಳಿಗಳ ಖಂಡದೂಟ.

ಹೌದು. ಶಿವಳ್ಳಿಯಲ್ಲಿ ಹೊಲಗೇರಿಯ ಅಂಚಿಗೆ ದೆವ್ವದಂಥ ದೊಡ್ಡ ಬೇವಿನಮರದಡಿಯಲ್ಲಿ ಮರಗವ್ವನ ಗುಡಿಯಿದೆ. ಗುಡಿಯೆಂದರೆ ನಾಲ್ಕು ಉದ್ದನೆಯ ಕರಿಕಲ್ಲು ನೆಲದಲ್ಲಿ ಹೂಳಿ, ಮೇಲೆರಡು ಅಂಥವೇ ಫರಸಿ ಹಾಕಿ ನೆರಳು ಮಾಡಿ ಸುಣ್ಣ ಸವರಿದ ಗುಡಿ. ಒಳಗೆ ಹಿಂದೆ ಮರಗವ್ವ ದೇವಿಯ ದೊಡ್ಡ ಕಟ್ಟಿಗೆಯ ಗೊಂಬೆ. ಕಣ್ಣು, ಮೂಗು, ಬಾಯಿ ಇದ್ದಲ್ಲೆಲ್ಲ ಬರಿ ಕೆತ್ತನೆಯ ಗುರುತುಗಳು, ಅವೂ ಈಗ ದಿನಾಗಲೂ ಎಣ್ಣೆ ಹಚ್ಚಿ ತೊಳೆದು ಅರಿಶಿಣ ಕುಂಕುಮ ಬಳಿದೂ, ಬಳಿದೂ ಕರ್ರಗೆ ಜಿಡ್ಡುಗಟ್ಟಿವೆ. ಅದಕ್ಕೊಂದು ಎರಡು ಮೊಳದ ಸೀರೆ, ಅದರ ಮುಂದೆ ಅಂಥವೇ ಐದು ಸಣ್ಣಸಣ್ಣ ಕಟ್ಟಿಗೆಯ ಗೊಂಬೆಗಳು, ಮಾರೆವ್ವನ ಮಕ್ಕಳವು. ಅವಕ್ಕೆ ಅಂಗಿ ಚಡ್ಡಿಗಳಿಲ್ಲ, ಬರಿ ಬೆತ್ತಲೆಯ ಪಾಪದ ಮಕ್ಕಳು.

ಶಿವಳ್ಳಿಯ ಮ್ಯಾಗೇರಿಯಲ್ಲಿ ದೊಡ್ಡದಾದ ಮಹಾಲಕ್ಷ್ಮಿಯ ಮಂದಿರ ಒಂದಿದೆ. ಯಾವ ಕಾಲದಲ್ಲಿಯೋ, ಯಾವ ರಾಯನೋ ಅಥವಾ ಯಾವ ರಾಣಿಯೋ ಕಟ್ಟಿಸಿದ ಹದಿನೆಂಟು ಕರಿಕಂಬಗಳ ಮಜಬೂತಾದ ಗರ್ಭಗುಡಿ, ಮುಂದೊಂದು ವಿಶಾಲ ಪಡಶಾಲೆ. ಮುಂದೆ ಬಹುದೊಡ್ಡ ಬಯಲಿನ ಸುತ್ತ ಕಲ್ಲುಗೋಡೆಯ ಕಾಂಪೌಂಡು. ಒಳಗಿನ ಮಹಾಲಕ್ಷ್ಮಿಯ ಮೂರ್ತಿಯಂತೂ ತನ್ನನ್ನು ಕಡೆದವನ ಕೈಯ ಕಲೆಯ ನಾಜೂಕತೆಗೆ ಸಾಕ್ಷಿಯಾಗಿ ನಿಂತಿದೆ. ಮಹಾಲಕ್ಷ್ಮಿ ಅಂದರೆ ಕೇಳಬೇಕೆ? ದಿನವೂ ಅವಳಿಗೆ ಬಣ್ಣ ಬಣ್ಣಗಳ ರೇಷ್ಮೆಯ, ಜರತಾರಿಯ ಸೀರೆ ಕುಪ್ಪಸಗಳ ಅಲಂಕಾರ, ಮಲ್ಲಿಗೆ ಗುಲಾಬಿಗಳ ದಂಡೆಗಳು, ಬಂಗಾರದೊಡವೆಗಳ ಸಿಂಗಾರ.

ಶಿವಳ್ಳಿಯ ಮಹಾಲಕ್ಷ್ಮಿ ಅಂದ್ರೆ ಬಲು ಜಾಗೃತ ದೇವತೆ ಅಂಬೋಸುದ್ದಿ. ಅದು ಹೇಗೋ ಏನೋ ಸೊಲ್ಲಾಪುರ, ಪುಣೆ, ಬೊಂಬಾಯಿ, ಹೈದರಾಬಾದು ಅಂತ ಆಸುಪಾಸಿನ ಎಲ್ಲ ಊರು ಪಟ್ಟಣಗಳ ಕಡೆಗೆ ಹರಡಿತ್ತು. ದೂರ ದೂರದಿಂದ ಜಾತ್ರೆಗೆ ಸಿರಿವಂತರು ಬರುತ್ತಿದ್ದರು. ಧನ, ಕನಕಗಳನ್ನರ್ಪಿಸಿ ಹೋಗುತ್ತಿದ್ದರು. ಅದೆಲ್ಲ, ಮ್ಯಾಗೇರಿಯ ಬಾಂಬ್ರ ಮುಖಂಡ ಶ್ರೀಪತಿರಾಯನ ಮಲಗು ಮನೆಯ ಮಂಚದ ಕೆಳಗಿನ ಕಬ್ಬಿಣದ ತಿಜೋರಿಯಲ್ಲಿದ್ದರೂ, ದೇವಿಯ ದಿನನಿತ್ಯದ ಒಡವೆಗಳು, ಸೀರೆಗಳೆಲ್ಲ ಪೂಜಾರಿ ಸೀನಪ್ಪಾಚಾರಿಯ ಸುಪರ್ದಿನಲ್ಲಿಯೇ ಇದ್ದುವು. ಹಬ್ಬ ಹುಣ್ಣಿಮೆಗಳಲ್ಲಿ ಒಮ್ಮೊಮ್ಮೆ ದೇವಿಯ ಕುತ್ತಿಗೆಯ ಒಡವೆಗಳಲ್ಲಿ ಒಂದೋ ಎರಡೋ ಆಚಾರಿಯ ಹೆಂಡತಿ ವೆಂಕಮ್ಮನ ಕುತ್ತಿಗೆಯಲ್ಲಿಯೂ ಕಾಣಿಸುತ್ತವೆ ಎಂಬುದು ಅದೇ ಗಲ್ಲಿಯ ಕೆಲ ಹೆಂಗಸರು ಹೊಟ್ಟೆಕಿಚ್ಚಿನಿಂದಲೋ, ಖರೆವೋ ಆಡಿಕೊಳ್ಳುವ ಚಿಲ್ಲರೆ ಗುಸುಗುಸು ಮಾತುಗಳಿಗೆ ದೊಡ್ಡ ಗಂಡಸರ್ಯಾರೂ ಕಿವಿಗೊಟ್ಟಿರಲಿಲ್ಲ.

ಅಂತೂ ಶಿವಳ್ಳಿಯಲ್ಲಿ ಒಂದು ವರ್ಷದಲ್ಲಿ ಎರಡೆರಡು ಹೆಣ್ಣು ದೇವತೆಗಳ ಜಾತ್ರೆಗಳಾಗುತ್ತಿದ್ದುವು. ಹೀಗಾಗಿ ಆ ಹಳ್ಳಿಯ ಮೇಲೆ ಜೋಡಿ ಹೆಣ್ಣಿನ ಬಿಗಿತ ಬಲವಾಗಿದ್ದುದರಿಂದಲೋ ಏನೋ ಗಂಡು ದೇವತೆಗಳು ಯಾರಿಗೂ, ಯಾವ ಕಾಟವೂ ಕೊಡದೆ ತೆಪ್ಪಗಿದ್ದುವು.

ಗುರುಪಾದಪ್ಪ ಸಾವ್ಕಾರ ಅಂದ್ರೆ ಶಿವಳ್ಳಿಯ ಮ್ಯಾಗೇರಿಯಲ್ಲಿಯೇ ದೊಡ್ಡ ಆಸಾಮಿ. ದೋಣಸೆ ಕೂರಗಿ ಜಮೀನಿನ, ಎಂಟೆತ್ತಿನ ಒಕ್ಕಲುತನವಿರುವ ಸಾವ್ಕಾರ. ಈಗ ವಯಸ್ಸು ಮುಕ್ಕಾಲು ಮುಗಿದು, ಮೀಸೆಗೂದಲೆಲ್ಲ ಸುಣ್ಣ ಸವರಿದಂತೆ ಬೆಳ್ಳಗಾಗಿ, ತಲೆ ತಾಮ್ರದ ತಂಬಿಗೆಯಾಗಿ, ಕೈಕಾಲುಗಳಲ್ಲಿಯ ಕಸುವು ಇಳಿದು, ಕಣ್ಣು ಗಲ್ಲಗಳೆಲ್ಲ ಒಳನಟ್ಟು ಹೋದರೂ ಅವನ ಹಿಂದಿನ ಸಾವ್ಕಾರಿಕೆಯ ಗತ್ತುಗಾರಿಕೆ ಹೋಗಿಲ್ಲ. ಹಣ+ಹರೆಯ ಇದ್ದಾಗಿನ ಮಾತೇ ಬೇರೆಯಿತ್ತು. ಬಡವರ ಕರಿ ಮಣ್ಣಿನ ಎರೆ ಹೊಲಗಳೆಲ್ಲ ಈ ಸಾವ್ಕಾರನ ಕಾಲ ಕೆಳಗೇ. ಅವರ ಮಜಬೂತಾದ ಮೈಕಟ್ಟಿನ ಚೆಂದದ ಹೆಣ್ಣುಗಳೆಲ್ಲ ಇವನ ಟೊಂಕದ ಕೆಳಗೆ. ಪಾಪ, ಇವಿಷ್ಟೇ ಇವನ ಅವಗುಣ, ಉಳಿದದ್ದರಲ್ಲಿ ಗುರುಪಾದಪ್ಪ ಸಾವ್ಕಾರ ಒಳ್ಳೆಯವನೇ.

ಹೊಲೆಯರ ಮಲ್ಲಣ್ಣ ಈ ಸಾವ್ಕಾರನ ಮನೆಯಲ್ಲಿಯ ಹಳೆಯ ಜೀತದಾಳು. ನಂಬಿಕಸ್ಥ. ಇವನಿಗೂ ಸಾವ್ಕಾರನದೇ ವಯಸ್ಸು, ಸಾವ್ಕಾರನ ಮಗ ಈಸೂರ ಬೆಳೆದದ್ದು ಮಲ್ಲಣ್ಣನ ತೊಡೆ ತೋಳುಗಳಲ್ಲಿಯೇ. ಮಕ್ಕಳಿಲ್ಲದ ಮಲ್ಲಣ್ಣನಿಗೆ ಮಾಲಿಕನ ಮಗನೇ ಸರ್ವಸ್ವ.

“ಮಲ್ಲನ್ನಾ... ಆ ಕಬ್ಬ ಕಿತ್ತಿ ಕುಡೋ...”

ಎನ್ನುತ್ತ ಮೂರು ವರ್ಷದ ಈಸೂರ ಹೊಲದಲ್ಲಿ ನಡೆದು ಬಂದಾಗ ಮಲ್ಲಣ್ಣನ ಎದೆಯಲ್ಲೆಲ್ಲ ಕಸವಿಸಿ.

“ಅಲ್ಲೇ ನಿಂದ್ರೂ ಮಗಾ... ನಡ್ಕೊಂಡು ಬರಬ್ಯಾಡ... ನಿನ್ನ ಹುವ್ವಿನ್ಹಂಥಾ ಅಂಗಾಲಿಗಿ ಕೆಸರ ಹತ್ತಾದೋ ಕೂಸು...” ಎನ್ನುತ್ತ ಇದ್ದಲ್ಲಿಂದ ಓಡಿ ಬಂದು ಈಸೂರನನ್ನು ಅನಾಮತ್ತಾಗಿ ಎತ್ತಿ ಕೊಂಡೊಯ್ದು ತನ್ನ ಕಂಬಳಿಯ ಮೇಲೆ ಕೂಡಿಸಿ, ಕಾಲಿನ ಮಣ್ಣು ತೊಳೆದು ತನ್ನ ಧೋತರ ಕೊನೆಯಿಂದ ಒರೆಸಿದಾಗಲೇ ಅವನಿಗೆ ಸಮಾಧಾನ. ಮಲ್ಲಣ್ಣ ಕಬ್ಬು ತಂದು ಕೊಟ್ಟಾಗ ಈಸೂರನ ಎಂದಿನ ಅಪ್ಪಣೆ.

“ಸುಲಿದು ಕುಡು ಮಲ್ಲನ್ನಾ ...”

“ಅಯ್ಯೋ ನನ್ನಪ್ಪಾ ... ನನ್ನೆಂಜಲಾಗಾದಲ್ಲೋ ಕೂಸು...”

“ಅದರೇನು... ನಾ ತಿಂತೀನಿ... ಸುಲ್ದು ಕುಡೋ...”

“ನಾವು ಹೊಲೇರು ಈಸೂರ.... ನನ್ನೆಂಜ್ಲು ನೀ ತಿನ್‌ಬಾರ್ದು ಮಗಾ...” “ಉಹೂಂ... ಅದೆಲ್ಲಾ ನನಗ್ಗೊತ್ತಿಲ್ಲ... ನೀ ಸುಲ್ದು ಕುಡಲಿಲ್ಲಂದ್ರ ತಿನ್ನಂಗೇ ಇಲ್ಲ... ಊಂ...” ಎನ್ನುತ್ತ ಈಸೂರ ಅಳತೊಡಗಿದರೆ ಮಲ್ಲಣ್ಣನ ಹೊಟ್ಟೆಯಲ್ಲಿ ಚಾಕು ಚೂರಿಗಳ ಚೆಲ್ಲಾಟ, ಮೇಲೆ ಕೆಳಗೆ ಅತ್ತ, ಇತ್ತ, ಸುತ್ತಮುತ್ತ ನೋಡಿ, ತೋಟದಲ್ಲಿ ಹತ್ತಿರ ಯಾರೂ ಇಲ್ಲದ್ದನ್ನು ಖಾತ್ರಿಪಡಿಸಿಕೊಂಡು, ಕಬ್ಬು ಸುಲಿದು, ಧೋತರದಿಂದ ಮತ್ತೆ ಮತ್ತೆ ಅದನ್ನು ಒರೆಸಿ ಒರೆಸಿ ಮಗುವಿಗೆ ತಿನ್ನಿಸುವುದೂ ಇದೆ. ಆದರೆ ಇದೆಲ್ಲ ಕದ್ದು ಮುಚ್ಚಿ. ಕಳವಿನ ಸುಳಿವಿನ ಗಂಟು ಯಾರ ಮುಂದೂ ಬಿಚ್ಚಬಾರದು ಅನ್ನೋ ಒಪ್ಪಂದ ಇಬ್ಬರ ನಡುವೆ.

ಅಂತೂ ಇಂತೂ ಹೀಗೆಯೇ ದಿನಗಳು ಹುಟ್ಟಿ,

## ನಿರ್ಧಾರ

ನಮಗೆ ಸಾವುಂಟು
ಪ್ರೀತಿಗಿಲ್ಲ
ಹಾಗಾದರೆ
ಇರುವೆ
ನಾನು
ಸಾಯದ
ಪ್ರೀತಿಯೊಂದಿಗೆ

ಕೆ. ನಿರ್ಮಲ ಮರಡಿಹಳ್ಳಿ
ಚಿತ್ರದುರ್ಗ– ೫೭೭ ೫೦೧

ಹುಟ್ಟಿ ಸಾಯತೊಡಗಿದ್ದುವು. ತಿಂಗಳು, ವರುಷಗಳೂ ನರಳುತ್ತ ಅಸುನೀಗಿದ್ದುವು. ಬೀಜಗಳು ಮೊಳೆತು ಮೊಳಕೆಗಳು ಮರವಾಗಿ, ಮರ ಮುದಿಯಾಗುತ್ತಿದ್ದುವು. ಅಂತೆಯೇ ಮಲ್ಲಣ್ಣ, ಗುರುಪಾದಪ್ಪ ಸಾವ್ಕಾರನೂ ಅವರಿಗರಿವಿಲ್ಲದಂತೆಯೇ ಹರೆಯ ಕಳೆದುಕೊಂಡು ಮುಪ್ಪಿನ ಕಮರಿಯಲ್ಲಿ ಮುಗ್ಗರಿಸಿ ಬಿದ್ದರು. ಈಸೂರನೂ ಹಸಿ ಹರೆಯದ, ಬಿಸಿ ನೆತ್ತರಿನ, ಗಡುಸಾದ ಗಂಡಸಾಗಿ ನಿಂತು ಕಲಬುರಗಿ ಜಿಲ್ಲೆಯ ಕಲೆಕ್ಟರನಾಗಿ ಬಂದಿದ್ದ. ಒಂದೆರಡು ಸಲ ಶಿವಳ್ಳಿಗೂ ಬಂದಿದ್ದ. ಬಂದಿದ್ದಾಗ ಅವನು ಮೊದಲು ಮಾತಾಡಿಸಿ, ಅಪ್ಪಿಕೊಂಡದ್ದು ಮಾತ್ರ ಮಲ್ಲಣ್ಣನನ್ನೇ. ಸ್ವಚ್ಛ ಮನಸ್ಸಿನ, ಅಚ್ಚುಮೆಚ್ಚಿನ ಮುಖದ ಈಸೂರನ ಅಪ್ಪುಗೆಯಲ್ಲಿ ಭೋಲಾಭಾಲಾ ಮಲ್ಲಣ್ಣ ಖುಷಿಯಿಂದ ಗೊಳೋ ಎಂದು ಅತ್ತುಬಿಟ್ಟಿದ್ದ.

ಮಲ್ಲಣ್ಣ ಮೊದಲಿನಿಂದ ಮರಗವ್ವನ ಗುಡಿಯ ಪೂಜಾರಿಯಾಗಿದ್ದವನು. ತನಗಿದ್ದ ಅಂಗೈ ಅಗಲದ ಹೊಲವನ್ನೂ ಸಾವ್ಕಾರನಿಗೇ ಮಾರಿ, ಬಂದ ದುಡ್ಡಿನಲ್ಲಿ ಮದುವೆಯಾಗಿ, ನೆರೆ ಹಳ್ಳಿಯ ನಿಂಗಿಯನ್ನು ತಂದು ಸಂಸಾರ ಹೂಡಿದ್ದ. ದಿಕ್ಕುದೆಸೆಯಿಲ್ಲದ ನಿಂಗಿ ಬಲು ಮೆಹನತ್ತಿನ ಹೆಣ್ಣು, ದಣಿವೇ ಗೊತ್ತಿಲ್ಲದ ದುಡಿತ ಅವಳದು. ಹೊಲಮನೆ, ಕೂಲಿನಾಲಿ ಅಂತ ಬಿಡುವಿಲ್ಲದಂತೆ ದುಡಿಯುವ ಹೆಣ್ಣು. ಮಲ್ಲಣ್ಣನ ನಸೀಬು ದೊಡ್ಡದು ಎಂದರು ಗಲ್ಲಿಯ ಮಂದಿ. ಮಲ್ಲಣ್ಣನೇನೂ ಕಡಿಮೆಯಾಗಿರಲಿಲ್ಲ. ಕಟಿ ಕಟಿ ರೊಟ್ಟಿ ಕಾರದ ಪುಡಿ ತಿಂದೇ ಅವನು ಪೈಲ್ವಾನನಂತೆ ಬೆಳೆದಿದ್ದ. ಮೈ ಒರಟಾದರೂ ಮನಸ್ಸು ಮೆತ್ತಗೆ. ದೇಹ ಅಮವಾಸ್ಯೆಯಂತೆ ಕಪ್ಪಾದರೂ ಹೃದಯ ಹುಣ್ಣಿಮೆಯಂತೆ. ಕಡುಗಪ್ಪಿನ ದುಂಡುಮುಖದ, ಬಿಳುಪು ಗುಳುವ ಬಟ್ಟಲುಗಣ್ಣಿನ ನಿಂಗಿಗೂ ಇವನಿಗೂ, ನೆದರು ತಾಕುವ ಜೋಡಿ.

ರಸಿಕತೆ ಹೊಲೆಯ, ಹಾರುವ ಅಂತ ಜಾತಿ ಕುಲ ನೋಡುತ್ತದೆಯೆ? ಮಲ್ಲಣ್ಣ ಬಲು ರಸಿಕ. ಹಗಲೆಲ್ಲ ಸಾವ್ಕಾರನ ತೋಟ, ಹೊಲಗಳಲ್ಲಿ ಮೈ ಮುರಿದು ದುಡಿದು ಬಂದ ಅವರಿಗೆ ರಾತ್ರಿಯೆಲ್ಲ ಕಣ್ಣುಗಳ ಮುಂದೆ ಕೈಲಾಸವೇ, ಪೊರಕೆಯ ಸಣ್ಣ ಗುಡಿಸಲು ತುಂಬ ಸುಖ ಸೊಕ್ಕಿ ಉಕ್ಕುತ್ತಿತ್ತು.

ಆಕಾಶೆಂಬೋ ಆಕಾಶ, ಅದರ ಬೆಳದಿಂಗಳು, ಚುಕ್ಕಿ, ಚಂದ್ರಮರೆಲ್ಲ ಅವರ ಅಂಗೈಗಳಲ್ಲಿಯೇ ಹರಿದು ಬಿದ್ದು ಕುಲುಕುಲು ನಗುತ್ತಿದ್ದುವು.

ಹೀಗೆಯೇ ಸಮಯ ಸರಿಯಿತು. ಜೊತೆಗೆ ಅವರ ಹರೆಯ ಹಣ್ಣಾಗಲು ತೊಡಗಿದಾಗ ಆ ಗಂಡ ಹೆಂಡತಿಗೆ ಅನ್ನಿಸಿತು; ತಮಗಿನ್ನು ಮಕ್ಕಳಾಗೋದಿಲ್ಲ ಅಂತ. ನಿಂಗಿಯ ಹೊಕ್ಕಳ ನಡುವೆ ಕಚಕ್ಕನೆ ಮುಳ್ಳು ಮುರಿದಂತಾಗಿ ಕಣ್ಣುಗಳಿಂದ ನೀರು ಸ್ವಾತಿ ಮಳೆಯ ಹನಿಯಂತೆ ಫಳ್ಳನೆ ಚಿಮ್ಮಿತು.

"ಬ್ಯಾಡ್ ನಿಂಗೀ... ನನ್ನರಗಿಣಿ... ನೀ ಕಣ್ಣಾಗ ನೀರ ಹಾಕ್ಬಾರ್ದು" ಎನ್ನುತ್ತ ಮಲ್ಲಣ್ಣ ತಟ್ಟನೆ ಅವಳ ಕಣ್ಣೀರಿಗೆ ತುಡಿಯಿಟ್ಟು ಗಟಗಟ ಕುಡಿದ.

ಸರಿ, ಮುಂದೆ ಅವರು ಮಕ್ಕಳ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಮರಗವ್ವನ ಗುಡಿಯ ಪೂಜಾರಿಯಾದವನು ಎಂದೂ ಆ ದೇವತೆಗೆ 'ಮಕ್ಕಳು ಕುಡು' ಎಂದು ಕೇಳಲಿಲ್ಲ.

ಇಂಥ ಹೊತ್ತಿನಲ್ಲಿಯೇ ಇವರಿಗೆ ಸಾವ್ಕಾರನ ಕಿರಿಯ ಮಗ ಈಸೂರ ಹತ್ತಿರದವನಾದದ್ದು. ಮಲ್ಲಣ್ಣ ನಿಂಗಿಯರ ನಡುವೆಯೇ ಅಂಬೆಗಾಲಿಕುತ್ತ ಓಡಾಡುತ್ತ, ತೊದಲು ನುಡಿಯತ್ತ ಈಸೂರ ದೊಡ್ಡವನಾಗಿದ್ದ. ಮುಂದೆ ಕಲಬುರಗಿಗೆ ಓದಲು ಹೋಗಿದ್ದ. ನಂತರ ಒಂದು ದಿನ, ಕಲಿತ ಜಿಲ್ಲೆಗೆ ಈಸೂರ ಕಲೆಕ್ಟರನಾಗಿ ಬಂದಿದ್ದ.

ಶಿವಳ್ಳಿ ಈಗ ಮೊದಲಿನಂತೆ ಮೊಗಲಾಯಿ ಆಗಿರಲಿಲ್ಲ. ಅದರ ಸೋಗು, ಧಿಮಾಕು ದುಮ್ಮಾನಗಳೆಲ್ಲ ಪೂರಾ ಬದಲಾಗಿದ್ದುವು. ಹಳ್ಳಿ ಹೊರಗಿದ್ದ ಹೊಲಗೇರಿ ಈಗ ನಡುಗೇರಿಯಾಗಿತ್ತು. ಈರಭದ್ರ ಲಿಂಗಾಯತ ಹೋಟೆಲಿನಲ್ಲಿ ಇವರಿಗಾಗಿ ಸ್ಪೆಷಲ್ಲಾದ ಅಂಚು, ಕಿವಿ ಹರಿದ ಬಸಿಗಳಿರಲಿಲ್ಲ. ಮ್ಯಾಗೇರಿಯ ಮಂದಿಯ ಹತ್ತಿರವೂ ಈಗ ಮೊದಲಿನ ಮಡಿಹುಡಿ ಉಳಿದಿರಲಿಲ್ಲ. ಸರ್ಕಾರದವರು ಈಗ

## ಅಸ್ತವ್ಯಸ್ತ....



ಈ ಸಂಜೆಗೆ,
ನಿಲ್ಲಲಾರದೆ ಸುಮ್ಮನೆ ಚಲಿಸುತ್ತವೆ ಪಾದಗಳು
ಸುಕ್ಕುಗಟ್ಟಿದ ಮುಖಗಳು ವಟಗುಟ್ಟುತ್ತಲೆ
ಆವಿಯಾಗುತ್ತವೆ
ಬೆರಳುಗಳು ಗಾಜು ಕಿಟಕಿಗೆ ಧೂಳು
ಒರೆಸುತ್ತವೆ
ಯಾರೋ ಬಾಗಿಲು ತಟ್ಟುತ್ತಿದ್ದಾರೆ ಬೀದಿಯಲ್ಲಿ,
ಎದೆಯದೋ ? ಮನೆ ಮುಂದಿನದೋ ?

ಜಿನ್ಸ್ ಪ್ಯಾಂಟಿಗೆ ತುಸು ಮಾತ್ರ ನೀಲಿ ಉಳಿದಿದೆ
ಕೆಂಪು ಹೊರ ಬರದೆ ನಿದ್ದೆಯೊಳಗಿದೆ
ಮೋಡಗಳು ಅಳುವುದೆ ಕಲಿತಿಲ್ಲ
ಅದಕ್ಕೆ ಈ ಗಿಡ ಹೂ ಬಿಟ್ಟಿಲ್ಲ !

ಈ ರಾತ್ರಿಗೆ,
ಪಾದಗಳು ತುಸುವೆ ಅಲುಗಾಡುತ್ತವೆ
ತಂಡಿಯಾದೀತೆಂದು
ಮಣ್ಣೋ ಅಥವಾ ಕೌದಿಯೋ
ಹೊದ್ದಿಕೊಳ್ಳುತ್ತವೆ

ಹುಳವೊಂದು ಬೀಡಿ ನೆಲದಿಂದಾಚೆ ಬಂದು
ಇನ್ನೊಂದು ಹುಳಕ್ಕೆ ಹುಡುಕಾಡುತ್ತಿದೆ !
ಅಸ್ಥಿಪಂಜರದಂತಹ ಮರವಿಗೆ
ಬುಡದಲ್ಲಿ ನರಳುವ ಕರ್ಕಿಗೆ ಕಣ್ಣೀರಿಟ್ಟಿದೆ

ಈ ಮುಂಜಾವಿನಲ್ಲಿ,
ನಿಶ್ಶಬ್ದ ಪಾದಗಳು ತಣ್ಣಗಾಗಿ
ಯಾವ ಗುರುತನೂ ಉಳಿಸಿಕೊಳ್ಳದೆ ಚರ್ಮ
ಸುಲಿದುಕೊಂಡಿವೆ...

ನಿಲ್ಲಲಾರದೆ ಸುಮ್ಮನೆ ಚಲಿಸುವ ಪಾದಗಳು
ಇನ್ನೊಬ್ಬರ ಪಾದದ ಹೆಗಲೇರಿವೆ !
ಇರುವೆವೊಂದು ಪಾದಕ್ಕಂಜಿ ದಾರಿ ಬಿಟ್ಟಿದೆ

**ಕಪಿಲ ಪಿ ಹುಮನಾಬಾದೆ**
ಕಾವ್ಯಮನೆ ಪ್ರಕಾಶನ, ಫ್ಲ್ಯಾಟ್ ನಂ. ೨೨೦, ಶಿವನಿಲಯ
ವೀರೇಂದ್ರ ಪಾಟೀಲ ಬಡಾವಣೆ, ಸೇಡಂ ರಸ್ತೆ, ಕಲಬುರಗಿ – ೫೮೫ ೧೦೫

ಹೊಲೆ ಮಾದಿಗರಿಗೆ, ಅಡವಿ ಸುತ್ತುವ ಕಾಡುಸಿದ್ಧ, ಕುರುಬ, ಲಂಬಾಣಿಗರಿಗೆಲ್ಲ ಬದುಕುವ ಭಾರಿ ಸೌಕರ್ಯಗಳನ್ನು ಒದಗಿಸಿಕೊಟ್ಟಿತ್ತು. ಸರಕಾರದ ಕಣ್ಣಿನಲ್ಲಿ ಹೊಲೆಯ ಹಾರುವರೆಲ್ಲ ಸರಿಸಮಾನರಾಗಿದ್ದರು. ಸರಕಾರದ ನೋಕರಿಗಳಲ್ಲಿ ಹೊಲೆ ಮಾದಿಗ, ಗೊಂಡ, ಸಿದ್ಧ, ಬೇಡರಿಗೆ ನೋಕರಿ ಕೊಟ್ಟು ಉಳಿದವು ಮೇಲಿನ ಮಂದಿಗೆ ಹಂಚುವ ಕಾನೂನು ಬಂದಿತ್ತು. ಮತ್ತೆಲ್ಲ ನೂರೆಂಟು ಏನೇನೋ; ಗೋರಮೆಂಟು ಕೆಳಜಾತಿಯ ಮಂದಿಗಾಗಿ ಮಾಡಿತ್ತು.

ಆ ದಿನ ಸಂಜೆ, ಹೊತ್ತು ತಾಯಿಹೊಟ್ಟೆಗೆ ಹೋಗುವ ಮುಂದೆಯೇ ಊರ ತುಂಬ ತಳವಾರ ಕುಂಟ, ಮಾದರ ಮಾಲ್ಯಾ ಕೂಡಿ ಹಲಗೆ ಬಾರಿಸುತ್ತ ಡಂಗುರ ಸಾರಿದರು.

ಢಮ್ಮು ಢಮ್ಮು... ಢಪ್ಪ... ಢಪ್ಪ...
ಕೇಳ್ರೆಪೋ ಕೇಳ್ರೀ... ಸಣ್ಣವ್ರು ದೊಡ್ಡವ್ರು
ಮುದುಕ್ರು, ಮಕ್ಳು, ಹರೆದವ್ರು, ಬಲಿತವ್ರು
ಎಲ್ಲೋರೂ ಕಿವಿಗೊಟ್ಟು, ಎಲ್ಲಾ ಮರ್ತು ಕೇಳ್ರೀ...
ನಾಳಿಗೆ ಹೇಳೀಲ್ಲಂದೀರಿ... ಕೇಳಿಲ್ಲಂದೀರಿ...
ಢಮ್ಮ ಢಮ್ಮ... ಢಪ್ಪ ಢಪ್ಪ...

ಶಿವಳ್ಳಿ ಮ್ಯಾಗೇರ್ಯಾಗಿನ ಮಾಲಗಸಿಮಿ ಗುಡಿಗಿ ಪೂಜಾರಿ, ಹುವ್ವಾತರ್ಲಕ, ಕಸ ಉಡಗಲಕ್ಕ, ಝಾಂಗಟೆ ಭಾರಸಲಕ್ಕಂತ ಗೋರಮೆಂಟಾಗ ಐದಾರು ನೋಕರಿಗೋಳು ಖಾಲಿ ಅವಾ ಅಂತ್ರೆಪಾ... ನೂರೆಂಟು ಜಾತಿ ಮಂದಿ, ಅವಕ್ಕ ಬೇಕಾದ್ರ ಅರ್ಜಿ ಹಾಕ್ಬೇಕಂತ್ರೆಪಾ...

ಹೊಲೇರು ಮಾದ್ರು ಹಿಡ್ಕೊಂಡು ಬಾಂಬ್ರು ಲಿಂಗಾಯ್ತ್ರು...
ಎಲ್ಲಾ ನೂರೆಂಟು ಕುಲದ ಮಂದೀನೂ ಬೇಕಾದ್ರ ಅರ್ಜಿ
ಹಾಕ್ಬೇಕಂತ ಕಲೆಕಟರ ಸಾಹೇಬ್ರು ಹುಕುಂ ಮಾಡ್ಯಾರಂತ್ರ ಪೊ...
ಢಮ್ಮು ಢಮ್ಮ... ಢಪ್ಪ ಢಪ್ಪ...
ಕೇಳ್ರೆಪೋ ಕೇಳ್ರೀ... ಕಿವಿಗೊಟ್ಟು, ಚಿತ್ತಗೊಟ್ಟು, ಕೇಳ್ರೀ...
ನಾಳಿಗೀ ಹೇಳೀಲ್ಲಂದೀರಿ... ಕೇಳಿಲ್ಲಂದೀರಿ...

ಕುಂಟ ಮತ್ತು ಮಾಲ್ಯಾರು ಹಿಂಗಂತ ಡಂಗೂರ ಸಾರುತ್ತ, ಹಲಗೆ ಬಾರಿಸುತ್ತ ಹಳ್ಳಿಯ ಗಲ್ಲಿಗಲ್ಲಿಗಳಲ್ಲಿ ನಡೆದರು. ಹಿಂದೆ ಗುಬು ಗುಬು ಅಂತ ಪೋರರ ಹಿಂಡು ಕೇಕೆ ಹಾಕುತ್ತ, ಚಪ್ಪಾಳೆ ತಟ್ಟುತ್ತ, ಕುಣಿಯುತ್ತ, ಹರಿದ ಚಡ್ಡಿಗಳಿಂದ ತಿಕಮುಚ್ಚಿಕೊಳ್ಳುತ್ತ, ಓಡುತ್ತ ಹೊರಟವು.

ಗಾಳಿ ಬೀಸಿದ ಬೆಂಕಿಜ್ವಾಲೆಗಳಂತೆ ಸುದ್ದಿ ಸರಸರನೆ; ಚಟಪಟನೆ ಉರಿಯುತ್ತ ಎಲ್ಲ ಕಡೆಗೆ ಫೈಲಾಯಿಸಿತು. ಹಾಂ ಹಾಂ ಅನ್ನೋದರಲ್ಲೇ ಅದು ಕಚ್ಚೆ ಕಳೆದುಕೊಂಡು, ಬಾಯಿಗೆ ಕೈ ಹಚ್ಚಿ ಲಬೋ ಲಬೋ ಎಂದು ಹೊಯ್ಕೊಳ್ಳುತ್ತ ಊರು ಹೊಲಗೇರಿ ಒಂದು ಮಾಡಿತು. ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಗಲ್ಲಿಯ ಸಂದಿಗೊಂದಿಗಳಲ್ಲೆಲ್ಲ ಬೇಕಾಬಿಟ್ಟಿಯಾಗಿ ಡಿಸ್ಕೊ ಕುಣಿಯುತ್ತ ಹಳ್ಳಿಯ ಹೆಣ್ಣು-ಗಂಡುಗಳ ಬಾಯಿಂದ ಮಾತುದುರಿಸಿತು.

"ಅಯ್ಯ ಕೇಳಿದಿರೇನ್ರೀ ಅನಸಕ್ಕಾ... ಇನ್ನಮ್ಯಾಲಾ ನಮ್ ಮಹಾಲಕ್ಷ್ಮಿ ಗುಡಿಯೊಳಗೂ ಶೂದ್ರ ಮುಂಡೇ ಮಕ್ಳು ಬರ್ತಾವೋ ಏನ್ ಮಣ್ಣೋ..."

ಬಾಂಬ್ರ ಗೋದಾವರಿಬಾಯಿಯ ಅಚ್ಚರಿಯ ದನಿ.

"ಹಂಗಿರ್ಲಿಕ್ಕಿಲ್ಲ ಬಿಡ್ರಿ ಮಾವಸೀ... ಈಗಿರೋ ಅರ್ಚಕರಿಗಿ, ಪಾರುಪತ್ಯಗಾರೀಗಿ ಎಲ್ಲಾ ಸರ್ಕಾರದ ಪಗಾರ ಕುಡ್ತಾರೋ ಏನೋ..."

"ಈಗ ಮತ್ತ ಗುಡಿ ಕಾರುಭಾರೆಲ್ಲಾ ಗೋರಮೆಂಟೇ ಮಾಡ್ತದೋ ಏನೋ... ಈ ಕಾನೂನು, ಮಣ್ಣು ಮನೆ, ಅಂತ ಸುಡ್ಲಿ... ನಮಗೊಂದೂ ತಿಳಿಯೂದಿಲ್ಲ ನೋಡು..."

ಮಹಾಲಕ್ಷ್ಮೀ ಗುಡಿ ಕಟ್ಟೆಯ ಮೇಲೆ ಕುಳಿತಿದ್ದ ಹಾರುವ ಗಂಡಸರದ್ದು ಬೇರೆಯೇ ಸಂಭಾಷಣೆಗಳು.

"ಹೂಂ... ಈಗ ಎಲ್ಲ ಕೆಲಸಗಳಿಗೂ ಸರ್ಕಾರ ತಾನೇ ಅಪಾಯಿಂಟ್‌ಮೆಂಟ್ ಮಾಡಿ ಆರ್ಡರು ಕುಡ್ತೆದೋ ಏನೋ... ಹೂಂ..."

ಪೂಜಾರಿ ಶೀನಪ್ಪಾಚಾರಿ ಝುರುಕಿ ಹೊಡೆದರು. ಕುಲಕರ್ಣಿ ದತ್ತಾರಾವ ಸಣ್ಣಗೆ ಕುಹಕ ರಾಗ ಎಳೆದ.

"ಅಲ್ಲ... ಮತ್ತ ಇದರೊಳಗೂ ರೋಸ್ಟರ್ ಅಂತ ಎಸ್ಸಿ, ಎಸ್.ಟಿ. ಮಂದಿಗೇ ಮೀಸಲಾತಿ ಅಂತ ಅಂದ್ರೆ ಮುಗಿದೇ ಹೋಯ್ತು."

"ಏಯ್... ಛೆ, ಛೆ... ಏನ್ ಮಾತಂತ ಆಡ್ತಿರ್ರೀ ನೀವು ಶೀನಪ್ಪಾ? ಆ ಹೊಲೆ ಸೂಳ್ಯಾ ಮಕ್ಳಿಗಿ ಅರ್ಚಕರ ಕೆಲ್ಸಾ ಕುಡ್ತಾರಂತಿರೇನು ನೀವು? ಹಿಂತಾ ಗುಮಾನಿ ಬ್ಯಾಡ ಮಾರಾಯ್ರೇ. ಸರಿಯಾಗಿ ನಮ್ಮ ದೇವತೆಯ ಹೆಸರು ಉಚ್ಚಾರ ಮಾಡ್ಲಿಕ್ಕಿ ಬರೊದಿಲ್ಲ ಆ ಹುಂಬನನ್ಮಕ್ಳಿಗಿ... ಮಹಾಲಕ್ಷ್ಮಿ ಅಂತ ಅವರ್‍ಯಾರರೇ ಸರಿಯಾಗಿ ಅನ್ಲಿ ಬೇಕಾದ್ರ... ನಾ ನಾಲಿಗಿ ಕೊಯ್ದು ಕುಡ್ತೀನಿ, ಏನಂತೀರಿ?

ಆಚಾರಿಯ ದನಿಯಲ್ಲಿ ಸಂಸ್ಕೃತ ಪಾಂಡಿತ್ಯದ ಅಮಲು. "ನಾ ಏನು ಅನ್ನೋದ್ರಿಂದೇನಾಗ್ತದಪ್ಪಾ ಆಚಾರಿ... ಈ ಕಲೆಕ್ಟರ್ ನನ್ಮಗಾ ಈಗಾಗಲೇ ಪೂಜೆಯ ಶ್ಲೋಕಗಳಿಗೆಲ್ಲಾ ಕನ್ನಡದಾಗ ತರ್ಜುಮೆ ಮಾಡ್ಸಿಟ್ಟೀ ಈ ಡಂಗೂರ ಸಾರಸ್ಯಾನಂತ, ಅಲ್ಲಲ್ಲಿ ಜನಾ ಅಂಬೋ ಮಾತು. ಅದ್ರೂ.... ಅವನೂ ಎಷ್ಟಾದ್ರೂ ಮೇಲಿನ ಜಾತಿಯವನೇ ಅದಾನು. ಅವರಪ್ಪ ಬ್ಯಾರೆ ಈ ಹಳ್ಳಿಯ ಸಾವ್ಕಾರನಾದ್ರೂ ಮಠಗಿತ, ಪುರಾಣ ಪೂವಚನ, ಸ್ವಾಮಿಗಳು ಅಂತ ಆಚಾರವಂತಿಕೆಯಿಂದ ಬಾಳಿ ಬದುಕಿದವನು. ಈಗ ಈ ಈಶ್ವರ ಅಂಥವನ ಮಗನಾಗಿ, ಹೊಲೆಮಾರಿಗೆಲ್ಲ ಮಹಾಲಕ್ಷ್ಮೀ ಮಂದಿರದೊಳಗೆ ಅದೂ ಗರ್ಭಗುಡಿಯೊಳಗ ಒಯ್ಯೋ ಹಲ್ಕಟ್ ಕೆಲ್ಸಾ ಮಾಡ್ಲಿಕ್ಕಿಲ್ಲ ಬಿಡು."

"ಹೂಂ.... ಹಂಗನ್ರಿ, ಮತ್ತ...."

ಆಚಾರಿಯ ಖುಷಿಯ ದನಿ.

"ಅದಕ್ಕೇನಿದ್ರೂ ಗುಡಿ ಹೊರಗಿನ, ಆವಾರದ ಕಸ ಗುಡಿಸೋದು, ತ್ವಾಟಕ್ಕ ಹೋಗಿ ಹುವ್ವಾ ಹಣ್ಣು ಹರ್‍ಕೊಂಡು ಬಂದು ಕೊಡೋದು. ಇಷ್ಟೇ ಮಾಡ್ತಾನಂತ ಕಾಣಸ್ತದ."

ಕೆಳಗೇರಿಯ ಮರಗವ್ವನ ಗುಡಿಯ ಬೈಲಿನಲ್ಲಿ ಹೇನಿನ ಕಾಟದ ತಲೆ ತುರಿಸಿಕೊಳ್ಳುತ್ತ, ಎಲೆಗೆ ಸುಣ್ಣ ಹಚ್ಚುತ್ತ, ಅಂಗೈಗೆ ತಂಬಾಕು ತಿಕ್ಕುತ್ತ, ಮಕ್ಕಳಿಗೆ ಬತ್ತಿದ ಮೊಲೆ ಚೀಪಿಸುತ್ತ ಕುಳಿತ ಹೆಂಗಸರ ಪಟಾಲಂ ಜಮಾಯಿಸಿತ್ತು. ಅಲ್ಲಿಯೂ ಇದೇ ಡಂಗೂರದ ಮಾತುಗಳೇ.

"ಕೇಳ್ದೇನ್ರೇ ದುರ್ಗವ್ವಾಯೀ... ಮಾಲಗಸಿಮಿ ಗುಡಿ ಕೆಲಸಕ್ಕ ನಮ್ಮಂದಿಗಿನೂ ಕರದಾರಂತ. ಬೇಕಾದವ್ರು ಅರ್ಜಿ ಹಾಕ್ಬೇಕಂತೆ."

ಮತ್ತೊಂದು ಹಿಗ್ಗು ಅಚ್ಚರಿಯ ದನಿ.

"ಹ ಹ ಹ್ಹ ಹ್ಹ ಹ್ಹಾ... ಇಸೂರ್ಸಿನ ಮ್ಯಾಲ ಈಗ ನಮ್ಮಂದಿ ದೈವ ಖುಲಾಯಿಸ್ತು ಅಂತ ಕಾಣಿಸ್ತದವ್ವಾ... ಆ ಮಾಲಗಸಿಮಿ, ನನ್ ತಾಯಿ ಗುಡಿ ಮುಂದ ನಿಂತು ಕಣ್ಣ ತುಂಬ ಅಕಿನ ಮಾರಿ ನೋಡಿ, ಅಕಿನ ಹೊಸ್ತಲಕ್ಕ ಹಣಿ ಹಚ್ಚು ಪುಣ್ಯಾ ಈಗ ಬಂತು..."

"ಛಿ ನಿನ್ ಒಯ್ದು... ಹೊಸ್ತಿಲ ಸನ್ಯಾಕ ನಮಗ ಹ್ಯಾಂಗ ಬಿಡ್ತಾರ ಹೋಗೇ

> ಶ್ರೀಮತಿ ಯು. ಎಸ್. ಪಾರ್ವತಿ ಅವರು ತಮ್ಮ ತಾಯಿ ದಿ॥ ಯು. ಸಾಕಮ್ಮನವರ ಜ್ಞಾಪಕಾರ್ಥ 'ಹೊಸತು'ವಿನಲ್ಲಿ ಪ್ರಕಟವಾಗಿರುವ ಮಹಿಳೆಯರ ಕುರಿತ ಆಯ್ದ ಉತ್ತಮ ಕತೆ/ಲೇಖನಗಳಿಗೆ ತಲಾ ರೂ. ೨,೫೦೦/– ಬಹುಮಾನ ನೀಡುತ್ತಿದ್ದಾರೆ. ಅದರಂತೆ, ೨೦೧೫–೧೬ರ ಸಾಲಿನಲ್ಲಿ (೧) ಶ್ರೀಮತಿ ಎ. ಜ್ಯೋತಿ ಅವರ **ಸುಭದ್ರ ಉದ್ಯೋಗ, ಸುರಕ್ಷಿತ ಮಹಿಳೆ : ಸಮಾಜದ ಪ್ರಗತಿ ಸೂಚಕಗಳು** (ಪ್ರ. ಫೆಬ್ರವರಿ ೨೦೧೬), (೨) ಶ್ರೀಮತಿ ದು. ಸರಸ್ವತಿ ಅವರ ಲೇಖನ **ಮಹಿಳೆಯರ ಸಹಭಾಗಿತ್ವವಿಲ್ಲದೆ ಯಾವ ಚಳುವಳಿಯೂ ಅಪೂರ್ಣ** (ಪ್ರ. ಏಪ್ರಿಲ್ ೨೦೧೬) – ಲೇಖನಗಳು ಬಹುಮಾನಕ್ಕೆ ಆಯ್ಕೆಯಾಗಿವೆ. ಇವರಿಗೆ ಅಭಿನಂದನೆಗಳು.
>
> *– ಸಂಪಾದಕ*

ನಿಂದೊಂದು. ಏನಿದ್ದರನೂ ನಾವು ಕಮ್ಮ ಜಾತಿ ಮಂದಿ ಆ ದೇವರ ಪಾದಗಟ್ಟಿಗೇ ಸೆಣಮಾಡಾದು. ಹೊಸ್ತಿಲ ತನಕಾ ಬಿಟ್ಟರ ಆ ತಾಯಿಗಿ ಮೈಲಿಗಿ ಆಗಂಗಿಲ್ಲೇನು?"

"ಹೊಯಿಂದು ನೋಡೇ ಯವ್ವಾ... ಅದುನೂ ಖರೇನೇ ಅನ್ನು. ಆ ತಾಯಿ ಗುಡಿ ಅಂಗಳ ಸಾರ್ಸಿ, ತೊಳ್ದು, ಸೇವಾ ಮಾಡಾ ಕೆಲ್ಸಾ ಅದ್ರೂ ನಮಗ ಕೊಟ್ರ ಸಾಕು ಬಿಡು. ನಮ್ ಪಾಪ ಎಲ್ಲಾ ಪರಿಹಾರ ಆಗಿ ಮುಂದಿನ ಜನಮದಾಗ ನಾವೂ ಹಾರ್ರು ಬ್ರಾಂಬ್ರು ಕುಲದಾಗ ಹುಟ್ಟೇವಿ... ಅಯ್ ಇದರ್ ಹೆಣಾ ಎತ್ಲೇ... ಬೇತಲದಾಗೇ ಕುಂತಾದ ನೋಡು" ಎನ್ನುತ್ತ ತಲೆಯಿಂದ ಕತ್ತಲಲ್ಲಿಯೇ ಅಂದಾಜಿನ ಮೇಲೆ ಹೇನು ಹಿಡಿದು ತೆಗೆದು ನೆಲದ ಹಾಸುಗಲ್ಲಿಗೆ ಹಾಕಿ ಕಚಕ್ಕನೆ ಒರೆದಳು.

ಎರಡು ಫರ್ಲಾಂಗಿನ ದೂರದ ಸೇಂದಿಖಾನೆಯ ಮೈದಾನದಿಂದಲೂ ನಿಶೆಯ ದನಿಗಳಲ್ಲಿ ಇವೇ ಚರ್ಚೆಗಳು.

"ಎಯ್ ಕಾಡ್ಯಾ... ನಾ ಮಾಲಗಸಿಮಿ ಗುಡಿ ಕೆಲಸಕ್ಕ ಅ... ಅ... ಅರ್ಜಿ... ಹ ... ಹಾಕ್ತಿನೋ...

"ಮದಲ ಮಾರಿ ನೋಡ್ಕೋ ನಿಂದು ಕನ್ನಡ್ಯಾಗ... ಹ ಹ ಹ್ಹಾ ಹ ಹಾ... ನೀ ದಿನ್ನಾ ಸಂಜೆ ಮುಂದ ಮೂಗಿಗಿ ಬರಾತನಕ, ಸಿಂದಿಕುಡ್ಕೊಂಡು ಹೋಗಿ, ಜೋಗಣೀ ಕೆಂಚಿ ಮನ್ಯಾಗ ಮನ್ಕೊಂಡು ಬಂದು ಮಾಲಗಸಿಮಿ ಗುಡಿ ಕಸಾ ಹೊಡಿ. ಆ ಸತ್ತುಳ್ಳಕ್ಕಿ ತಾಯಿನಿನ್ ಕಣ್ಣ ಕಳಿತಾಳ ತಿಳೀತೇನು... ಅವೆಲ್ಲಾ ಮಡಿ ಹುಡಿ ಮಾಡವ್ರಿ ಗೆಪಾ... ಮಾಳಪ್ಪಾ ಸಾಕು ನಡಿ... ಬಾಟಲಿ ಖಾಲಿ ಆಯ್ತು..."

"ನಿಮ್ಮವ್ವನ ಸುವ್ವರ್ ನನ್ಮಕ್ಕ್ಯಾ... ನನಗ ಕೆಂಚಿನೂ ಬೇಕು... ಮತ್ತು ಆ ಮಾಲಗಸಿಮಿ ಗುಡಿ ಕಸಾ ಹೊಡ್ಯಾದನೂ ಬೇಕು... ಯಾರರೆ ಅಡ್ಡ ಬಂದ್ರ ಒಬ್ಬೊಬ್ರಿಗೆ ಕಬ್ಬ ಕಡದಂಗ ಕಚಾ ಕಚಾ ಕಡ್ದು ಬಿಡ್ತೀನಿ ಹುಷಾರ್..."

"ಥತ್ ಇದರವ್ವನ ತಂದು... ಈ ಮಗನಿಗಿ ಭಾರಿ ನಿಶಾ ಆಗಿ ತೆಲಿಗೇರ್ಯಾರ ಕಾಣಸ್ತದ. ಎಳ್ಕೊಂಡು ನಡ್ರೋ ಇದಕ್ಕ..."

ಹೀಗೆ ಶಿವಳ್ಳಿಯ ಬಹುತೇಕ ಮಂದಿಯ ಬಹಳ ಮಾತುಗಳೆಲ್ಲ ಬೆಲ್ಲದ ಕರಣಿಗೆ ನೊಣ ಮುಕುರುವಂತೆ, ಡಂಗೂರದ ವಿಷಯದ ಸುತ್ತಲೇ ಮುಕುರುತ್ತಿದ್ದುವು.

ಅರ್ಜಿ ಹಾಕುವ ಕೊನೆಯ ದಿನವೂ ಹತ್ತಿರ ವಾಯಿತು. ಮ್ಯಾಗೇರಿಯ ಮಂದಿಯಿಂದ ಅರ್ಜಿಗಳು ಕಲೆಕ್ಟರ್ ಕಚೇರಿಗೆ ದೌಡಾಯಿಸಿದುವು. ಅರ್ಜಿದಾರರಿಗೆ ವಯಸ್ಸಿನ ಮಿತಿಯಿತ್ತು. ಆದರೆ ಕೆಳಗೇರಿಯ ಶೂದ್ರರಿಗೆ ಅದರ ಮಿತಿಯಲ್ಲಿಯೂ ರಿಯಾಯ್ತಿ ಇತ್ತು. ಹೊಲೆಗೇರಿ, ಮಾದಿಗಗಲ್ಲಿ, ಲಂಬಾಣಿ ತಾಂಡ್ಯಾ, ಗೊಂಡ ಕುರುಬ, ಕಾಡಸಿದ್ದರ ಕಡೆಗಳಿಂದಲೂ ಹರೆಯದ ಹುಡುಗರು ಅರ್ಜಿ ಬರೆಯಿಸಿ ಹಾಕಿದರು. ಮಲ್ಲಣ್ಣನ ತಮ್ಮ ಪುಂಡೆಪ್ಪನೂ ಮೆಟ್ರಿಕ್ ಪಾಸು ಮಾಡಿದ್ದ. ಕನ್ನಡ ಓದಲು ಬರೆಯಲು ಸರಿಯಾಗಿ ಬರುತ್ತಿತ್ತು. ಆದರೆ ಪುಂಡಿಗೂ ಸಾವಕಾರನ ಮನೆಯಲ್ಲಿ ಜೀತ ತಪ್ಪಿರಲಿಲ್ಲ. ಅವನೂ ಅರ್ಜಿಸಿದ್ದ. ಆದರೆ ಅವನು ಹಾಗೆ ಅರ್ಜಿ ಹಾಕಿದ್ದರ ಹಿಂದೊಂದು ದೊಡ್ಡ ಕಥೆಯೇ ಇತ್ತು.

ಕಲೆಕ್ಟರ್ ಈಸೂರನ ಕಡೆಯಿಂದ ಗುಟ್ಟಾಗಿ ಪುಂಡಿಗೆ ಕರೆ ಬಂದಾಗ ಅವನು ಗಾಬರಿಯಾಗಿದ್ದ. ಸಿಕ್ಕ ಬಸ್ಸು ಹತ್ತಿ ಕಲಬುರ್ಗಿಗೆ ಬಂದು ಕತ್ತಲಾಗು ತ್ತಿರುವಂತೆ ಈಸೂರನ ಬಂಗಲೆಯ ಮುಂದೆ ಕೈ ಕಟ್ಟಿಕೊಂಡು ಹಾಜರಾಗಿದ್ದ. ಈಸೂರ ನಗುತ್ತ ಅವನನ್ನು ಒಳಗೆ ಕರೆದಾಗಲೇ ಪುಂಡಿಯ ಎದೆಬಡಿತ ಸಮವಾದದ್ದು.

"ಪುಂಡಿ... ನೀ ಮಹಾಲಕ್ಷ್ಮಿ ಮಂದಿರದ ಕಸಗುಡಿಸೋ ಕೆಲಸಕ್ಕ ಯಾಕ ಅರ್ಜಿ ಹಾಕಿದ್ದಿ?"

"ಆಂ... ಊಂ... ನಾ... ನಾ... ಹಾಕ್ತಿದ್ದಿಲ್ರಿ ಸಾಬ್ರೇ... ಖರೇವಂದ್ರ ನಾ ಒಲ್ಲೆಪೋ ಅಂತ ಕುಂತಿದ್ದಿನ್ರಿ ... ನಮ್ ಕೇರ್‍ಯಾಗಿನ ಹರ್‍ಯಾದ ಪಾರ ಗೋಳೆಲ್ಲಾ ಜಬರದಸ್ತಿಲಿಂದ... ತೆಪ್ಪಾಯ್ತು... ಬೇಕಾದ್ರ ವಾಪಸ್ ತಕ್ಕೋತೀನ್ರಿ ...

ಪುಂಡಿ ಅಳುವುದೊಂದೇ ಬಾಕಿಯಿತ್ತು.

"ಹುಚ್ಚ... ಅದಕ್ಕಲ್ಲೋ ನಾ ಹೇಳಿದ್ದು ಪುಂಡಿ... ನೀನು ಪೂಜಾರಿ ಕೆಲಸಕ್ಕ ಯಾಕ ಅರ್ಜಿಸಲಿಲ್ಲ ಅಂತ... ಹ್ಯಾಂಗಿದ್ರೂ ನಿನಗ ಕನ್ನಡ ಓದ್ಲಿಕ್ಕೆ ಬರೀಲಿಕ್ಕೆ ಬರ್ತದ... ಪೂಜಾದ ಮಂತ್ರಗೋಳೆಲ್ಲಾ ಈಗ ಕನ್ನಡದಾಗೇ ಭಾಷಾಂತ್ರ ಮಾಡ್ಸಿ ಬಿಟ್ಟೀನಿ... ದೇವಿ ಸಿಂಗಾರ, ಸೀರಿ ಉಡಸೋ ರೀತಿ, ಅವೆಲ್ಲಾ ಸ್ವಲ್ಪ ದಿವಸ ರೂಢಿ ಆದ್ಹಂಗ ಬರ್ತಾದ..."

"ತೋಬಾ... ತೋಬಾರ್ರೀ... ಸಾಹೇಬ್ರೇ... ಹಿಂಗಂದು ನನಗ ಪಾಪದಾಗ ಹಾಕಬ್ಯಾಡ್ರೀ... ನಾನಂತೂ ಹೇಳಿಕೇಳಿ ಹೊಲ್ಯಾ. ದಿನ ಬೆಳಗಾದ್ರ ಖಂಡಾ ತಿಂದು, ಸಿಂದಿ ಕುಡ್ದು, ರಾತ್ರಿಯೆಲ್ಲಾ ಮೈಲಿಗಿಯಾಗೋ ಕಮ್ಮ ಜಾತಿಯಂವಾ, ಆ ಮಾತಾಯಿ ಮಹಾಲಕ್ಷ್ಮಿ ಪೂಜಾಕ್ಕ ನಾ ಯೋಗ್ಯ ಅಲ್ರೀ..."

ಈಸೂರ ಗಟ್ಟಿಯಾಗಿ ನಕ್ಕುಬಿಟ್ಟಿದ್ದ. ಎದ್ದು ಬಂದು ಅವನ ಬೆನ್ನು ತಟ್ಟಿ, ಪ್ರೋತ್ಸಾಹಿಸುವ ದನಿಯಲ್ಲಿ ಧೈರ್ಯ ತುಂಬಿದ್ದ.

"ಇಲ್ನೋಡು ಪುಂಡೀ... ನಾನೂ ನೀನೂ ಸುಮಾರಾಗಿ ಒಂದೇ ವಯಸ್ಸಿನವರು. ಆದ್ದರಿಂದ ಸಲುಗೆ ವಹಿಸಿ ಹೇಳ್ತಿದ್ದೀನಿ, ನೀ ಮೊದ್ಲು ನಿನ್ ತೆಲಿಯೊಳಗಿಂದ ಆ ಹುಂಬ ವಿಚಾರಗಳಿಗಿ ಸತ್ತು ಹೊಡಿಬೇಕು. ಅಲ್ಲ... ಇಷ್ಟೊರ್ಷೆಲ್ಲ ಮಹಾಲಕ್ಷ್ಮಿ ಪೂಜಾರಿ ಆಗಿ ಆ ಆಚಾರಿಗೋಳೇ ಕೆಲ್ಸಾ ಮಾಡ್ಕೋತ ಬಂದಾರ, ಈಗ ಜಾತಿ ಕುಲ ಏನೂ ಉಳಿದಿಲ್ಲ. ಈ ಗುಡಿ ಈಗ ಯಾವ ಜಾತಿಯ ಜನರದ್ದೂ ಗುತ್ತಿಗಿ ಅಲ್ಲ. ಇದು ಸರ್ಕಾರಕ್ಕೆ ಸೇರಿದ್ದು, ಸರ್ಕಾರದ ನಿಯಮದ ಪ್ರಕಾರ ನೌಕರಿ ಕುಡ್ತೀವಿ. ಈ ಬ್ರಾಂಬ್ರೆಲ್ಲಾ ಕದ್ದುಮುಚ್ಚಿ ಎಲ್ಲ ಕುಡೀತಾರು, ತಿಂತಾರು ಹೌದಲ್ಲೋ... ರಾತ್ರಿನೂ ಅವರು ಎಲ್ಲಾ ಮಜಾ ಮಾಡ್ತಾರ. ಅದ್ರೂ ಮುಂಜಾನೆದ್ದು ಮೈ ತೊಳ್ಕೊಂಡು ಮಹಾಲಕ್ಷ್ಮಿ ಪೂಜಾಮಾಡ್ತಾರೋ ಇಲ್ಲೋ ನೀನೇ ಹೇಳು? ಅದಕ್ಕೂ ಪೂಜಾಕ್ಕೂ ಏನೂ ಸಂಬಂಧ ಇಲ್ಲ. ಮನಸ್ಸು ಮೊದಲು ಮಡಿಯಿಂದಿರಬೇಕಪ್ಪಾ ಪುಂಡಿ... ನೀ ಸುಮ್ನ ನಾ ಹೇಳಿದ್ಹಾಂಗ ಗುಡಿಯ ಪೂಜಾರಿಯ ಕೆಲಸಕ್ಕ, ಅರ್ಜಿ ಹಾಕು, ನಾನು ಈ ನನ್ ಜಿಲ್ಲಾದೊಳಗ ಒಂದು ಹೊಸಾ ಪದ್ಧತಿ ಸುರು ಮಾಡಿ, ಹೊಸಾ ಕ್ರಾಂತಿ ಮಾಡ್ಬೇಕಂತ ಮಾಡೀನೆಪಾ... ಅದಕ್ಕೇ ಇಷ್ಟು ಒದ್ದಾಡ್ತಿದ್ದೀನಿ. ಇದಕ್ಕ ಕೆಳಗೇರಿಯ ನಿಮ್ಮ ಜನರ ಸಹಕಾರ ಬೇಕು ನೋಡು..."

"ಅಲ್ರೀ... ನಾನು... ನಾನು..."

ಪುಂಡಿಯ ಗಂಟಲೊಣಗಿತು, ಹಸ್ತ ಹೊಸೆದ, ಹಲ್ಲು ಕಿರಿದ, ಮಾತು ಕಳೆದುಕೊಳ್ಳುತ್ತ ತೊದಲಿದ.

"ನಾ ಇದ್ದೀನಲ್ಲೋ ಪುಂಡಿ ನಿನ್ನ ಹಿಂದ... ಈ ಪೂರ್ತಿ ಜಿಲ್ಲಾನೇ ನನ್ನ ಕೈಯೊಳಗದಾ ಏನಪಾ... ಸರ್ಕಾರ, ಕಾನೂನು, ಪೊಲೀಸು, ಎಲ್ಲಾ ನಿನ್ ಕಡಿನೇ ಇರ್ತದ. ನೀ ಯಾವುದಕ್ಕನೂ ಅಂಜಬಾರ್ದು... ನಿನ್ ಕೂದಲೆಳಿಗಿ ಧಕ್ಕೆ ಆಗಲಾರದ್ಹಂಗ ನೋಡ್ಕೋ ಜವಾಬ್ದಾರಿ ನಂದು. ಮತ್ತ ನಿನಗ ತಿಂಗಳ ತಿಂಗಳಿಗಿ ಐದಾರುನೂರು ರುಪ್ಯೆ ಪಗಾರ ಸಿಗ್ತದ. ಮುಂದ ವರ್ಷ ವರ್ಷಕ್ಕ ಹೆಚ್ಚಾಗ್ತದ, ನೀ ರಿಟಾಯರ ಆದ ಮ್ಯಾಲೆ ಫೆನಶೆನ್ ಸಿಗ್ತಾದ... ಈಗೊ ಈ ಅರ್ಜಿ ಮ್ಯಾಲ ಸಹಿ ಮಾಡು ಪುಂಡಿ..."

ತಾಸ್ಹೊತ್ತು ಈಸೂರ ತಾನು ಕಲಿತದ್ದೆಲ್ಲ ಖರ್ಚು ಮಾಡಿ ಪುಂಡಿಯ ಮಿದುಳಿನೊಳಗೆ ತುರುಕಿ ತುರುಕಿ, ಜೋರುಹಾಕಿ ಒಳಕ್ಕೆ ತಳ್ಳಿದಾಗ ಪುಂಡಿ ಸಹಿ ಮಾಡಿದ್ದ. ಹಾಗೆ ನೋಡಿದರೆ ಪುಂಡಿಯೇನೂ

ಹೆದರುಪುಕ್ಕ ಯುವಕನಾಗಿರಲಿಲ್ಲ. ಅವನ ಮೈಯಲ್ಲಿಯೂ ಎಲ್ಲ ಜಾತಿಯ ಹರೆಯದ ಪೋರರ ಮೈಯಲ್ಲಿಯಂತೆ ಬಿಸಿರಕ್ತವೇ ಹರಿದಾಡುತ್ತಿತ್ತು. ಸಿಟ್ಟು ಸೆಡವು, ಕೋಪತಾಪ, ಛಲ, ಹಟ, ಅವನಿಗೂ ಇದ್ದುವು. ಆದರೆ ಅಣ್ಣ ಮಲ್ಲಣ್ಣನ ಅಂಜಿಕೆಯಿಂದ ಸುಮ್ಮನಿದ್ದ, ಈಗ ಜಿಲ್ಲೆಯ ಕಲೆಕ್ಟರನಾದ ಈಸೂರನೇ ತನ್ನ ಕಡೆಗಿರುವಾಗ ಅವನೊಳಗಿನ ಸಹಜ ಅಭಿಮಾನ ಹೆಡೆಯೆತ್ತಿತ್ತು. ಅವನು ಅರ್ಜಿಗೆ ಸಹಿ ಹಾಕಿದ್ದ.

ಮನೆಗೆ ಬಂದು ಅಣ್ಣ ಅತ್ತಿಗೆ, ಹೆಂಡತಿಯರ ಮುಂದೆ ಹೇಳಿದಾಗ ಮಲ್ಲಣ್ಣನ ಹೆಂಡತಿಯಂತೂ ದನಿತೆಗೆದು ಅತ್ತೇಬಿಟ್ಟಳು.

"ಯಾಕ್ ಹಿಂಗ್ ಮಾಡ್ದ್ಯೋ ಪುಂಡೀ... ಆ ಮಾತಾಯಿ ಲಗಸಿಮಿಗಿ ನಮ್ಮಂದಿ ಮುಟ್ಟಿ ಪೂಜಾ ಮಾಡಿದ್ರ ಆಕಿ ನಮಗ ಜೀವದಲಿಂದ ಇಡಂಗಿಲ್ಲೋ ತಮ್ಮಾ... ಯಾ ಕೆಡಗಾಲಕ್ಕ ನಿನಗ ಹಿಂತಾ ಬುದ್ಧಿ ಬಂತೋ..."

"ಎsss ಸುಮ್ಕಿರೆಲೆ ಭೋಸುಡಿ... ಯಾರರೆ ಸತ್ತ್ಹಂಗ ಅಳಬ್ಯಾಡ್ಲೇ ನಿನ್ನವ್ವನಾ... ಏನೂ ಆಗಂಗಿಲ್ಲ. ಈಸೂರ ನಮಗೆಂದೂ ಕೆಡಕ ಮಾಡಂಗಿಲ್ಲಂತ ತಿಳಿ ಸುಮ್ಕಿರು..."

ಮಲ್ಲಣ್ಣ ಹೆಂಡತಿಗೆ ಬೈಯ್ದು ಅವಳ ಬಾಯಿ ಮುಚ್ಚಿಸಿದರೂ ಒಳಗೊಳಗೆ ಕೆಟ್ಟ ವಿಚಾರಗಳು ಎದ್ದು ಬಂದು ಅವನ ಎದೆಗುಂಡಿಗೆಗೆ ಗುದ್ದ ತೊಡಗಿದುವು. ಸಲ್ಲದ ಶಂಕೆಗಳು ಅವನ ಮೆದುಳು ಚುಚ್ಚ ತೊಡಗಿದಾಗ ಅವನು ಪುಂಡಿಯನ್ನು ಕರೆದುಕೊಂಡು ಹೆಂಡದ ದುಕಾನಿನ ಕಡೆಗೆ ನಡೆದನು.

ರಾತ್ರಿ ಹಾಸಿಗೆಯಲ್ಲಿ ಪುಂಡಿಯ ಹೆಂಡತಿ ಕಾಳಿ ಸೊರ್ರ ಬುರ್ರ ಸದ್ದು ಮಾಡುತ್ತ ಅಳುತ್ತ ಮಾತುಗಳನ್ನು ಎತ್ತಿ ಎತ್ತಿ ಗಂಡನ ಎದೆಗೆ ಬೀಸಿ ಒಗೆಯತೊಡಗಿದಳು.

"ಮದ್ಲೇ ನಮಗ ಇನ್ನಾ ಮಕ್ಕಳಾಗಿಲ್ಲ. ನಿಮ್ಮಣ್ಣ ಅತ್ತಿಗಿಗಿನೂ ಮಕ್ಕಳೇ ಆಗಲಿಲ್ಲ. ಯಾ ದೇವ್ರ ಕಾಟಾನೋ ಏನೋ... ಈಗ ಆ ಮಾತಾಯಿ ಮಾಲಗಸಿಮಿಗಿ ಮುಟ್ಟಿ ಪೂಜಾಮಾಡ್ದಿ ಅಂದ್ರ ನಮಗೆ ಏಳೇಳು ಜನ್ಮ ಮಕ್ಕಳೇ ಆಗಲಿಕ್ಕಿಲ್ಲ. ನಮ್ಮ ಮನ್ಯಾಗ ರಗತದ ಹೊಳಿ ಹರಸ್ತಾಳ ಆ ತಾಯಿ ದನದ ಖಂಡಾ ತಿಂದು, ಬನದ ಸಿಂದಿಕುಡ್ದಾ ಹೊಲ್ಯಾ ಆಗಿ ನೀ ಹಿಂಗ್ಯಾಕ ಮಾಡ್ದ್ಯೋ..."

"ಇದೆಲ್ಲಾ ನಾ ಈಸೂರಪ್ಪಗೆ ಹೇಳೀನೆ ಕಾಳೀ... ಇದರಾಗೇನೂ ತೆಪ್ಪಿಲ್ಲಂತ ಅವರೇ ಹೇಳ್ಯಾರ. ಪೂಜಾಕ್ಕ ಹೋಗಾ ಮುಂದ ಮಡಿಲಿಂದ ಹ್ವಾದ್ರ ಸಾಕು ಅಂದ್ರು..."

"ಹೂಂ... ಅಂತಾರ... ಅವ್ರು ದೊಡ್ಡ ಮಂದಿ. ಏನೇನೋ ಅಂತಾರ. ಅದಕ್ಕ ನೀ ಗಂಗೆತ್ತಿನ್ಹಂಗ ತೆಲಿಹಾಕಿ ಬಂದಿ ಆಯ್ತು. ನಾಳಿಗ ನಿನಗ ಏನರೆ ಜಿಂವಕ ಧೋಕಾ ಆದ್ರ ನಾ ರಂಡಿಮುಂಡಿ ಆಗ್ತೀನಿ. ನಿನಗೇನಾಗ್ತದೋ..."

ಅವಳ ಅಳು ಹೆಚ್ಚಾಯಿತು. ಪುಂಡಿ ಸುಮ್ಮನಾದಷ್ಟು ಕಾಳಿ ಜೋರಾದಳು. ಅವನು ತಣ್ಣಗಿದ್ದಷ್ಟು ಅವಳು ಗರಂ ಅದಳು. ಪುಂಡಿಗೊ ಮೊದಲೇ ತಲೆಯಲ್ಲಿ ಹುಳುಗಳೆದ್ದು ಸೊಕ್ಕಿನಿಂದ ಗುಂಯಗುಡುತ್ತಿದ್ದುವು. ಆಗತಾನೇ ಕುಡಿದು ಬಂದ ಸೇಂದಿಯ ಅಮಲು ಬೇರೆ. ಕತ್ತಲಲ್ಲೇ ಕಾಳಿಯ ಕಣ್ಣೊರೆಸಿ, ತೋಳು ಬಳಸಿ, ಗಲ್ಲಕ್ಕೆ ಗಲ್ಲ ಒತ್ತಿದಾಗ ಕಾಳಿ, ಕಾದ ಹೆಂಚಿನ ಮೇಲಿನ ಎಳ್ಳಿನಂತೆ ಥಟ್ಟನೆ ಸಿಡಿದಳು. "ಸುಮ್ಮಾಕ ಬೀಳು... ಖಬರದಾರ ಅಂತೀನಿ. ನನಗೆ ಮುಟ್ಟ ಬ್ಯಾಡಂದ್ರ ಮುಟ್ಟಬ್ಯಾಡ..." ಅವಳು ಅಷ್ಟು ಅಂದದ್ದೇ ತಡ ಇಷ್ಟು ಹೊತ್ತು ಪುಂಡಿ ತಡೆದಿದ್ದ ಎಲ್ಲರ ಮೇಲಿನ ಎಲ್ಲ ಸಿಟ್ಟು, ಸಂತಾಪ, ಗೊಂದಲಗಳೆಲ್ಲ ಸಂಯಮದ ಕಟ್ಟೆಯೊಡೆದು ಹೊರನುಗ್ಗಿದುವು.

"ಹಲ್ಕಟ್ ರಂಡೀ... ಒಂದೇ ಸವನ ಒದರಲಕ್ಹತ್ತಾದ ಇದರವ್ವನ... ಸಾಯಿ..." ಎಂದವನೇ ಧಬ ಧಬನ ಅವಳಿಗೆ ಎಂಟ್ಹತ್ತು ಗುದ್ದು ಗುದ್ದಿ, ದೂರತಳ್ಳೀ, ಕೌದಿ ಎಳೆದುಕೊಂಡು ಹೊರಬಂದು, ಅಂಗಳದಲ್ಲಿ ಹಾಸಿಕೊಂಡು ಮಲಗಿದನು. ಬಹಳ ಹೊತ್ತು ಗುಡಿಸಲೊಳಗಿಂದ ಕಾಳಿಯ ಅಳು, ಬೈಗುಳಗಳು ಕ್ಷೀಣವಾಗಿ ಹೊರಬರುತ್ತ, ಮೊದಲು ಅವನ ಕಿವಿಗೆ ತಾಕುತ್ತ ಕ್ರಮೇಣ ಅವನ ಗೊರಕೆಯಲ್ಲಿ, ಅದರ ಸದ್ದಿನಲ್ಲಿ ಸಾಯತೊಡಗಿದುವು.

ಒಂದು ನಿಗದಿತ ದಿನ ನೌಕರಿಯ ಇಂಟರವ್ಯೂಗೆ ಹಾಜರಾಗುವಂತೆ ಅರ್ಜಿಸಿದವರಿಗೆಲ್ಲ ಎಂಡೋಮೆಂಟ ಇಲಾಖೆಯ ಅಧ್ಯಕ್ಷರೂ ಆಗಿದ್ದ ಕಲೆಕ್ಟರ, ಈಸೂರನ ಕಚೇರಿಯಿಂದ ಶಿವಳ್ಳಿಗೆ ಪತ್ರಗಳು ರವಾನೆಯಾದುವು. ಅಂಚೆಯಾಳು ಧೂಳಪ್ಪ ಅವುಗಳನ್ನು ಹಳ್ಳಿಯ ಮ್ಯಾಗೇರಿ, ಕೆಳಗೇರಿ, ಹಾರುವಕೇರಿ, ಹೊಲಗೇರಿ ಗಳಲ್ಲೆಲ್ಲ ಹಂಚಿಹೋದ.

ಉಳ್ಳವರು ಭರ್ಜರಿಯಾಗಿ ದಿರಿಸು ಹಾಕಿಕೊಂಡು ಸಂದರ್ಶನಕ್ಕೆ ನಡೆದರು. ಎದೆಗುಂಡಿಗೆಗಳ ತುಂಬ ಪುಕ್ಕಲುತನ ತುಂಬಿಕೊಂಡ ಕೆಳಗೇರಿಯವರೂ ಇದ್ದುದ್ದರಲ್ಲಿಯೇ ಶಿಸ್ತಿನಿಂದ ನಡೆದರು. ಜರಿಯಂಚಿನ ಗುಲಾಬಿ ಬಣ್ಣದ ಮಡಿಪಂಚೆಯುಟ್ಟು ಬೆತ್ತಲೆ ಎದೆ, ಹೊಟ್ಟೆ, ಹಣೆಯ ಮೇಲೆ ಗಂಧ ವಿಭೂತಿಯ ಪಟ್ಟಿ ಬಳಿದುಕೊಂಡು, ಕೊರಳಲ್ಲಿ ಬಂಗಾರದಲ್ಲಿ ಪೋಣಿಸಿದ ರುದ್ರಾಕ್ಷಿಸರ ಧರಿಸಿ, ಸಂಸ್ಕೃತ ಶ್ಲೋಕಗಳನ್ನು ಗುಣಿ ಗುಣಿಸುತ್ತ ಬಸ್ಸು ಹತ್ತಿದ ಆಚಾರೆಪ್ಪನನ್ನು, ಥಾಟಾಗಿ ಬಂದು ಕುಳಿತ ಶಿವಳ್ಳಿಯ ಮೇಲು ಕೆಳಗಿನ ಗಲ್ಲಿಗಳ ಮಂದಿಯನ್ನು ಕಂಡು ಬಸ್ಸಿನಲ್ಲಿದ್ದವರೆಲ್ಲ ಕಣ್ಣು ಕಣ್ಣು ಬಿಟ್ಟರು.

ಸಂದರ್ಶನ ಮುಗಿದು ಎಂಟು ಹತ್ತು ದಿನಗಳಾಗಿದ್ದುವು. ಅರ್ಜಿದಾರರೆಲ್ಲ ತಮ್ಮ ತಮ್ಮ ನೌಕರಿಯ ಆರ್ಡರಿಗಾಗಿ ದಿನವೂ ಧೂಳಪ್ಪನ ದಾರಿ ಕಾಯುತ್ತಿದ್ದರು. ಆದರೆ ಖಾಲಿ ಬರುವ ಧೂಳಪ್ಪ ಮುಗಿಲಿಗೆ ಕಣ್ಣೆತ್ತಿ, ಕೈ ತಿರುವಿ ತಾರಮ್ಮಯ್ಯ ಹಾಡಿ ಮುಂದಿನೂರಿಗೆ ಸೈಕಲ್ ಬಿಡುತ್ತಿದ್ದ.

ಅಂತೂ ಇಂತೂ ಕೊನೆಗೊಂದು ದಿನ ಕಲಬುರ್ಗಿಯಿಂದ ಶಿವಳ್ಳಿಯ ಕೆಲವರಿಗೆ ಮಹಾಲಕ್ಷ್ಮಿ ಮಂದಿರದ ನೌಕರಿಗಳ ಅಪಾಯಿಂಟಮೆಂಟ ಆರ್ಡರ್‌ಗಳು ಬಂದುವು. ಅದರಲ್ಲಿ ಮುಖ್ಯವಾದ ವಿಚಿತ್ರದ್ದೆಂದರೆ ಹಿಂದಿನಿಂದಲೂ ಗುಡಿಯ ಪೂಜಾರಿಕೆ ಮಾಡುತ್ತ ಬಂದಿದ್ದ ಆಚಾರಿ ಮನೆತನದ ಶೀನಪ್ಪಾಚಾರಿಗೆ ಪೂಜಾರಿಕೆಯ ಬದಲಾಗಿ ಗುಡಿಯ ಆವಾರದ ಕಸಗುಡಿಸುವ ಕೆಲಸ, ಲಿಂಗಾಯತರ ಬಸನಿಂಗವ್ವನಿಗೆ ಹೂ ತರುವ ಕೆಲಸ, ಎಸ್.ಟಿ. ಪಂಗಡದಲ್ಲಿ ಬರುವ ಗೊಂಡಜಾತಿಯ ಬೀರಪ್ಪನಿಗೆ ಗುಡಿಯ ಕಾರುಭಾರಿಯ ಕೆಲಸ ಸಿಕ್ಕಿತ್ತು. ಎಸ್ಸಿ ಜನಾಂಗದಲ್ಲಿ ಬರುವ ಹೊಲೆಯ ಪುಂಡೆಪ್ಪನಿಗೆ ಮಾತ್ರ ಮಹಾಲಕ್ಷ್ಮಿ ಪೂಜಾರಿಕೆಯ ಹುದ್ದೆ ದಕ್ಕಿತ್ತು!

ಬಹಳ ವರ್ಷಗಳಿಂದ ತಮ್ಮ ಗಲ್ಲಿಯ ಮರಗವ್ವನ ಪೂಜೆ ಮಾಡುತ್ತಲೆ ಬಂದಿದ್ದ ಪುಂಡಿಗೆ ಇದು ಬಡ್ತಿಯಂತಾಗಿತ್ತು. ಎಲ್ಲರೂ ತಂತಮ್ಮ ಆರ್ಡರ ಕಾಗದಗಳನ್ನು ಹತ್ತು ಹತ್ತು ಸಲ ಓದಿ, ಓದಿಸಿ, ಖಾತ್ರಿಪಡಿಸಿಕೊಂಡರು. ಆಚಾರೆಪ್ಪನ ಬೆಕ್ಕಿನ ಕಣ್ಣುಗಳಲ್ಲಿ ನೆತ್ತರಿಳಿಯಿತು. ಹಲ್ಲಿಗೆ ಹಲ್ಲು ಮಸೆದುವು. 'ಹಲ್ಕಟ್ ಸೂಳ್ಯಾ ಮಕ್ಳು ಎಲ್ಲೋರೂ... ತಾಯಿಗ್ಗಂಡ್ರು,... ಹುಂ...' ಎಂದು ಬೈಗುಳಗಳನ್ನು ಝಾಡಿಸಿ ಒಗೆಯುತ್ತ, ಕೈಯಲ್ಲಿಯ ಕಾಗದವನ್ನು ಹರಿದು ಚೂರು ಚೂರು ಮಾಡಿ ನೆಲಕ್ಕೆಸೆದು ಥೂ ಎಂದು ಉಗುಳಿ ಮೆಟ್ಟುಗಾಲಿನಿಂದ ಗಸಗಸನೆ ತಿಕ್ಕಿದನು. ಸಿಟ್ಟಿನ ಉರಿ ತಣ್ಣಗಾಗಲಿಲ್ಲ. ತಟ್ಟನೆ ಜೇಬಿನಿಂದ ಕಡ್ಡಿ ಡಬ್ಬಿ ತೆಗೆದು ಚರ್ರನೆ ಕಡ್ಡಿ ಗೀರಿ ಕಾಗದದ ಚೂರುಗಳಿಗೆ ಉರಿ ಹಚ್ಚಿದನು. ಅವೆಲ್ಲ ಉರಿದು ಕರಕಾಗಿ ಕರಿಕೋಳಿಯ ಪುಕ್ಕಗಳಂತೆ ಗಾಳಿಯಲ್ಲಿ ಮೇಲಕ್ಕೆ ಹಾರಿದುವು.



ಶಿವಳ್ಳಿಯೆಂಬೋ ಶಿವಳ್ಳಿಯೆಲ್ಲಾ ಅಂದು ಉಲ್ಟಾಪುಲ್ಟಾ ಆಯಿತು. ತಲೆ ಕೆಳಗೆ ಕಾಲು ಮೇಲಾಗಿ ನಿಂತು ತೇಕತೊಡಗಿತು. ಸುದ್ದಿ ಸಂಜೆ ಹೊಲ ಗದ್ದೆಗಳಿಂದ ಮನೆಗುಡಿಸಲುಗಳಿಗೆ ಬರುವ ಮಂದಿಯನ್ನು ಎದುರುಗೊಳ್ಳಲು ಮೈಮೇಲಿನ ಖಬರು ಹಾರಿ ದೌಡಾಯಿಸುತ್ತ; ಮೈಮೇಲೆ ಬಂದಂತೆ ಝೋಲಿ ಹೊಡೆಯುತ್ತ ಹೇಳಿಕೆಗೆ ಶುರುಮಾಡಿತು.

ಹಾರುವರೆಲ್ಲ ಸಿಟ್ಟು ಅಪಮಾನಗಳಿಂದ ಮುಸುಮುಸು ಮಾಡಿದರು, ಹಲ್ಕಟ ಸರ್ಕಾರ ಹಲ್ಕಟ್ ಕಾನೂನು ಎಂದರು. ರೋಸ್ವರಂತೆ ರೋಸ್ವರು. ದೇವರ ಪೂಜೆಗೂ ಹೊಲೆಮಾದಿಗರು ಪೂಜಾರಿಗಳೆ? ಇದ್ದಬಿದ್ದ ಧರ್ಮ ಆಚಾರಗಳೆಲ್ಲ ಹಾಳಾದುವು ಎಂದರು. ಇದು ಈಸೂರನ ಅಧರ್ಮದ ಪರಮಾವಧಿ, ರಾವಣಾಸುರ ಇವನು. ರಾಮ ಅವತಾರ ಎತ್ತಿ ಬಂದು ಇವನನ್ನು ಸಂಹರಿಸುತ್ತಾನೆ ಎಂದರು. ಆಚಾರಿಯಂತೂ ನಿಂತಲ್ಲಿ ನಿಲ್ಲಲಾರದೆ ಕುಂತಲ್ಲಿ ಕೂಡದೆ, ಬಾಲ ಸುಟ್ಟ ಬೆಕ್ಕಿನಂತೆ ಕೇರಿಯ ತುಂಬ ಓಡಾಡುತ್ತ ತನಗಾದ ಅನ್ಯಾಯಕ್ಕೆ ಉಪ್ಪುಕಾರ ಹಚ್ಚಿ ಬೈಯುತ್ತ ಅಳುತ್ತಿದ್ದ.

ಈ ಮಂದಿಯ ಬುದ್ಧಿಗೇಡಿತನಕ್ಕೆ ರೋಸಿ ಹಗಲು ಸರಿದು ಮುಸ್ಸಂಜೆಯಾವರಿಸಿತು. ಎಲೆತಿಂದು ಉಗುಳಿದ ಪಾನ್ ಅಂಗಡಿಯ ಮುಂದಿನ ರಸ್ತೆ, ನೆಲದಂತೆ ಆಕಾಶೇಂಬೋ ಆಕಾಶೆಲ್ಲಾ ಕೆಂಪಗಾಯಿತು. ಮ್ಯಾಗೇರಿಯ ಮಂದಿಯ ಸಿಟ್ಟಿನ, ಬಿಸಿಯುಸಿರಿನ ಹಬೆಗೆ ಸಂಜೆಯ ತಂಗಾಳಿಯೂ ಬೆಚ್ಚಗಾಯಿತು.

ರಾತ್ರಿಯಾಯಿತು, ಬೇರೆ ಯಾವುದರ ನಕಲಿ ಕಲಬೆರಕೆಗೂ ಒಗ್ಗದ, ಅಪ್ಪಟ ಕತ್ತಲೆ ಗಟ್ಟಿಯಾಗ ತೊಡಗಿತು. ಕೆಳಗೇರಿಯ ಮಂದಿಯೆಲ್ಲ ಬಾಯಿಗೆ ಬೀಗ ಜಡಿದಂತೆ ಗಪಚಿಪ ಆದರು. ಎಲ್ಲರಿಗೂ ಯಾಕೋ ತಾವೇ ಏನೋ ತಪ್ಪು ಮಾಡಿದಂಥ ಅಳುಕು. ಹರೆಯದ ಹುಡುಗರು ಕೆಲವರು ಮಾತ್ರ ಪುಂಡಿಯನ್ನು ಎಳೆದುಕೊಂಡು ಹಣಮಪ್ಪನ ಗುಡಿ ಬೈಲಿಗೆ ಬರುತ್ತ ತಮ್ಮೆದೆಯ ಖುಷಿಯನ್ನು ಅವನ ಮೈತುಂಬ ಮೆತ್ತಿದರು. ಮಲ್ಲಣ್ಣ ತಮ್ಮನ ಮೈದಡವಿದ. ನೋಕರಿ ಸಿಕ್ಕ ಕೆಳಗೇರಿಯ ಎಲ್ಲರೂ ಒಂದೇ ದಿನ ತಮ್ಮ ಮಂದಿರದ ಕೆಲಸಕ್ಕೆ ಹಾಜರಾಗಲು ನಿರ್ಧರಿಸಿದರು.

ನಾಳೆಯೇ ಮುಂಜಾನೆ ಪುಂಡಿ ಮಹಾಲಕ್ಷ್ಮಿಯ ಗುಡಿಯ ಪೂಜೆಗೆ ನಿಲ್ಲಬೇಕು. ಹಿಂದಿನ ರಾತ್ರಿಯೆಲ್ಲ ಕೆಳಗೇರಿಯಲ್ಲಿ ಎಲ್ಲರ ಗುಡಿಸಲುಗಳು ಸಾರಣೆ ಕಾರಣೆ ಕಂಡುವು. ಅಂದು ರಾತ್ರಿ ಯಾರೂ ಸೇಂದಿ ಕುಡಿಯಲಿಲ್ಲ. ಪುಂಡಿಯಂತೂ ಆರ್ಡರ ಕಾಗದ ಬಂದಾಗಿನಿಂದಲೂ ಕುಡಿಯುವುದನ್ನು ಬಿಟ್ಟಿದ್ದ. ಕಾಳಿಯ ಮಗ್ಗುಲಿನಿಂದಲೂ ದೂರವಿದ್ದ. ಭೋಳೆತನದ ಈ ಕೆಳಜಾತಿಯ ಮಂದಿ ಮಹಾಲಕ್ಷ್ಮಿ ದೇವಿಗೆ ಹೆದರಿ ಆ ರಾತ್ರಿಯಂತೂ ಯಾರೂ ಜೋಗಿಣಿ, ಪರಹೆಂಗಸರಿರಲಿ, ಸ್ವಂತ ತಮ್ಮ ಹೆಂಡಿರ ಹಾಸಿಗೆಗೂ ಹೋಗದೆ ಮಡಿ ಪಾಲಿಸಿದರು. ಮರಗವ್ವ ದೇವತೆಯ ಮಾತು ಬೇರೆಯಿತ್ತು. ಅವಳು ಅವರಿಗೆ ತಲೆತಲಾಂತರದಿಂದ ಗೊತ್ತು. ಆದರೆ ಈ ಮೇಲಿನ ಕುಲದ ದೇವತೆ ಮಹಾಲಕ್ಷ್ಮಿ ತೀರ ಅಪರಿಚಿತಳು. ಹೇಗೋ ಏನೋ...

ಹರೆಯ ಮೈಹೊಕ್ಕು, ದಾಸವಾಳದ ಗಿಡದ ತುಂಬ ಹೂ ಅರಳಿದಂತೆ ಶಿವಳ್ಳಿಯ ಪೂರುವ ಆಕಾಶವೆಲ್ಲ ಕುಂಕುಮ ಚೆಲ್ಲಾಡಿತು. ಗಿಡಗಂಟೆಯ ಕೊರಳುಗಳು ಹಕ್ಕಿದನಿಯಲ್ಲಿ ಶುಭ ಬೆಳಗು ಹಾಡಿದುವು. ಪುಂಡಿ ಎರಡೆರಡು ಸಲ ಹೊಳೆಯಲ್ಲಿ ಮುಳುಗೆದ್ದು, ಹೊಸ ಪಂಚೆಯುಟ್ಟು, ಹೆಗಲಿಗೊಂದು ಕೆಂಬಣ್ಣದ ಅಗ್ಗದ ಟವೆಲು ಹಾಕಿಕೊಂಡು ಹಾಲು ಸಕ್ಕರೆಯ ಬಟ್ಟಲಿನೊಂದಿಗೆ ಮಹಾಲಕ್ಷ್ಮಿ ಗುಡಿಗೆ ಬಂದ. ಪೊಲೀಸ ಇನ್ಸ್‌ಪೆಕ್ಟರ್ ಶಿವರಾಮ್ ಮುಂದೆ ಬಂದು ಗರ್ಭಗುಡಿಯ ಬಾಗಿಲು ತೆರೆದು ನಿಂತ, ಪುಂಡಿ ಬಾಗಿ ಹೊಸ್ತಿಲಿಗೆ ಹಣೆಯಿಟ್ಟು ಒಳಬಂದ. ಕಪ್ಪುಕಲ್ಲಿನಲ್ಲಿ ಕಡೆದ ಮಹಾಲಕ್ಷ್ಮಿಯ ಮುಖ ನಂದಾದೀಪದಲ್ಲಿ ಥಳಥಳಿಸುತ್ತ ನಗೆಬೀರಿತು.

ಲಿಂಗಾಯಿತರ ಬಸಲಿಂಗವ್ವ, ಬುಟ್ಟಿ ತುಂಬ ಹೂ ಹರಿದು, ಹಾರ ಕಟ್ಟಿ ತಂದಿಟ್ಟಳು. ಮಂದಿರದ ಆವಾರದ ಕಸ ಗುಡಿಸಲು ಆಚಾರಿ ಬಂದಿರಲಿಲ್ಲವಾಗಿ ಅವಳೇ ಲಗುಬಗೆಯಿಂದ ಕಸ ಗುಡಿಸಿ, ನೀರು ಹಾಕಿದಳು. ಅಷ್ಟರಲ್ಲಿ ಪುಂಡಿಯ ಪೂಜೆ ಮುಗಿಯಿತು. ತನಗೆ ತಿಳಿದಂತೆ ಅವನು ದೇವಿಗೆ ಸೀರೆಯುಡಿಸಿ, ಸಿಂಗಾರ ಮಾಡಿದ್ದ. ಕುಂಕುಮ ಅರಿಶಿಣ ಲೇಪಿಸಿದ್ದ. ನೂರು ಸಲ ಅವಳಿಗೆ ಮನದೊಳಗೇ ವಂದಿಸುತ್ತ 'ಏನಾದ್ರೂ ಚೂಕ್ ಆದ್ರ ಮಾಫ ಮಾಡು ನನ್ನವ್ವಾ...' ಎಂದು ಕಣ್ಣು ತುಂಬಿ ಅಂಗಲಾಚಿದ್ದ.

ಪೂಜೆ ಮುಗಿಯಿತು. ಗಂಟೆ ಬಾರಿಸಿ ಮಂಗಳಾರತಿಯ ತಟ್ಟೆ ಹಿಡಿದುಕೊಂಡು ಹೊರಬಂದು ನೋಡುತ್ತಾನೆ. ಎಲ್ಲ ಕಡೆ ತನ್ನದೇ ಕೆಳಗೇರಿಯ ಕಪ್ಪು ಕುಲದ ಮಂದಿಯ ಮುಖಗಳೇ. ಎಲ್ಲ ಕಡೆ ಕಣ್ಣಗಲಿಸಿ ದಿಟ್ಟಿಸಿದ. ಒಂದಾದರೂ ಮ್ಯಾಗೇರಿಯ, ಮೇಲಿನ ಕುಲದ ಮಂದಿಯ ಮಾರಿ ಕಾಣಲಿಲ್ಲ. ಅವನು ಕ್ಷಣಕಾಲ ಕಂಗಾಲಾದ. ಇದ್ದಬಿದ್ದ ಧೈರ್ಯ ಕುಸಿಯಿತು, ಒಮ್ಮೆ ತನ್ನ ಮಂದಿಯನ್ನು ಮತ್ತೊಮ್ಮೆ ಗರ್ಭಗುಡಿಯಲ್ಲಿಯ ಮಹಾಲಕ್ಷ್ಮಿಯ ಮುಖವನ್ನು ಮಿಟಿಮಿಟಿ ನೋಡಿದ. ಅವಳೇನು ಮಹಾಲಕ್ಷ್ಮಿಯೋ ಮರಗವ್ವನೋ ಅನ್ನೋದು ಒಂದು ಗಳಿಗೆ ಅವನಿಗೆ ತಿಳಿಯಲಿಲ್ಲ. ಮರುಗಳಿಗೆ ಎಲ್ಲರಿಗೂ ಮಂಗಳಾರತಿಯ ತಟ್ಟೆಕೊಟ್ಟು ಒಳಬಂದು ತಟ್ಟೆ ಕೆಳಗಿಟ್ಟವನೇ ಮಹಾಲಕ್ಷ್ಮಿಯ ಮೂರ್ತಿಯ ಪಾದಗಳನ್ನಪ್ಪಿಕೊಂಡು ಕುಸಿದು ಬಿದ್ದು ಹಸುಗೂಸಿನಂತೆ ಬಿಕ್ಕಿಬಿಕ್ಕಿ ಅಳತೊಡಗಿದ. ಮರುನಿಮಿಷ ಹುಚ್ಚು ಆವೇಶದಿಂದ ಗಸಕ್ಕನೆ ಎದ್ದು ನಿಂತ. ಅವನ ಕಣ್ಣುಗಳ ಕೆಂಪಿನಲ್ಲಿ ಎಂಥದೋ ನಿಶ್ಚಯ ರೂಪುಗೊಂಡಿತ್ತು. ಧಡಧಡನೆ ದೃಢ ಹೆಜ್ಜೆಗಳಿಡುತ್ತ ಹೊರಬಂದ. ಆಗಲೇ ಜನರೆಲ್ಲ ಹೊರಟು ಹೋಗಿದ್ದರು. ಪುಂಡಿ ಸಡಸಡನೆ ಹೊರಬಂದ, ಮುಂದಿನ ಮಹಾದ್ವಾರದ ಬಳಿ ಪೊಲೀಸ ಪೇದೆಗಳಿಬ್ಬರೊಂದಿಗೆ ಇನ್ಸ್‌ಪೆಕ್ಟರ್ ಶಿವರಾಮ್ ನಿಂತಿದ್ದ. ಪುಂಡಿ ಮಾತಾಡಿದ.

"ನಡೆಯಿರಿ ಇನ್ಸ್‌ಪೆಕ್ಟರ್ರೇ... ದೇವಿಯ ವಸ್ತ್ರ, ಬಂಗಾರದ ಒಡವೆಗಳೆಲ್ಲ ಹಿಂದಿನ ಪೂಜಾರಿಯಾಗಿದ್ದ ಆಚಾರಪ್ಪನ ಸುಪರ್ದಿನಲ್ಲೇ ಇವೆ. ಅವನಿಂದ ಮೊದಲು ಛಾರ್ಜು ತಗೋತಿನಿ, ನೀವು ನನ್ನ ಜೋಡಿ ಬರ್ಬೇಕು... ಬರ್ತೀರಲ್ಲ?" "ನಿಮಗೆ ಎಲ್ಲ ರೀತಿಯಿಂದಲೂ ಸಹಕರಿಸಬೇಕೆಂದೇ ಕಲೆಕ್ಟರ್ ಸಾಹೇಬರ ಅಪ್ಪಣೆಯಾಗಿದೆ. ನಡೆಯಿರಿ ಪೂಜಾರಿಗಳೇ... ಬರ್ತೀನಿ..."

ಪುಂಡಿ ಪೂಜಾರಿಯ ವೇಷದಲ್ಲಿಯೇ ಸಡಸಡನೆ ಆಚಾರಪ್ಪನ ಮನೆಯ ಕಡೆಗೆ ದಾಪುಗಾಲು ಹಾಕಿದನು. ಪೊಲೀಸ ಅಧಿಕಾರಿ ಪೇದೆಗಳೊಂದಿಗೆ ಜೊತೆಗೂಡಿದ. ಮುಂದೆ ನಡೆದಂತೆಲ್ಲ ಕೆಳಗೇರಿಯ ಬಿಸಿ ರಕ್ತದ ಹಸಿ ಹರೆಯದ ಅವನ ವಾರಿಗೆಯ ಗೆಳೆಯರು ಗುಂಪು ಗುಂಪಾಗಿ ಅವನೊಂದಿಗೆ ಹೆಜ್ಜೆಹಾಕತೊಡಗಿದರು. ಆಚಾರೆಪ್ಪನ ಮನೆಗೆ ಹೋಗುತ್ತ, ಹೋಗುತ್ತ ಗುಂಪು ದೊಡ್ಡದಾಗ ತೊಡಗಿತು. ಮ್ಯಾಗೇರಿಯ ಕೆಲವೇ ಮಂದಿಯ ಕೆಲವೇ ಮನೆಗಳೆಲ್ಲ; ಶೂದ್ರರ ಕಾಲ್ತುಳಿತದಿಂದೆದ್ದ ಮಣ್ಣು ಧೂಳಿನಿಂದ ಮುಚ್ಚಿಹೋಯಿತು. ಅವರು ಆಚಾರಿಯ ಮನೆಗೆ ಬಂದಾಗ ಮನೆ ಬಾಗಿಲಿಗೆ ಬೀಗ ಹಾಕಿತ್ತು! ಆಚಾರಿ ಮಹಾಲಕ್ಷ್ಮಿ ದೇವಿಯ ಆಭರಣಗಳೊಂದಿಗೆ ಹಿಂದಿನ ರಾತ್ರಿಯೇ ಪರಾರಿಯಾಗಿದ್ದ.

ಡಾ॥ ಗೀತಾ ನಾಗಭೂಷಣ
'ಕಾವ್ಯಶ್ರೀ', ನಂ. ೧೮, ಸ್ವಸ್ತಿಕ್ ಕಾಲೋನಿ
ಸೇಡಂ ರಸ್ತೆ, ಬಿಳಿಗುಂಬಿ ತೋಟ, ರಿಂಗ್ ರಸ್ತೆ
ಕಲಬುರಗಿ – ೫೮೫ ೧೦೫

## ಅಭಿನಂದನೆಗಳು...

ಕಲಬುರ್ಗಿಯ ಸೇಡಂನ ಮಾತೋಶ್ರೀ ಮಹಾದೇವಮ್ಮ ನಾಗಪ್ಪ ಮುನ್ನೂರು ಪ್ರತಿಷ್ಠಾನದವರು ೧೭ನೇ ವರ್ಷದ ಸಂಭ್ರಮದ ಹಿನ್ನೆಲೆಯಲ್ಲಿ ನೀಡುವ ರಾಜ್ಯಮಟ್ಟದ 'ಅಮ್ಮ ಗೌರವ ಪುರಸ್ಕಾರ'ಕ್ಕೆ ನವಕರ್ನಾಟಕ ಪ್ರಕಾಶನದ ಶ್ರೀ ಎ. ರಮೇಶ ಉಡುಪ, ಲೇಖಕಿ ಡಾ॥ ವಿನಯಾ ಜಿ. ವಕ್ಕುಂದ, ಹಿರಿಯ ಲೇಖಕ ಡಾ॥ ಚನ್ನಣ್ಣ ವಾಲೀಕಾರ, ವೈದ್ಯ ಲೇಖಕ ಡಾ॥ ಎಸ್. ಎಸ್. ಗುಬ್ಬಿ ಮತ್ತು ಡಾ॥ ರಮೇಶ ಐನಾಪುರ ಆಯ್ಕೆಯಾಗಿದ್ದಾರೆ.

ಹಾಗೆಯೇ ಶ್ರೀಮತಿ ಹೆಚ್. ಆರ್. ಸುಜಾತಾ ಅವರ 'ನೀಲಿ ಮೂಗಿನ ನತ್ತು' (ನವಕರ್ನಾಟಕ ಪ್ರಕಾಶನ) ಸೇರಿದಂತೆ ಒಟ್ಟು ಐದು ಸಾಹಿತಿಗಳ ಕೃತಿಗಳು 'ಅಮ್ಮ ಪ್ರಶಸ್ತಿ'ಗೆ ಆಯ್ಕೆಯಾಗಿವೆ.







**ನರವಾನರ** (ಕಾದಂಬರಿ)

*ಡಾ॥ ಶರಣಕುಮಾರ ಲಿಂಬಾಳೆ*

**ಪುಟ : ೨೩೬**

**ಬೆಲೆ : ರೂ. ೨೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ನಮ್ಮ ದೇಶದ ಇಂದಿನ ಅಧಿಕಾರಶಾಹಿ ಮತ್ತು ಭ್ರಷ್ಟಾಚಾರಗಳ ಕಥಾನಕ. ಸಂಘಟನೆ – ಗುಂಪುಗಾರಿಕೆ – ಜಗಳ – ಗಲಾಟೆ – ದೊಂಬಿ – ಹೋರಾಟ – ದಂಗೆ – ಮಾರಾಮಾರಿ – ಕೊಲೆ – ಗೋಲಿಬಾರ್ – ಚಳಚಳಿ – ಇವೆಲ್ಲವುಗಳ ಸುತ್ತ ಗಿರಕಿ ಹೊಡೆಯುವ ಇಂದಿನ ರಾಜಕೀಯವನ್ನೇ ಬಿಂಬಿಸುವ ಮತ್ತು ರೌಡಿಸಂ ಮೇರೆ ಮೀರಿ ವಿಜೃಂಭಿಸುತ್ತ ಮೇಲುಗೈ ಪಡೆದಿರುವ ಚಿತ್ರಣ. ಮೆರವಣಿಗೆ, ಧರಣಿ, ಸತ್ಯಾಗ್ರಹಗಳಿಗಷ್ಟೇ ಸೀಮಿತವಾಗಿದ್ದರೆ ಸರಕಾರ ಸ್ಪಂದಿಸುತ್ತಿಲ್ಲೆಂದು ಕಲ್ಲೆಸೆತ – ಬಸ್‌ಸುಡುವುದು – ಟೈರ್‌ಗೆ ಬೆಂಕಿ, ರಸ್ತೆ ಬಂದ್, ಆಸ್ತಿ ಹಾನಿ, ಮಾತೆತ್ತಿದರೆ ದಿನವೂ ಒಂದಲ್ಲಾ ಒಂದು ಬಂದ್ ಆಚರಣೆ – ಮುಂತಾಗಿ ಅಪಾಯಕಾರಿ ದಾರಿ ಹಿಡಿದು ನೈಜ ಹೋರಾಟಕ್ಕೆ ಕುತ್ತು ಬಂದಿದೆ. ಪುಂಡ ಪೋಕರಿಗಳು ಹೋರಾಟದ ಹೆಸರು ಕೆಡಿಸಿದ್ದಾರೆ. ಕಾಲೇಜು ಕಲಿಯಲು ನಗರಕ್ಕೆ ಬಂದು ಹೋರಾಟಗಳಲ್ಲಿ ತೊಡಗಿ ಜನಸೇವೆಯೆಂದು ರಾಜಕೀಯ ಪ್ರವೇಶಿಸಿ ವ್ಯವಸ್ಥೆಯ ಹಿಡಿತದಲ್ಲಿ ನಲುಗಿ ಹೋದವರು ಈ ಕಥೆಗಳಲ್ಲಿದ್ದಾರೆ. ನಾಮ್‌ಕೆವಾಸ್ತೆ ಹುದ್ದೆ ಅಲಂಕರಿಸಿ ಸೂತ್ರದ ಬೊಂಬೆಗಳಾದವರಿದ್ದಾರೆ. ದಲಿತರು – ಮುಸ್ಲಿಮರು – ಹಿಂದೂಗಳು ತಮ್ಮ ಹಟ ಬಿಡಲೊಲ್ಲರು. ಹೊಡಿ – ಬಡಿ – ಕಡಿ ಮತ್ತು ಮುಯ್ಯಿಗೆ ಮುಯ್ಯಿ ಎಂಬ ಸೂತ್ರವೇ ಇಲ್ಲಿ ಪ್ರಧಾನ. ಮೇಲ್ನೋಟಕ್ಕೆ ಈ ದೇಶ ಜಾತ್ಯತೀತವಾಗಿದ್ದರೂ ಬೂದಿ ಮುಚ್ಚಿದ ಕೆಂಡದಂತೆ ಜಾತಿ ವ್ಯವಸ್ಥೆ ಸುಪ್ತವಾಗಿದ್ದು ಅಪಾಯಕಾರಿಯಾಗಿ ಬೆಳೆದಿದೆ.*

**ಜಗವ ನಡುಗಿಸಿದ ಆ ಹತ್ತು ದಿನ** *ಜಾನ್‌ರೀಡ್*

*ರೂಪಾಂತರ : ಡಾ॥ ಬಿ. ಆರ್. ಮಂಜುನಾಥ್*

**ಪುಟ : ೨೩೨** **ಬೆಲೆ : ರೂ. ೧೮೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧




*ಲೋಕದಲ್ಲಿ ಅಧರ್ಮ ಹೆಚ್ಚಾದಾಗ ಪರಮಾತ್ಮ ಅವತರಿಸಿ ಸರಿಮಾಡುತ್ತಾನೆನ್ನುವುದು ಪುರಾಣದ ಒಂದು ಬೊಗಳೆ. ಅನ್ಯಾಯ – ದೌರ್ಜನ್ಯ – ಶೋಷಣೆ ಮೇರೆ ಮೀರಿದಾಗ ಯುಗಪುರುಷನೊಬ್ಬ ಹುಟ್ಟಿ ಬಂದು, ಜನರ ತಾಳ್ಮೆ ಕಟ್ಟೆಯೊಡೆದಂತೆ ವಿಪ್ಲವ ಸಂಭವಿಸುತ್ತದೆ. ಕ್ರಾಂತಿಯ ಬಿರುಗಾಳಿಗೆ ಅರಸೊತ್ತಿಗೆಗಳು, ಶೋಷಕರು, ಸಾಮ್ರಾಜ್ಯಶಾಹಿಗಳು ತತ್ತರಿಸಿ ನೆಲಕಚ್ಚುತ್ತವೆ. 1917ರ ರಷ್ಯನ್ ಅಕ್ಟೋಬರ್ ಕ್ರಾಂತಿ ನಡೆದದ್ದೂ ಹಾಗೆಯೇ. ತ್ಸಾರ್ ಸಲ್ತಾನನ ಆಡಳಿತ ವೈಖರಿಗೆ ಬೇಸತ್ತ ಜನತೆ ಬೋಲ್ಶೆವಿಕ್ ಪಕ್ಷದ ನಾಯಕ ಲೆನಿನ್ ನೇತೃತ್ವದಲ್ಲಿ ಒಗ್ಗೂಡಿ ಹೋರಾಟ ನಡೆಸಿ ಕಡೆಗೂ ಸಫಲವಾಗಿ ಜನತೆಯ ಸರಕಾರ ಅಧಿಕಾರಕ್ಕೆ ಬಂದಿದ್ದು ಜಗತ್ತೇ ಬೆರಗಾಗಿ ನೋಡುವಂತಾಯಿತು. ಆ ಕ್ರಾಂತಿಯ ಕೊನೆಯ ಹಂತದಲ್ಲಿ ಅಮೆರಿಕದ ಕಮ್ಯುನಿಸ್ಟ್ ಪಕ್ಷದ ಸದಸ್ಯ, ಪತ್ರಕರ್ತ ಜಾನ್ ರೀಡ್ ಹೋರಾಟದ ಸ್ಥಳದಲ್ಲಿದ್ದು ಕಣ್ಣಾರೆ ಕಂಡು ದಾಖಲಿಸಿ, ಮುಂದೆ **ಟೆನ್ ಡೇಸ್ ದಟ್ ಶೂಕ್ ದ ವರ್ಲ್ಡ್** ಎಂಬ ಆಂಗ್ಲ ಕೃತಿ ರಚಿಸಿದ್ದಾನೆ. ಕ್ರಾಂತಿ ನಡೆದ ನೂರನೇ ವರ್ಷದ ನೆನಪಿಗಾಗಿ ಕನ್ನಡಕ್ಕೆ ಅನುವಾದವಾಗಿ ಬಂದಿದೆ. ಇಂಥ ಅಪೂರ್ವ ಐತಿಹಾಸಿಕ ಸಂದರ್ಭದ ಚಿತ್ರಣವನ್ನು ಓದುವುದು ಕ್ರಾಂತಿಯ ಪ್ರತ್ಯಕ್ಷ ವರದಿಯನ್ನೋದಿದಂತೆ ! ಒಂದು ದುರಾಡಳಿತವನ್ನು ಕಿತ್ತೆಸೆದು ಜನ ಪ್ರಾತಿನಿಧ್ಯವಿರುವ ಸೋವಿಯೆತ್‌ಗಳನ್ನು ರಚಿಸಿ ಎಪ್ಪತ್ತು ವರ್ಷಗಳಷ್ಟು ಸುದೀರ್ಘ ಕಾಲ ಆಡಳಿತ ನಡೆಸಿದ ಕಮ್ಯುನಿಸಂ ತತ್ವಗಳು ಇಂದು ಅಂಗೀಕಾರಾರ್ಹವಾಗಿವೆ. ಈ ಕ್ರಾಂತಿಯ ಇತಿಹಾಸ ಓದಿದಾಗ ಇದು ವೇದ್ಯವಾಗುತ್ತದೆ.*




**ಕುಟುಂಬ, ಸ್ನೇಹಿತರು ಮತ್ತು ದೇಶ** (ಆತ್ಮಕತೆ)

*ವಿಯೆಟ್ನಾಮಿ ಮೂಲ: ನುಯೇನ್ ಥೀ ಬಿನ್*

*ಕನ್ನಡಕ್ಕೆ : ಜಿ. ಎಸ್. ನಾಗೇಂದ್ರನ್*

**ಪುಟ : ೨೫೬** **ಬೆಲೆ : ರೂ. ೨೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು–೫೬೦೦೦೧

*ಈ ಪುಸ್ತಕದ 210ನೇ ಪುಟದಲ್ಲಿನ ಒಂದು ಹಾಡು ಹೀಗೆ ಮುಕ್ತಾಯವಾಗಿದೆ: "ವಿಯೆಟ್ನಾಮಿನ ಕೆಚ್ಚೆದೆ ಅಮೆರಿಕದ ಬಾಂಬುಗಳಿಗಿಂತ ಪ್ರಬಲ" ನಿಜ! ಭೂಪಟದಲ್ಲಿ ಹುಡುಕಿ ಗುರುತಿಸಬೇಕಾದಷ್ಟು ತೀರಾ ಪುಟ್ಟ ರಾಷ್ಟ್ರ ವಿಯೆಟ್ನಾಮಿನ ಮೇಲೆ ಬಹುದೊಡ್ಡ ಸಾಮ್ರಾಜ್ಯಶಾಹಿ ಅಮೆರಿಕ ತನ್ನ ದೌರ್ಜನ್ಯ ಮೆರೆದು ಬಾಂಬು ಸ್ಫೋಟಿಸಿದ್ದು, ದಮನಿಸಿದ್ದು ಅಕ್ಷಮ್ಯವೇ. ಅದು ಗುಬ್ಬಿಯ ಮೇಲಿನ ಬ್ರಹ್ಮಾಸ್ತ್ರ. ರಾಷ್ಟ್ರ ಕಿರಿದಾದರೂ ದೇಶ ಪ್ರೇಮ ಹಿರಿದಾಗಿತ್ತು. ಮೊದಲು ಫ್ರಾನ್ಸಿನ ವಸಾಹತುವಾದ – ಮುಂದೆ ಅಮೆರಿಕದ ದುರಾಕ್ರಮಣ ಎರಡನ್ನೂ ಇಪ್ಪತ್ತಕ್ಕೂ ಹೆಚ್ಚು ವರ್ಷ ಸಹಿಸಿ ರಾಷ್ಟ್ರೀಯ ವಿಮೋಚನಾ ರಂಗ ರಚಿಸಿ ಹೋರಾಟ ನಡೆಸಿದ್ದು ಎಲ್ಲ ದೇಶಗಳ ಸ್ವಾತಂತ್ರ್ಯ ಪ್ರೇಮಿಗಳಿಗೆ ಮಾದರಿ. ಅದನ್ನು ಸರಿಯಾದ ದಾರಿಯಲ್ಲಿ ನಡೆಸಿ ಇಬ್ಭಾಗವಾಗಿದ್ದ ಉತ್ತರ – ದಕ್ಷಿಣ ವಿಯೆಟ್ನಾಮನ್ನು ಒಗ್ಗೂಡಿಸಿ ವಿಮೋಚನೆಗೊಳಿಸಿದ್ದು ಒಬ್ಬ ದಿಟ್ಟ ಚಾಣಾಕ್ಷ ಮಹಿಳೆ ನುಯೆನ್ ಥೀ ಬಿನ್. ದೇಶಕ್ಕಾಗಿ ತನ್ನ ಪತಿ, ಮಕ್ಕಳು, ಬಂಧುಗಳು ಎಲ್ಲರಿಂದ ದೂರವಿದ್ದು ಹೋರಾಟದ ದಿಕ್ಸೂಚಿಯಾಗಿ ಸೇನೆಯನ್ನು ಮುನ್ನಡೆಸಿದ್ದು ಈಕೆಯ ಸಾಹಸಗಾಥೆ. ಅಮೆರಿಕದ ನೀತಿಯನ್ನು ಖಂಡಿಸುತ್ತ ಇತರ ರಾಷ್ಟ್ರಪ್ರಮುಖರನ್ನೆಲ್ಲ ಭೇಟಿ ಮಾಡಿ ವಿಯೆಟ್ನಾಮಿನ ಪರ ಸಹಾನುಭೂತಿಗಳಿಸುತ್ತ ಅಮೆರಿಕದ ವಿರುದ್ಧ ಜಗತ್ತೇ ದನಿ ಎತ್ತುವಂತೆ ಮಾಡಿದ್ದು ಈಕೆಯ ಚಾಣಾಕ್ಷತನಕ್ಕೆ ಸಾಕ್ಷಿ. ಅಮೆರಿಕ ಕಾಲ್ತೆಗೆಯಲೇಬೇಕಾದ ಒತ್ತಡ ಸೃಷ್ಟಿ ಮಾಡಿದ ಈಕೆಯ ಆತ್ಮಕಥನ ಈ ಕೃತಿ. ದೇಶಪ್ರೇಮಿಗಳ ಆತ್ಮಕಥನದ ತುಂಬ ಆ ದೇಶದ ಚರಿತ್ರೆ ಹಾಸು ಹೊಕ್ಕಾಗಿರುತ್ತದೆ. ವಿರೋಚಿತ ಹೋರಾಟಮಯ ಬದುಕಿನ ಚಿತ್ರಣ ಇಲ್ಲಿದೆ.*

– **ಇಂದಿರಾ ಕುಮಾರಿ,** ಯಶವಂತಪುರ, ಬೆಂಗಳೂರು – ೫೬೦ ೦೨೨

**ಕಾವ್ಯ ಕೌತುಕ** (ವಿಮರ್ಶಾ ಲೇಖನಗಳು) *ಜಿ. ಎಸ್. ವಡಗಾಂವಿ*

**ಪುಟ : ೧೪೮** **ಬೆಲೆ : ರೂ. ೧೨೫**

**ನಿವೇದಿತ ಪ್ರಕಾಶನ,** ಬೆಂಗಳೂರು




*ಕಾವ್ಯವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿಸಿಕೊಂಡಿರುವ ಹಿರಿಯ ಕವಿ ಜಿ. ಎಸ್. ವಡಗಾಂವಿಯವರು ಹೊರತಂದಿರುವ 'ಕಾವ್ಯ ಕೌತುಕ' ವಿಮರ್ಶಾ ಸಂಕಲನದಲ್ಲಿ ಕಾವ್ಯ ಮತ್ತು ಕಾವ್ಯ ಮೀಮಾಂಸೆಗೆ ಸಂಬಂಧಪಟ್ಟ ಬಹುಮುಖ್ಯವಾದ ಲೇಖನಗಳಿವೆ. ಪ್ರಸ್ತುತ ಕೃತಿಯಲ್ಲಿ ಹತ್ತೊಂಬತ್ತು ಲೇಖನಗಳಿದ್ದು, ಕಾವ್ಯದ ಮೂಲ ಸಾಮಗ್ರಿಯಾದ ಲೋಕಾನುಭವಗಳ ಬಗ್ಗೆ, ಕಾವ್ಯದ ಗುಣಲಕ್ಷಣಗಳು ಮತ್ತು ಕವಿಯ ಎದೆಯೊಳಗೆ ಅದು ಸಂಭವಿಸುವ ಬಗ್ಗೆ, ಮಹಾಕಾವ್ಯದ ಸ್ವರೂಪ–ಲಕ್ಷಣಗಳು ಹಾಗೂ ಕನ್ನಡದಲ್ಲಿ ಇತ್ತೀಚಿನವರೆಗೆ ಬಂದಿರುವ ಮಹಾಕಾವ್ಯಗಳ ಬಗ್ಗೆ ಸವಿಸ್ತಾರವಾಗಿ ತಮ್ಮದೇ ಹೊಸ ಆಲೋಚನೆಗಳ ನೆಲೆಯಲ್ಲಿ ನಿರೂಪಿಸಿದ್ದಾರೆ. ಇವುಗಳೊಂದಿಗೆ, ಹೆಸರಾಂತ ಕವಿಗಳ ಕವನ ಸಂಕಲನಗಳ ಕುರಿತಾದ ವಿಮರ್ಶಾ ಲೇಖನಗಳೂ ಇವೆ. ಅವುಗಳಲ್ಲಿ ಸಿದ್ಧರಾಜ ಪೂಜಾರಿಯವರ 'ಗೀತ–ಗಾಂಧಾರ' ಕವನ ಸಂಕಲನದಲ್ಲಿರುವ ಕವಿತೆಗಳು ಬಿಂಬಿಸುವ ವಿರಹದ ಉದ್ವೇಗ, ತಳಮಳ, ಲೌಕಿಕದ ದುಃಖ ದುಮ್ಮಾನಗಳ ಬಗ್ಗೆ, ಶ್ರೀ ಸಿದ್ಧೇಶ್ವರ ಶ್ರೀಗಳ 'ಮೌನ ಲೋಕದ ಹಾಡುಗಳು' ಕೃತಿಯಲ್ಲಿ ಮುಕ್ತ ಛಂದಸ್ಸಿನಲ್ಲಿರುವ ಮೌನ–ಧ್ಯಾನದ ರಚನೆಗಳ ಬಗ್ಗೆ, ಡಾ. ಅಶೋಕ ನರೋಡೆಯವರ ಸಮಗ್ರ ಕವನ ಸಂಕಲನ 'ನದಿಯ ಹಂಬಲ'ದಲ್ಲಿರುವ ಕವನಗಳ ಬಗ್ಗೆ ಪರ–ವಿರೋಧಗಳ ಮಧ್ಯದ ಗೆರೆಯಲ್ಲಿ ನಿಂತು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.*

*– **ಕಲ್ಲೇಶ್ ಕುಂಬಾರ್,** ರಾಯಭಾಗ ತಾ॥, ಬೆಳಗಾವಿ ಜಿಲ್ಲೆ, ಹಾರೂಗೇರಿ – ೫೯೧ ೨೨೦*

# ಆಂಡ್ರೆ ಮಾಲ್ರೋ ಕಂಡ ನೆಹರು

೨೦ನೆಯ ಶತಮಾನದ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬರಾದ ಫ್ರಾನ್ಸಿನ ಆಂಡ್ರೆ ಮಾಲ್ರೋ (೧೯೦೧–೧೯೭೬) ಆ ಕಾಲದ ಮಹತ್ವಪೂರ್ಣ ರಾಜಕೀಯ ಘಟನೆಗಳಲ್ಲಿ ಭಾಗವಹಿಸಿದ್ದೇ ಅಲ್ಲದೆ ಅವುಗಳ ಬಗ್ಗೆ ಕಾದಂಬರಿಗಳನ್ನು ಸೃಷ್ಟಿಸಿ ಬರಹಲೋಕದಲ್ಲೂ ಖ್ಯಾತಿಯನ್ನು ಗಳಿಸಿದರು. ೧೯೦೧ರಲ್ಲಿ ಪ್ಯಾರಿಸ್‌ನಲ್ಲಿ ಹುಟ್ಟಿದ ಮಾಲ್ರೋ ಚಿಕ್ಕ ವಯಸ್ಸಿನಲ್ಲೇ ಕಾಂಬೋಡಿಯ ಮತ್ತು ಇತರ ಇಂಡೋಚೀನಾ ಪ್ರದೇಶಗಳಿಗೆ ಹೋಗಿ ಪೂರ್ವದ ಪರಿಚಯ ಮಾಡಿಕೊಂಡು ತಮ್ಮ ೨೫ನೆಯ ವಯಸ್ಸಿನಲ್ಲಿ ಮೊದಲ ಕಾದಂಬರಿ 'ಟೆಂಟೇಷನ್ ಆಫ್ ದಿ ವೆಸ್ಟ್' ರಚಿಸಿದರು. ಅನಂತರ ಚೀನಾದಲ್ಲಿ ನಡೆಯುತ್ತಿದ್ದ ಕ್ರಾಂತಿಯಲ್ಲಿ ಭಾಗವಹಿಸಿದ. ಆ ಸಮಯದಲ್ಲಿ ಬರೆದ 'ಮ್ಯಾನ್ಸ್ ಫೇಟ್' 'ಅನೇಕ ಪ್ರಶಸ್ತಿಗಳನ್ನು ಗಳಿಸಿತು; ಕ್ರಾಂತಿಯ ಸಮಯದಲ್ಲಿ ವಿವಿಧ ಮನೋಭಾವಗಳನ್ನು ಹೊಂದಿರುವ ಕ್ರಾಂತಿಕಾರರ ಮನಸ್ಸಿನ ದ್ವಂದ್ವಗಳು ಈ ಕಾದಂಬರಿಯ ಕಥಾವಸ್ತುವಾಗಿದ್ದಿತು. ೧೯೩೦ರ ದಶಕದಲ್ಲಿ ಸ್ಪೇನಿನಲ್ಲಿ ನಡೆಯುತ್ತಿದ್ದ ಅಂತರ್ಯುದ್ಧದಲ್ಲಿ ಸರ್ವಾಧಿಕಾರಿ ಜನರಲ್ ಫ್ರಾಂಕೋ ವಿರುದ್ಧ, ಗಣರಾಜ್ಯದ ಪರ ಹೋರಾಡಿದರು. ಅದೇ ಸಮಯದಲ್ಲಿ ವಿಮಾನದ ಚಾಲಕನಾಗಿ ೬೫ ಧಾಳಿಗಳಲ್ಲಿ ಭಾಗಗೊಂಡರು (ಆ ವಿಸ್ಮಯದ ಪುಸ್ತಕ 'ಮ್ಯಾನ್ಸ್ ಹೋಪ್'). ಆನಂತರ ಫ್ರಾನ್ಸಿಗೆ ಬಂದು ಅಲ್ಲಿಯ ಸೇನಾಪಡೆಯಲ್ಲಿ ಸೇರಿಕೊಂಡು ಎರಡನೆಯ ಮಹಾಯುದ್ಧದಲ್ಲಿ ಪಾಲುಗೊಂಡು ಎರಡು ಬಾರಿ ಕಾರಾಗೃಹವಾಸ ಅನುಭವಿಸಿದರು. ನಂತರ ಫ್ರಾನ್ಸ್ ಜರ್ಮನಿಯ ಅಧೀನದಲ್ಲಿದ್ದಾಗ ಪ್ರತಿಭಟನಾ ಪಡೆಯಲ್ಲಿ ಕೆಲಸ ಮಾಡಿದರು. ಫ್ರಾನ್ಸಿನ ಮಹಾನೇತಾ ಅಧ್ಯಕ್ಷ ಚಾರ್ಲ್ಸ್ ಡಿಗಾಲ್‌ರಿಗೆ ಅವರು ಆಪ್ತರಾಗಿದ್ದು ೧೯೫೮ರಲ್ಲಿ ಆ ದೇಶದ ವಾರ್ತಾ ಪ್ರಸಾರ ಇಲಾಖೆಯ ಸಚಿವರಾದರು. ಆ ಸಮಯದಲ್ಲಿ ಅವರು ಡಿಗಾಲ್‌ರ ಪ್ರತಿನಿಧಿಯಾಗಿ ಭಾರತಕ್ಕೆ ಬಂದು ಪ್ರಧಾನಿ ನೆಹರುರನ್ನು ಭೇಟಿ ಮಾಡಿದರು. ಮಾಲ್ರೋ ಹಿಂದೆಯೂ ನೆಹರುರನ್ನು ನೋಡಿದ್ದರು. ಮುಂದೆಯೂ ಅಂತರರಾಷ್ಟ್ರೀಯ ಸಭೆಗಳಲ್ಲಿ ಸಂಧಿಸುತ್ತಿದ್ದರೋ ಏನೋ ತಿಳಿಯದು. ಆದರೆ ಅವರ ಮುಖ್ಯ ಮಾತುಕತೆ ನಡೆದಿದ್ದು ೧೯೫೮ರಲ್ಲಿ.

**ಡಾ॥ ಪಾಲಹಳ್ಳಿ ವಿಶ್ವನಾಥ್**

ಪ್ರಪಂಚದಲ್ಲಿ ಬಹಳ ಕಡೆ ಸ್ವಾತಂತ್ರ್ಯ ಸಂಗ್ರಾಮಗಳಲ್ಲಿ ಪಾಲುಗೊಂಡಿದ್ದ ಮಾಲ್ರೋರನ್ನು ನೆಹರು ಸೆಳೆದದ್ದು ಆಶ್ಚರ್ಯವೇನಲ್ಲ. ಅದಲ್ಲದೇ ಸಾಹಿತ್ಯ, ಚರಿತ್ರೆ ಮತ್ತು ಇತರೆ ಆಸಕ್ತಿಗಳು ಇಬ್ಬರಲ್ಲೂ ಇದ್ದು ಈ ಬುದ್ಧಿಜೀವಿಗಳಿಬ್ಬರ ಸ್ವಾರಸ್ಯಕರ ಭೇಟಿಯನ್ನು ಮಾಲ್ರೋರು ಕಾದಂಬರಿಯ ಧಾಟಿಯಲ್ಲಿ ಬರೆದ ತಮ್ಮ ಜೀವನಚರಿತ್ರೆಯಲ್ಲಿ ('ಆಂಟಿ ಮೆಮ್ವಾ') ವರ್ಣಿಸಿದ್ದಾರೆ. ೫೦೦ ಪುಟಗಳ ಆ ಪುಸ್ತಕದಲ್ಲಿ ಸುಮಾರು ೧/೪ ಭಾಗ ಭಾರತಕ್ಕೆ ಮೀಸಲಾಗಿದೆ. ವಿವಿಧ ಸಂಸ್ಕೃತಿಗಳಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದ ಮಾಲ್ರೋ ಎಲೆಫೆಂಟಾ, ಅಜಂತಾ, ಮಧುರೈ, ವಾರಣಾಸಿ ('ಶಿವ ನನ್ನನ್ನು ಅವನ ಸ್ಥಳಗಳಿಗೆ ಕರೆದುಕೊಂಡು ಹೋಗುತ್ತಿರುವ ಹಾಗಿದೆ! ಈಜಿಪ್ಟಿನಲ್ಲಿ ಎಷ್ಟೋ ದೊಡ್ಡ ಕೆತ್ತನೆಗಳಿದ್ದರೂ ಎಲೆಫೆಂಟಾನ ಶಿವನ (ಮಹೇಶ) ವಿಗ್ರಹದ ವಿಶೇಷ ಜನ ಅದನ್ನು ಪೂಜಿಸುವುದು') ಇತ್ಯಾದಿ ಜಾಗಗಳಿಗೆ ಹೋಗಿ ಅವುಗಳ ಬಗ್ಗೆ ಬರೆದಿದ್ದಾರೆ. ಮಾಲ್ರೋ ಹಿಂದೂ ಮತ್ತು ಬೌದ್ಧ ಧರ್ಮಗಳ ಗ್ರಂಥಗಳನ್ನು ಓದಿಕೊಂಡಿದ್ದರು. ಮಾಲ್ರೋ ಮತ್ತು ನೆಹರು ಸಂಭಾಷಣೆಗಳು ಮತ್ತು ನೆನಪುಗಳು ಒಂದೇ ವಿಷಯದ ಬಗ್ಗೆ ಇರದೆ ಅಲ್ಲಿ ಇಲ್ಲಿ ಸರಿಯುತ್ತ ಒಮ್ಮೆ ಹಿಂದೆ ಒಮ್ಮೆ ಮುಂದೆ ಹೋಗುತ್ತಿದ್ದವು. ಈ ಮಾತುಕತೆಗಳನ್ನು ಓದುತ್ತಿದ್ದರೆ ನಾವೂ ಅಲ್ಲಿ ಇದ್ದಿದ್ದರೆ ಎನ್ನಿಸುತ್ತದೆ. ಅದರ ಕೆಲವು ಭಾಗಗಳನ್ನು ಮಾತ್ರ ಇಲ್ಲಿ ನೋಡೋಣ.

ಭಾರತದ ಬಗೆಗಿನ ಅಧ್ಯಾಯ ಇಲ್ಲಿಗೆ ಅವರ ಭೇಟಿಯಿಂದ



ಪ್ರಾರಂಭವಾಗುತ್ತದೆ. ದೆಹಲಿ ಮತ್ತು ಗಾಂಧೀಜಿಯವರ ಬಗ್ಗೆ ಕೆಲವು ಪುಟಗಳಿದ್ದು ಅನಂತರ ನೆಹರುರವರ ಜೊತೆ ನಡೆದ ಮಾತುಕತೆಗಳನ್ನು ನೆನಪಿಸಿಕೊಳ್ಳುತ್ತಾರೆ :

"ನನ್ನ ಸ್ನೇಹಿತ ರಾಜಾರಾವ್‌ರಿಂದ ಭಾರತದ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದೆ. ನಮ್ಮ ರಾಯಭಾರಿಯನ್ನು ನೆಹರು ಬದಲಾಗಿದ್ದಾರಾ ಎಂದು ಕೇಳಿದಾಗ ಅವರು 'ಹೌದು, ಈಗ ಅವರಲ್ಲಿ ಹೆಚ್ಚು ತಾಳ್ಮೆ ಮತ್ತು ಸಹಿಷ್ಣುತೆ ಇದೆ' ಎಂದಿದ್ದರು. ಅವರ ಜೊತೆ ನಾನು ನೆಹರುರನ್ನು ಪಾರ್ಲಿಮೆಂಟ್ ಭವನದಲ್ಲಿ ಭೇಟಿಮಾಡಿದೆ. ನಮ್ಮ ಅಧ್ಯಕ್ಷ ಡಿಗಾಲರ ಬಗ್ಗೆ ಭಾರತದಲ್ಲಿ ಹೆಚ್ಚು ತಿಳಿದಿರಲಿಲ್ಲ. ಅದೂ ಅಲ್ಲದೆ ಇಂಡೋಚೀನಾ ಮತ್ತು ಆಲ್ಜೀರಿಯಾದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಸಂಗ್ರಾಮಗಳಿಂದ ಡಿಗಾಲ್‌ರಿಗೆ ಒಳ್ಳೆಯ ಹೆಸರಿರಲಿಲ್ಲ. ಆದ್ದರಿಂದ ನೆಹರು ಡಿಗಾಲರ ಪ್ರತಿನಿಧಿಯಾದ ನನ್ನನ್ನು ಭೇಟಿಮಾಡುತ್ತಿದ್ದದ್ದು ಎಷ್ಟೋ ಜನರಿಗೆ ಇಷ್ಟವಿರಲಿಲ್ಲ. ಮಾಧ್ಯಮದವರು ಸುಮಾರು ಮಂದಿ ಇದ್ದರು. ನಾವು ಕೋಣೆಯ ಒಳಹೋಗುತ್ತಿದ್ದಾಗ ನೆಹರು ಮತ್ತೊಂದು ಬಾಗಿಲಿನಿಂದ ಒಳಬಂದು ನನ್ನನ್ನು ಅಪ್ಪಿಕೊಂಡು ನಿನ್ನೆ ಮೊನ್ನೆ ನೋಡಿದವರ ಹಾಗೆ ಮಾತನಾಡಿಸಿದರು. "ನಿಮ್ಮನ್ನು ಮತ್ತೆ ನೋಡಲು ಸಂತೋಷವಾಗುತ್ತಿದೆ. ಹಿಂದಿನ ಬಾರಿ (ಸುಮಾರು ೨೩ ವರ್ಷಗಳ ಹಿಂದೆ) ನೀವು ಸ್ಪೇನಿನಲ್ಲಿ ಗಾಯಗೊಂಡು ಆಸ್ಪತ್ರೆಯನ್ನು ಸೇರಿ ಆಗ ತಾನೇ ಹೊರಬಂದಿದ್ದಿರಿ ...ನಾನು ಜೈಲಿನಿಂದ ಹೊರಬಂದಿದ್ದೆ." ಮಾತನಾಡುತ್ತಾ ನಾವು ಒಳ ಕೋಣೆಗೆ ಹೋದೆವು. ಅವರು ನಕ್ಕಾಗ ಒಂದು ರೀತಿಯ ಮುಗ್ಧತೆ ಇದ್ದಿತು. ಕನಸುಗಾರನ ಕಣ್ಣುಗಳು. ಆದರೂ ಒಳಗಿದ್ದ ಗಟ್ಟಿ ಮನಸ್ಸು ಆಗಾಗ್ಗೆ ಹೊರಗೆ ಇಣುಕಿ ನೋಡುತ್ತಿತ್ತು. ನಾನು ಅವರಿಗೆ ಡಿಗಾಲರ ಪತ್ರವನ್ನು ಕೊಟ್ಟೆ ; ಅದನ್ನು ಓದಿ ಕೆಳಗಿಟ್ಟು, ಇದು ನಿನ್ನ ಹೊಸ ಅವತಾರವೋ ಎನ್ನುವ ಹಾಗೆ 'ಈಗ ನೀವು ಸಚಿವರೋ' ಎಂದು ನಗುತ್ತಾ ಕೇಳಿದರು. ನಾನು ಅವರಿಗೆ ಮಲ್ಲಾರ್ಮೆ (ಆಧುನಿಕ ಫ್ರಾನ್ಸಿನ ಖ್ಯಾತ ಕವಿ) ಹೇಳುತ್ತಿದ್ದ ಬೆಕ್ಕಿನ ಕಥೆಯ ಬಗ್ಗೆ ಹೇಳಿದೆ: "ಯಾವುದೋ ಕಪ್ಪು ಬೆಕ್ಕು ಮಲ್ಲಾರ್ಮೆಯ ಬೆಕ್ಕನ್ನು 'ನೀನು ಈಗ ಏನು ಮಾಡುತ್ತಿದ್ದೀಯ' ಎಂದು ಕೇಳಿದಾಗ 'ನಾನು ಈಗ ಮಲ್ಲಾರ್ಮೆಯ ಬೆಕ್ಕಾಗಿ ನಟಿಸುತ್ತಿದ್ದೇನೆ' ಎಂದಿತು." ನೆಹರು ಆ ಉಪಮೆಯನ್ನು ಕೇಳಿ ಜೋರಾಗಿ ನಕ್ಕರು.

ಫ್ರಾನ್ಸಿನಲ್ಲಿ ಭಾರತದ ಕಲೆಯ ಮೇಳವನ್ನು ಆಚರಿಸುವ ಆಲೋಚನೆಯನ್ನು ಅವರಿಗೆ ಹೇಳಿದೆ. "ಭಾರತದಲ್ಲಿ ಫ್ರಾನ್ಸ್ ಎಂದರೆ ಅಲ್ಲಿಯ ಮಹಾಕ್ರಾಂತಿ ಒಂದೇ ನಮಗೆ ಕಾಣಿಸುವುದು. ವಿವೇಕಾನಂದ ಮೊದಲು ಅದರ ಬಗ್ಗೆ ಓದಿದಾಗ ದಿನಪೂರ್ತಿ 'ರಿಪಬ್ಲಿಕ್‌ಗೆ ಜಯವಾಗಲಿ' ಎಂದು ಕೂಗುತ್ತಿದ್ದರಂತೆ. 'ಲೇ ಮಿಸರೇಬಲ್' (ವಿಕ್ಟರ್ ಹ್ಯೂಗೋರ ಮಹಾ ಕಾದಂಬರಿ) ಇಲ್ಲಿ ಬಹಳ ಜನಪ್ರಿಯ. ಭಾರತಕ್ಕೆ ಏನನ್ನು ಕಳಿಸುತ್ತಿದ್ದೀರಿ" ಎಂದು ನೆಹರು ಕೇಳಿದರು. ನಾನು "ರೋಮನ್ ಕೆತ್ತನೆಗಳನ್ನು ಕಳಿಸುವ ಯೋಚನೆಯಿದೆ" ಎಂದಾಗ "ನಮ್ಮ ಕೆತ್ತನೆಗಳನ್ನೇ ನಾವು ನೋಡಿ ಆನಂದಿಸುತ್ತಿಲ್ಲ, ಅವುಗಳ ಹೆಸರು ಹೇಳಿಕೊಂಡು ಸಂತೋಷಿಸುತ್ತೇವಷ್ಟೆ" ಎಂದರು.

"ಇಲ್ಲಿಯ ಪತ್ರಿಕೆಗಳು ನಮ್ಮ ಫ್ರಾನ್ಸಿನ ಸರ್ಕಾರವನ್ನು ಅರ್ಥ ಮಾಡಿಕೊಂಡಿಲ್ಲ" ಎಂದು ನಾನು ಹೇಳಿದಾಗ "ನಮ್ಮ ಭಾರತ ಸರಕಾರಕ್ಕೂ ಅದೇ ಗತಿ" ಎಂದು ನಕ್ಕುಬಿಟ್ಟರು. "ಡಿಗಾಲ್ ಆಲ್ಜೀರಿಯಾಗೆ ಸ್ವಾತಂತ್ರ್ಯ ಕೊಡಿಸಿಕೊಡುತ್ತಾರೆ" ಎಂದು ನಾನು ಹೇಳಿದಾಗ ನೆಹರು ನನ್ನನ್ನು ನಂಬಿದ ಹಾಗೂ ಕಾಣಲಿಲ್ಲ.

ಹಾಗೇ ಮಾತಾಡುತ್ತಾ, ಅವರು 'ಅಹಿಂಸೆಯಿಂದ ದೇಶ ಹುಟ್ಟಬಹುದಲ್ಲವೇ ?' ಎಂದು ಕೇಳಿಕೊಂಡರು. "ದೇಶ ತನ್ನನ್ನು ರಕ್ಷಿಸಿಕೊಂಡ ನಂತರವೇ ಅದಕ್ಕೆ ನಿಜ ಅಸ್ತಿತ್ವ ಬರುವುದು" ಎಂದು ಜನರಲ್ ಡಿಗಾಲರ ಅಭಿಪ್ರಾಯವೆಂದು ಹೇಳಿದೆ. ಅವರಿಗೆ ಅದು ಸೂಕ್ತ ಎನಿಸಲಿಲ್ಲವೋ ಏನೋ ! "ಪ್ರತಿ ಬಾರಿ ಚೀನಾ ಚೀನಾ ಆದಾಗ ಅದು ಸಾಮ್ರಾಜ್ಯಶಾಹಿಯಾಗಿಬಿಡುತ್ತದೆ" ಎಂದರು. (ಇದು ೧೯೫೮ರಲ್ಲಿ. ೧೯೫೫ರಿಂದಲೇ ನೆಹರುರಿಗೆ ಚೀನಾ ಬಗ್ಗೆ ಅನುಮಾನಗಳು ಶುರುವಾಗಿದ್ದವು. ಇದು ಚೀನಾ ಆಕ್ರಮಣಕ್ಕೆ ೪ ವರ್ಷಗಳು ಮುಂಚೆ ಎಂಬುದನ್ನು ಗಮನಿಸಬೇಕು. ೧೯೫೯ರಲ್ಲಿ ಟಿಬೆಟ್‌ನಿಂದ ದಲೈಲಾಮಾ ಮತ್ತು ಅನೇಕ ಜನ ಬಂದು ಭಾರತದಲ್ಲಿ ನೆಲೆಸುತ್ತಿದ್ದರು. – ಲೇ)

"ಸ್ವಾತಂತ್ರ್ಯ ಬಂದನಂತರ ನಿಮಗೆ ಬಹಳ ಕಷ್ಟಕರ ಕೆಲಸ ಯಾವುದು ಎನಿಸಿದೆ" ಎಂದು ಕೇಳಿದಾಗ ಅವರು ತಕ್ಷಣವೇ "ನೈತಿಕ ವಿಧಾನಗಳಿಂದ ನೀತಿಯುತ ರಾಷ್ಟ್ರವೊಂದನ್ನು ಕಟ್ಟುವುದು" ಎಂದು ಉತ್ತರಿಸಿದರು. ಪ್ರಾಯಶಃ ಅಂದಿನ ಜಗತ್ತಿನ ಯಾವ ಬೇರೆ ನಾಯಕನೂ ಈ ಉತ್ತರವನ್ನು ಕೊಡುತ್ತಿರಲಿಲ್ಲ. ಅದೇ ಉಸಿರಿನಲ್ಲಿ ಅವರು ಮುಂದುವರಿಸಿದರು, "ಯಾವ ಪುಸ್ತಕವನ್ನೂ ಆಧರಿಸದಿರುವ (ಬೈಬಲ್, ಕುರಾನ್‌ನಂತೆ) ಧಾರ್ಮಿಕ ಸಮಾಜವಿಟ್ಟುಕೊಂಡು ಧರ್ಮನಿರಪೇಕ್ಷ ರಾಷ್ಟ್ರವನ್ನು ಕಟ್ಟುವುದೂ ಕಷ್ಟವಾಗಿದೆ." ಮುಂದುವರಿಯುತ್ತ

## ಸಾದರ ಸ್ವೀಕಾರ

**ತ್ಯಾಗಿ** (ಕವನ ಸಂಕಲನ) *ಎಂ. ವಿ. ನಂಜಪ್ಪ*
***ಪುಟ : xxii+ ೫೨ = ೭೪*** ***ಬೆಲೆ : ರೂ. ೬೦***
**ಶ್ರೀ ವೆಂಕಟಾದ್ರಿ ಪ್ರಕಾಶನ,** #೯೩೬, ೧೫ನೇ ಅಡ್ಡರಸ್ತೆ, ಗಂಗೋತ್ರಿನಗರ, ಎಸ್.ಐ.ಟಿ. ಬಡಾವಣೆ, ತುಮಕೂರು–೫೭೨ ೧೦೨.

**ವರ್ಷಾಕಾಲದ ಬಯಕೆಗಳು** (ಕವನ ಸಂಕಲನ)
*ಲಾಲಸಾಬ ಎಚ್. ನದಾಫ*
***ಪುಟ : x+ ೩೮ = ೪೮*** ***ಬೆಲೆ : ರೂ. ೭೦***
**ಚಾಂದಬಿ ಪ್ರಕಾಶನ,** ಸೆಕ್ಟರ್ ನಂ.೨೯, ಪ್ಲಾಟ್ ನಂ. ೩೨, ನವನಗರ, ಬಾಗಲಕೋಟ–೫೮೭೧೦೩.

**ಸಂಸ್ಕೃತಿ ಸಮಾಜ ಮತ್ತು ದೇಶ** (ಪ್ರಬಂಧ ಸಂಗ್ರಹ)
*ಎಂ. ವಿ. ಭಟ್ (ಶ್ರೀಮಿತ್ತೂರು)*
***ಪುಟ : xiv + ೧೩೮*** ***ಬೆಲೆ : ರೂ. ೧೨೦***
**ಯುಗಪುರುಷ ಮುದ್ರಣಾಲಯ,**
ಕಿನ್ನಿಗೋಳಿ – ೫೭೪ ೧೫೦, ದಕ್ಷಿಣ ಕನ್ನಡ.

**ಬದುಕಲು ಬಿಡದವರು** (ಕಥಾ ಸಂಕಲನ)
*ಬಸಪ್ಪ ಉಪ್ಪಾರ*
***ಪುಟ : xviii + ೧೨೦*** ***ಬೆಲೆ : ರೂ. ೯೫***
**ಕುವೆಂಪು ಗ್ರಂಥಾಲಯ ಬಳಗ,** ಬಾಚಿಗೊಂಡನಹಳ್ಳಿ – ೫೮೩ ೨೧೨, ಹಗರಿಬೊಮ್ಮನಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆ.

**ಗಾಂಧಾರಿ ಸ್ವಗತ** *ಡಾ॥ ಎಂ. ಬಿ. ಹೂಗಾರ*
***ಪುಟ : xviii+ ೧೩೪=೧೫೨*** ***ಬೆಲೆ : ರೂ. ೧೧೦***
**ಕಾಲ ಪ್ರಕಾಶನ,** ನಂ.೩೯/೩, ಕೆಳಮಹಡಿ,
೯ನೇ ಮುಖ್ಯರಸ್ತೆ, ಶಿವನಗರ,
ವೆಸ್ಟ್ ಆಫ್ ಕಾರ್ಡ್ ರಸ್ತೆ,
ರಾಜಾಜಿನಗರ, ಬೆಂಗಳೂರು–೫೬೦ ೦೧೦.

**ಇಂಡಿಯಾದೊಳಗೊಂದು ಇಣುಕು**
(ಪ್ರವಾಸಾನುಭವಗಳ ಸಂಕಲನ) *ಡಾ॥ ಜೆ. ಕೆ. ರಮೇಶ*
***ಪುಟ : ೨೦೦ + ೮*** ***ಬೆಲೆ : ರೂ. ೧೬೦***
**ಗೀತಾಂಜಲಿ ಪುಸ್ತಕ ಪ್ರಕಾಶನ,**
ಕಂದಾಯ ಭವನ, ನೂರಡಿ ರಸ್ತೆ,
ರಾಜೇಂದ್ರನಗರ, ಶಿವಮೊಗ್ಗ–೫೭೭ ೨೦೧.

**ಹುಡುಕಾಟ** (ಪ್ರಬಂಧ ಸಂಕಲನ)
*ಶಾಂತಾರಾಮ ನಾಯಕ, ಹಿಚಕಡ*
***ಪುಟ : xii + ೨೧೪*** ***ಬೆಲೆ : ರೂ. ೧೫೦***
**ಶಾಂತಾರಾಮ ನಾಯಕ ಹಿಚಕಡ,**
ಹಿಚಕಡ, ಅಂಕೋಲಾ,
ಉತ್ತರ ಕನ್ನಡ – ೫೮೧ ೩೧೪.

**ನೀರಿಗಾಗಿ ಹಾಹಾಕಾರ ಮತ್ತು ನೀಚ ರಾಜಕಾರಣ**
(ಕಳಸಾ – ಬಂಡೂರಿ)
*ಸಿರಿಮನೆ ನಾಗರಾಜ್*
***ಪುಟ : ೪೮*** ***ಬೆಲೆ : ರೂ. ೨೫***
**ಲಡಾಯಿ ಪ್ರಕಾಶನ,**
ನಂ. ೨೧, ಪ್ರಸಾದ್ ಹಾಸ್ಟೆಲ್,
ಗದಗ – ೫೮೨ ೧೦೧.

**ದಲಿತ–ಬಂಡಾಯ ಹೋರಾಟದ ಹಾಡುಗಳು**
*ಎಚ್. ಎಸ್. ಬೇನಾಳ*
***ಪುಟ : ೧೯೮*** ***ಬೆಲೆ : ರೂ. ೧೫೦***
**ಸಹನಾ ಪ್ರಕಾಶನ,** ಪ್ಲಾಟ್ ನಂ. ೪೦೮, ಸಿ.ಐ.ಬಿ. ಕಾಲೋನಿ, ಕೇಂದ್ರ ಬಸ್ ನಿಲ್ದಾಣದ ಹಿಂದುಗಡೆ,
ಎಂ.ಎಸ್.ಕೆ. ಮಿಲ್ ರಸ್ತೆ,
ಕಲಬುರಗಿ–೫೮೫ ೧೦೩.

**ಗ್ರಾಮಾಭಿವೃದ್ಧಿಯ ಹರಿಕಾರ ಕೋಡಿಹಳ್ಳಿಯ ಚಂದ್ರಶೇಖರ ಪಾಟೀಲ** *ಹೆಚ್. ಜಿ. ಪಾಟೀಲ*
***ಪುಟ : xix+ ೮೫ + xii*** ***ಬೆಲೆ : ರೂ. ೧೫೦***
**ಶ್ರೀ ಗುರು ದೊಡ್ಡಬಸವೇಶ್ವರ ಫೌಂಡೇಶನ್ ಶ್ರೀಗುರು ಚರಂತೇಶ್ವರ ಪ್ರಸಾರಾಂಗ,**
ಪುಣ್ಯಕ್ಷೇತ್ರ ನಂದಿಪುರ, ಬ್ಯಾಸಿಗಿದೇರಿ (ಅಂಚೆ)
ಹಗರಿಬೊಮ್ಮನಹಳ್ಳಿ ತಾ॥ ಬಳ್ಳಾರಿ ಜಿ॥

"ಯಾವುದು ಅತಿ ಕಷ್ಟ ಎಂದು ಹೇಳುವುದು ಸುಲಭವಲ್ಲ. ಗಾಂಧೀಜಿಯವರಿಗೆ ಸುಸಂಸ್ಕೃತ ಜನರ ಹೃದಯವನ್ನು ಗೆಲ್ಲುವುದು ಬಹಳ ಕಷ್ಟವಾಗಿತ್ತು. ಗಾಂಧಿ ತಮ್ಮ ವಿರೋಧಿಗಳಲ್ಲಿ ಬಹಳ ಭಾರತೀಯರೂ ಇದ್ದಾರೆ ಎಂದಿದ್ದರು." ಅವರ ಮುಖದಲ್ಲಿ ವಿಷಾದವಿದ್ದಿತು. ಅವರನ್ನು ನೋಡುತ್ತಾ ಅವರು ಜೈಲಿನಲ್ಲಿದ್ದಾಗ ಬರೆದಿದ್ದು ಜ್ಞಾಪಕಕ್ಕೆ ಬಂದಿತು. 'ನಾನು ಮತ್ತೆ ಕೈಲಾಸ ಪರ್ವತವನ್ನು ನೋಡುವುದಿಲ್ಲ ಎಂದು ಕಾಣುತ್ತದೆ!' ಹಿಮಾಲಯ ಅವರ ಹೃದಯಕ್ಕೆ ಬಹಳ ಹತ್ತಿರವಿದ್ದಿತು.

"ನಾನು ಮಗುವಾಗಿದ್ದು ಬಹಳ ಹಿಂದೆ ಎಂದು ನಾನು ಕೆಲವು ಬಾರಿ ಮರೆಯುತ್ತೇನೆ... ಯುದ್ಧ ಸಮಯದಲ್ಲಿ ನೀವೂ ಜೈಲಿನಲ್ಲಿದ್ದಿರಲ್ಲವೇ ? ಈಗ ನಾವು ನೋಡುವವರೆಲ್ಲಾ ಎಂದಾದರೂ ಜೈಲಿನಲ್ಲಿದ್ದವರು" ಎಂದರು. ನೆಹರು ಸುಮಾರು ೧೫ ವರ್ಷಗಳನ್ನು ಜೈಲಿನಲ್ಲಿ ಕಳೆದಿದ್ದರು. "ನೀವು ಡೆಹ್ರಾಡೂನಿನ ಕಾರಾಗೃಹದಲ್ಲಿದ್ದಾಗ ಅಳಿಲೊಂದು ನಿಮ್ಮ ಬಳಿ ಬಂದು ನಿಮ್ಮ ತೊಡೆಯ ಮೇಲೆ ಕುಳಿತುಕೊಳ್ಳುತ್ತಿತ್ತಲ್ಲವೇ ?" ಎಂದಾಗ ಅವರು "ಹೌದು, ಆದರೆ ಅದು ಲಕ್ನೋವಿನಲ್ಲಿ. ವಿನೋದ ಪ್ರಜ್ಞೆ ಇಲ್ಲದಿದ್ದಲ್ಲಿ ತಾವು ಬದುಕಿರುತ್ತಿರಲಿಲ್ಲ ಎಂದು ಗಾಂಧಿ ಹೇಳುತ್ತಿದ್ದರು" ಎಂದರು. ಯಾವ ನಟನೆಯೂ ಇರಲಿಲ್ಲ ಅವರ ಮಾತುಗಳಲ್ಲಿ. ಇತರ ಮುಖಂಡರಂತೆ ಅರ್ಥವಿಲ್ಲದ ಮಾತುಗಳಿರಲಿಲ್ಲ. ಮುಂದುವರಿಯುತ್ತ "ಇಷ್ಟು ವರ್ಷಗಳ ನಂತರ ಜೈಲು ಎಂದರೆ ಏನು ಜ್ಞಾಪಕ ಬರುತ್ತದೆ ಗೊತ್ತೇ ? ಒಂದೇ ತರಹದ ಕಿಟಕಿಯ ಮುರಿದ ಕಟ್ಟಡಗಳು ! ಬೇಲಿಯ ಆಚೆ ಆಶ್ಚರ್ಯಪಡುತ್ತಾ ಮೇಲೇಳುತ್ತಿರುವ ಹುಲ್ಲಿನ ಎಲೆ ! ನಿಮ್ಮ ನೆನಪುಗಳೇನು ?" ಎಂದು ಕೇಳಿದರು. "ಹಿಂಸೆಗೆ ಒಳಪಟ್ಟ ಜನರ ಮಧ್ಯೆ ಹಿಟ್ಲರನ ಗುಪ್ತ ಪೊಲೀಸ್ ಮೋಜು ಮಾಡುತ್ತಿದ್ದದ್ದು" ಎಂದೆ. ಸಮಯವಾಗುತ್ತ ಬಂದಿದ್ದರಿಂದ ನೆಹರು ಏಳುತ್ತಾ "ನಾಳೆ ನಾವು ಏನು ಮಾತನಾಡಿದೆವೆಂದು ವೃತ್ತಪತ್ರಿಕೆಗಳಿಂದ ತಿಳಿಯೋಣ" ಎಂದು ನಗುತ್ತಾ ಹೇಳಿದರು. "ಕ್ಯಾಥೊಲಿಕ್ ಮದುವೆಗೆ ಮುಂಚೆ ಗಂಡ ಹೆಂಡತಿ ಚರ್ಚಿಗೆ ಹೋಗಿ ಪಾದ್ರಿಯ ಬಳಿ ತಮ್ಮ ಜೀವನದ ತಪ್ಪುಗಳನ್ನು ಒಪ್ಪಿಕೊಂಡು ಬರುವ ವಾಡಿಕೆ. ನನ್ನ ಅಪ್ಪ ಅಮ್ಮ ಮದುವೆಗೆ ಮುಂಚೆ ಪಾದ್ರಿಯನ್ನು ನೋಡಲು ಹೋದರು. ಅಮ್ಮ ಒಂದೇ ನಿಮಿಷದಲ್ಲಿ ಹೊರಬಂದಳಂತೆ. ಆದರೆ ಪಾದ್ರಿಯ ಬಳಿ ಹೋದ ಅಪ್ಪ ಎಷ್ಟು ಹೊತ್ತಾದರೂ ಬರಲಿಲ್ಲ. ಅಮ್ಮನಿಗೆ ಯೋಚನೆಯಾಯಿತು. ಕಡೆಗೂ ಭಾವಿ ಗಂಡ ಹೊರಬಂದ. ಅಮ್ಮ ಹೆದರುತ್ತ 'ಏಕೆ ಇಷ್ಟು ಹೊತ್ತು' ಎಂದು ಕೇಳಿದ್ದಕ್ಕೆ 'ಓ ! ಅಂಥದ್ದೇನೂ ಇಲ್ಲ. ಅವನು ನನ್ನ ಸ್ನೇಹಿತ. ಅದು ಇದು ಮಾತನಾಡುತ್ತ ಕುಳಿತುಬಿಟ್ಟೆವು' ಎಂದು ಅಪ್ಪ ಹೇಳಿದರು." "ಸಂಜೆ ಮತ್ತೆ ಭೇಟಿಯಾಗೋಣ" ಎಂದು ಹೊರಹೋದರು.

ರಾತ್ರಿಯ ಭೋಜನಕ್ಕೆ ಬಂದ ನೂರಾರು ಅತಿಥಿಗಳನ್ನು ನೆಹರು ಸ್ವಾಗತಿಸುತ್ತಿದ್ದರು. ಅವರನ್ನು ನೋಡುತ್ತಾ, ಮಧ್ಯಾಹ್ನದ ಮಾತುಕತೆಗಳನ್ನು ಜ್ಞಾಪಿಸಿಕೊಳ್ಳುತ್ತಾ ಭಾರತಕ್ಕೆ ಹಿಂದೆ ಗಾಂಧಿ ಗುರುವಾಗಿದ್ದಂತೆ ಈಗ ನೆಹರೂ ಆಗಿದ್ದಾರೆ ಎಂದನಿಸಿತು. ರಾತ್ರಿ ಬೀಳ್ಕೊಡುತ್ತಾ "ನಿಮಗೆ ಜೈಲು ಒಂದು ಆಕಸ್ಮಿಕ ಮಾತ್ರವಾಗಿತ್ತು. ಆದರೆ ನಮಗೆ ಅದೇ ಉದ್ದೇಶವಾಗಿ ಬಿಟ್ಟಿತ್ತು. ನಮ್ಮಲ್ಲಿ ಯಾರು ದಸ್ತಗಿರಿಯಾದರೂ ಗಾಂಧೀಜಿಯವರಿಗೆ ತಿಳಿದ ತಕ್ಷಣ ಅವರು ತಾರನ್ನು ಸಂಭ್ರಮದಿಂದ ಕಳಿಸುತ್ತಿದ್ದರು. ಆ ಸಮಯದಲ್ಲಿ ಅವರು ಹೇಳುತ್ತಿದ್ದರು. 'ಸ್ವಾತಂತ್ರ್ಯ ಸಿಗುವುದಕ್ಕೆ ಜೈಲಿಗೆ ಹೋಗಬೇಕಾಗುತ್ತದೆ. ಕೆಲವು ಬಾರಿ ಗಲ್ಲಿಗೂ ಏರಬೇಕಾಗುತ್ತದೆ. ಕೋರ್ಟುಗಳಲ್ಲಿ, ವಿಧಾನಸಭೆಗಳಲ್ಲಿ (ಮಾತನಾಡುತ್ತಿದ್ದರೆ) ಸ್ವಾತಂತ್ರ್ಯ ಸಿಗುವುದಿಲ್ಲ.' "

ಮುಂದಿನ ದಿನ ಅವರನ್ನು ನೋಡಿದಾಗ ಅವರು ಮತ್ತೆ ಗಾಂಧಿಯವರ ಬಗ್ಗೆ ಮಾತನಾಡಿದರು : "ಇಲ್ಲಿ ಭಾಷಣಗಳಿಗೆ ಜನ ಬರುವುದು ಒಬ್ಬ ಗುರುವನ್ನು ನೋಡಲು. ಒಂದು ರೀತಿಯ ಆಶೀರ್ವಾದ ಪಡೆಯಲು. ಗಾಂಧೀಜಿಯವರನ್ನು ನೋಡಲು ಅನೇಕ ಮಂದಿ ಬರುತ್ತಿದ್ದರು. ಅವರಿಗೆ ಅವರ ಒಳಗೆ ಏನಿದೆ, ಅವರು ತಮ್ಮ ಜೀವನದಲ್ಲಿ ಏನು ಮಾಡಬಹುದು ಎಂದು ಗಾಂಧೀಜಿ ತೋರಿಸುತ್ತಿದ್ದರು. ಪುರಾತನ ಆಲೋಚನೆಗಳಿಂದ ಭವಿಷ್ಯಕ್ಕೆ ಕರೆದೊಯ್ಯುತ್ತಿದ್ದರು. ಅವರ ವಿಧಾನದ ಪ್ರತೀಕಗಳನ್ನು ನೋಡಿ – ಚರಕ, ಉಪ್ಪು! ಎಲ್ಲರಿಗೂ ಗೊತ್ತಿದ್ದನ್ನೇ ಅವರು ಪ್ರಚಾರ ಸಾಧನ ಮಾಡಿಕೊಂಡಿದ್ದು ಜನರನ್ನು ಆಶ್ಚರ್ಯಗೊಳಿಸುತ್ತಿತ್ತು." ಅದಕ್ಕೆ ನಾನು "ಅಂತಹವರಿಗೇ ಅಲ್ಲವೇ ಪ್ರವಾದಿ ಎನ್ನುವುದು" ಎಂದೆ. ಮತ್ತೆ ನೆಹರು ಮುಂದುವರಿಸಿದರು : "ಗಾಂಧೀಜಿ ಖ್ಯಾತಿ ಗಳಿಸುವ ಬಹಳ ಮುಂಚೆಯೇ ಗೋಖಲೆ 'ಈತ ಮಣ್ಣಿನಿಂದ ನಾಯಕರನ್ನು ಕಡೆಯಬಲ್ಲ' ಎಂದು ಹೇಳುತ್ತಿದ್ದರು. ಜನರಿಗೆ ಅವರು ಆತ್ಮವಿಶ್ವಾಸವನ್ನು ವಾಪಸ್ಸು ತೆಗೆದುಕೊಟ್ಟು ನೀವು ಯಾರನ್ನಾದರೂ ಮೆಚ್ಚುತ್ತ ಹೋದರೆ ಅವರ ತರಹವೇ ಆಗುತ್ತೀರಿ ಎಂದು ಹೇಳುತ್ತಿದ್ದರು. ಅವರನ್ನು ದ್ವೇಷಿಸಿದವರು ಅಂದೂ ಇದ್ದರು. ಇಂದೂ ನಮ್ಮ ಮಧ್ಯೆ ಇದ್ದಾರೆ." ಅವರ ಪುಸ್ತಕಗಳ ಮಧ್ಯೆಯಿಂದ ಒಂದು ಪುಸ್ತಕವನ್ನು ಹೊರತೆಗೆದು ಅದರ ಅರ್ಪಣೆಯನ್ನು ನೋಡಿ ಎಂದರು. ಟಾಗೋರರ ಸಂಬಂಧಿಯೊಬ್ಬರು ಬರೆದಿದ್ದ ಆ ಪುಸ್ತಕದಲ್ಲಿ "ಗಾಂಧಿ ತತ್ವವನ್ನು ನಾಶಮಾಡಿ ಮೇಲೇರಬೇಕಾದ ಜನಸಮುದಾಯಕ್ಕೆ" ಎಂದು ಬರೆದಿತ್ತು. ವಿವೇಕಾನಂದ ಅವರ ಗುರು ರಾಮಕೃಷ್ಣರ ಬಗ್ಗೆ ಬರೆದಿದ್ದನ್ನು ಜ್ಞಾಪಿಸಿಕೊಂಡು ನೆಹರು "ಅತಿ ಮಹತ್ವದ ಜೀವನ ಗಾಂಧಿಯವರದ್ದು. ವ್ಯಾಖ್ಯಾನ ನಮ್ಮದು... ನಮ್ಮ ಸ್ವಾತಂತ್ರ್ಯ ಸಂಗ್ರಾಮ ಎಂದೋ ಹಿಂದೆ ಹಾದುಹೋದಂತಿದೆ" ಎಂದರು.




೧೯೫೮ರಲ್ಲಿ ಅವರನ್ನು ಭೇಟಿಮಾಡಿದಾಗ ನಾನು ಅಹಿಂಸೆಗೂ ಪುನರ್ಜನ್ಮಕ್ಕೂ ಏನು ಸಂಬಂಧ ಎಂದು ಕೇಳಿದ್ದೆ, ಅದು ಅವರಿಗೂ ಜ್ಞಾಪಕವಿದ್ದಂತಿತ್ತು. ಗಾಂಧಿಯನ್ನು ಟಾಲ್‌ಸ್ಟಾಯ್ ಇದೇ ಪ್ರಶ್ನೆ ಕೇಳಿದ್ದರು ಎಂದರು. 'ಗಾಂಧಿಯವರ ಉತ್ತರವೇನಿತ್ತು ? ನೀವು ಕೊಟ್ಟ ಉತ್ತರವೇ ?' ಎಂದು ಕೇಳಿದೆ. ನಾನು ಏನು ಹೇಳಿದ್ದೆ ಎಂದು ಅವರು ಕೇಳಿದರು. 'ಪುನರ್ಜನ್ಮ ಒಂದು ರೀತಿಯ ಗೊಬ್ಬರವೋ ಏನೋ ಎಂದಿದ್ದರು. ಬುದ್ಧನ ವ್ಯಕ್ತಿತ್ವ ನಮ್ಮಿಬ್ಬರನ್ನೂ ಸೆಳೆದಿತ್ತು.' 'ಯಾವ ಘರ್ಷಣೆಯೂ ಇಲ್ಲದೆ ಹಿಂದೂ ಧರ್ಮ ಹೇಗೆ ಬೌದ್ಧಧರ್ಮವನ್ನು ಹೊರಗೆ ಕಳಿಸಿತು ?' ಎಂದು ನಾನು ಅವರನ್ನು ಹಿಂದೆ ಕೇಳಿದಾಗ ಅವರು 'ನನಗೆ ಸರಿಯಾಗಿ ತಿಳಿದಿಲ್ಲ' ಎಂದಿದ್ದರು. ಮತ್ತೊಮ್ಮೆ ಕೇಳಿದಾಗ ಕೂಡ ಹಲವಾರು ಕಾರಣಗಳಿವೆ ಎಂದು ಬಿಟ್ಟಿದ್ದರು. ಅವರ ಯಾವುದೋ ಇತ್ತೀಚಿನ ಭಾಷಣದ ಬಗ್ಗೆ ಕೇಳುತ್ತಾ 'ಮೊನ್ನೆ ಬುದ್ಧನ ಮತ್ತು ಧರ್ಮದ ಬಗ್ಗೆ ನೀವು ಕೊಟ್ಟ ಭಾಷಣಕ್ಕೂ ನೀವು ಹಿಂದೆ ಬರೆದಿದ್ದಕ್ಕೂ ವ್ಯತ್ಯಾಸಗಳಿರುವಂತಿದೆ' ಎಂದೆ. ಅದಕ್ಕೆ ನೆಹರು "ಬುದ್ಧನ ವ್ಯಕ್ತಿತ್ವ ನನ್ನನ್ನು ಮೊದಲಿಂದಲೂ ಆಕರ್ಷಿಸುತ್ತಲೇ ಇದೆ. ಏಸು ಕ್ರಿಸ್ತ ಕೂಡ. ಆದರೆ ಬುದ್ಧ ಸ್ವಲ್ಪ ಹೆಚ್ಚೇ. ನನ್ನ ಧಾರ್ಮಿಕ ಅಭಿಪ್ರಾಯಗಳು ಬದಲಾಯಿಸಿವೆಯೇ ಎಂದು ಕೇಳುತ್ತಿದ್ದೀರಿ. ಇರಬಹುದು. ಯಾವುದೋ ಅರ್ಥವಾಗದ ಅಗತ್ಯವನ್ನು ಧರ್ಮ ಪೂರೈಸುತ್ತದೆ ಎನ್ನಿಸುತ್ತಿದೆ" ಎಂದರು.

ಒಟ್ಟಿನಲ್ಲಿ ಮಾಲ್ರೋರಿಗೆ ನೆಹರೂರಲ್ಲಿ ಪ್ರಾಯಶಃ ಕಂಡಿದ್ದು ತನ್ನ ದೇಶದ ಬಗ್ಗೆ ಅನೇಕ ಕಳಕಳಿಗಳಿದ್ದು, ವಯಸ್ಸಾಗುತ್ತಿದ್ದ ಮತ್ತು ತನ್ನ ಗುರುಗಳನ್ನು ಆಗಾಗ್ಗೆ ಜ್ಞಾಪಿಸಿಕೊಳ್ಳುತ್ತಿದ್ದ, ಗಂಭೀರ ಮುಖದ ಬುದ್ಧಿಜೀವಿ. ೧೯೬೫ರಲ್ಲಿ ಅಂದರೆ, ನೆಹರು ತೀರಿಹೋದ ಒಂದು ವರ್ಷದ ನಂತರ, ಮಾಲ್ರೋ ಮತ್ತೆ ದೆಹಲಿಗೆ ಬಂದಿದ್ದರು. ಆಗ ನೆಹರು ಸಮಾಧಿಯನ್ನು ನೋಡಲೂ ಹೋಗಿದ್ದರು. 'ನಾನು ಹಿಂದೆ ಬಂದಾಗ ಭಾರತವನ್ನು ತನ್ನ ಹಸ್ತದಲ್ಲಿ ಇಟ್ಟುಕೊಂಡಿದ್ದ ವ್ಯಕ್ತಿ ಈಗ ನೆಲದ ಮೇಲೆ ಒಂದು ಹುಲ್ಲಿನ ಚೌಕಟ್ಟು' ಎಂದು ಅನ್ನಿಸಿತ್ತು ಅವರಿಗೆ. ನೆಹರುರ ಮ್ಯೂಸಿಯಮ್ ನೋಡಲು ಹೋದಾಗ ಅವರ ಮರಣಶಯ್ಯೆಯ ಚಿತ್ರ ಮಾಲ್ರೋರಿಗೆ ರಾಮಕೃಷ್ಣರ ಮರಣವನ್ನು ಜ್ಞಾಪಕಕ್ಕೆ ತರುತ್ತದೆ. ನೆಹರುರ ವಿಲ್‌ಅನ್ನು ಮತ್ತೆ ಜ್ಞಾಪಿಸಿಕೊಳ್ಳುತ್ತಾ "ತನ್ನ ಹೃದಯದಿಂದ, ತನ್ನ ಮನಸ್ಸಿನಿಂದ ಈ ವ್ಯಕ್ತಿ ಭಾರತವನ್ನು ಮತ್ತು ಅದರ ಜನರನ್ನು ಪ್ರೀತಿಸಿದ್ದನು. ಅದೇ ಜನತೆ ಅವನಿಗೆ ಮರೆಯಲಾಗದಷ್ಟು ಪ್ರೀತಿಯನ್ನು ಕೊಟ್ಟಿತು" – ಹೀಗೆಂದು ಮಾಲ್ರೋ ನೆಹರುರಿಗೆ ತಮ್ಮ ಪುಸ್ತಕದಲ್ಲಿ ವಿದಾಯ ಹೇಳಿದ್ದಾರೆ.

**ಡಾ॥ ಪಾಲಹಳ್ಳಿ ವಿಶ್ವನಾಥ್**
ನಂ. ೯, ಕಾಳಪ್ಪ ಬ್ಲಾಕ್, ಬಸವನಗುಡಿ, ಬೆಂಗಳೂರು – ೫೬೦ ೦೦೪



# ಸ್ವಚ್ಛ ಮನಸ್ಸುಗಳನ್ನು ಕಟ್ಟೋಣ...

ಬಸ್ಸಿನ ಚಕ್ರ ಉರುಳುತ್ತಿತ್ತು. ಬಸ್ಸು ರಭಸದಿಂದ ಸಾಗಿತ್ತು, ಬಸ್ಸು ಹೋದ ರಭಸಕ್ಕೆ ಆ ರಸ್ತೆ ಧೂಳನ್ನು ಆವರಿಸಿಕೊಂಡು ಕೆಲಕ್ಷಣದ ನಂತರ ತಿಳಿಯಾಗುತ್ತಿತ್ತು. ಹೀಗೆ ಹೊರಟಿದ್ದು ಬಳ್ಳಾರಿ ಪುಣೆ ಬಸ್ಸು. ಹೊಸಪೇಟೆ, ಕೊಪ್ಪಳ, ಗದಗ, ಅಣ್ಣಿಗೇರಿ, ನಲವಡಿ, ಹುಬ್ಬಳ್ಳಿ, ಬೆಳಗಾವಿ ಮಾರ್ಗವಾಗಿ ಪುಣೆ ತಲುಪುವ ಬಸ್ಸು ಅದು. ಬಹುತೇಕ ಬಸ್ಸಿನ ಎಲ್ಲಾ ಆಸನಗಳು ಭರ್ತಿ ಆಗಿದ್ದವು. ಆದರೆ ಆ ಸೀಟು ಒಂದನ್ನು ಬಿಟ್ಟು. ಮುಂದಿನಿಂದ ಎರಡನೇ ಸಾಲಿನ ಸೀಟ್ ಅದು. ಆ ಸೀಟ್ ಅಲ್ಲಿ ಸುಮಾರು ಮೂವತ್ತೈದರ ವಯಸ್ಸಿನ ಮಹಿಳೆಯೊಬ್ಬರು ಕುಳಿತಿದ್ದಳು.

ಬಸ್ಸು ಗದಗ ಹೊಸ ಬಸ್ ನಿಲ್ದಾಣ ತಲುಪಿತು. ಗದಗ ಹೊಸ ಬಸ್ ನಿಲ್ದಾಣ ಕೊಪ್ಪಳ, ಹೊಸಪೇಟೆ, ಗಂಗಾವತಿ, ರಾಯಚೂರು, ಬಳ್ಳಾರಿ ಹಾಗೂ ಮುಂಡರಗಿ ಕಡೇ ಹೋಗುವ ಬಸ್‌ಗಳು ಮಾತ್ರ ಬರುತ್ತವೆ, ಉಳಿದ ಎಲ್ಲ ಮಾರ್ಗದ ಬಸ್‌ಗಳು ಹಳೇ ಬಸ್ ನಿಲ್ದಾಣದಿಂದ ಸಾಗುತ್ತವೆ. ಹಾಗಾಗಿ ಗದಗದ ಹೊಸ ಬಸ್ ನಿಲ್ದಾಣ ಖಾಲಿ ಖಾಲಿ ಆಗಿರುತ್ತದೆ. ಈ ಬಸ್ಸನೇರಲು ಬಂದ ಯುವಕನು ತನ್ನ ಮಿತ್ರನೊಂದಿಗೆ ಅಲ್ಲಾ ಗೆಳೆಯ ಇತ್ತೀಚೆಗೆ ಕೊಪ್ಪಳ ಜಿಲ್ಲೆಯ ಗ್ರಾಮವೊಂದರಲ್ಲಿ ದಲಿತನ ಮದುವೆ ದಿನದಂದು ಇಡೀ ಊರಿಗೆ ಊರೇ ಬಹಿಷ್ಕಾರ ಹಾಕಿ ಅಂಗಡಿಗಳೆಲ್ಲಾ ಮುಚ್ಚಿದ್ದನ್ನು ನೋಡಿಯೂ ನೋಡದಂತೆ ಇರುವ ರಾಜಕೀಯ ನಾಯಕರನ್ನು ಕಂಡರೆ ನನಗೆ ಈಗೀಗ ಸಹಿಸಲಾಗುತ್ತಿಲ್ಲ. ದಲಿತರ ಉದ್ಧಾರ, ದಲಿತರ ಏಳ್ಗೆ ನಮ್ಮ ಗುರಿ ಎಂದು ಮೇಜುಕುಟ್ಟಿ ಭಾಷಣ ಬಿಗಿಯುವ ನಾಯಕರೆಲ್ಲಾ ಈ ವಿಷಯದ ಕುರಿತು ಧ್ವನಿ ಎತ್ತಲೇ ಇಲ್ಲ. ದಲಿತರ ಕೇರಿಯಲ್ಲಿ ಭೋಜನ ಮಾಡುತ್ತೇನೆ ಅನ್ನುವ ನಾಯಕರು ಇವರ ನೋವಿಗೆ ಸ್ಪಂದಿಸಲೇ ಇಲ್ಲ. ಜಾತಿಗಳನ್ನು ರಾಜಕೀಯ ಲಾಭಕ್ಕಾಗಿ ಬಳಸಿಕೊಳ್ಳುವವರೇ ಬಹಳ, ಕೆಲಸ ಮಾಡುವವರು ವಿರಳ ಅಂತ ಮಾತನಾಡುತ್ತಿರುವಾಗಲೇ ಬಸ್ಸು ಶುರುವಾಯಿತು, ಬಸ್ಸೇರಿದ ಆ ಯುವಕ ಸೀಟು ಹುಡುಕುತ್ತಾ ಆ ಖಾಲಿ ಸೀಟ್ ಬಳಿ ಬಂದ. ಆ ಯುವಕ ಮೇಡಂ ಇಲ್ಲಿ ಕೂಡಬಹುದಾ ಅಂತ ಕೇಳಿದ. ಈ ಮಾತನ್ನು ಕೇಳಿದ ಆ ಮಹಿಳೆ ಆ ಹುಡುಗನನ್ನು ಮೇಲಿನಿಂದ ಕೆಳಕ್ಕೆ ನೋಡಿ ಬೇಡ ಅಂತ ಹೇಳಿ, ಮಹಿಳೆಯರಿದ್ದರೆ ಓಕೆ ಅಂದ್ರು. ಆ ಹುಡುಗ ಅತ್ತಿತ್ತ ನೋಡಿ ಸುಮ್ಮನೆ ನಿಂತುಕೊಂಡ. ಬಸ್ಸು ಮುಳಗುಂದ ನಾಕಾ ದಾಟಿ ನಗರದಲ್ಲಿ ಧೂಳೆಬ್ಬಿಸುತ್ತಾ ಸಾಗಿತ್ತು. ಹಾಗೇ ಸಾಗುತ್ತಿದ್ದ ಬಸ್ಸಿನಲ್ಲಿ ಆ ಯುವಕ ತನ್ನ ಪ್ಯಾಂಟಿನ ಕಿಸೆಯೊಳಗಿಂದ ದಿಲ್ಲಗಿ ಅಡಿಕೆ ಚೀಟು ತೆಗೆದು ಹರಿದು ಬಾಯಲ್ಲಿ ಹಾಕಿಕೊಂಡ. ಅಡಿಕೆ ಚೀಟಿನ ಹಾಳೆಯನ್ನು ಅಲ್ಲೆ ಬಿಸಾಕಿದ. ಇದನ್ನು ನೋಡಿದ ಸೀಟು ನೀಡಲು ನಿರಾಕರಿಸಿದ ಆ ಮಹಿಳೆ ಏನಪ್ಪಾ ಎಲ್ಲೆಂದ್ರಲ್ಲಿ ಹಾಗೇ ಬಿಸಾಕೋದಾ ಸ್ವಚ್ಛ ಭಾರತ ಅಂತ ಹಗಲಿರುಳು ಶ್ರಮಿಸ್ತಾರಲ್ಲ ಕೇಳಿಲ್ಲವಾ. ಆ ಹಾಳೆ ಎತ್ತಿ ನಿನ್ನ ಕಿಸೆಯಲ್ಲಿ ಇಟ್ಟಕೊ ಮುಂದೆ ನಿಮ್ಮೂರಲ್ಲಿ ಕಸದ ಬುಟ್ಟಿಯಲ್ಲಿ ಹಾಕು ಅಂದ್ರು. ಅವರ ಮಾತಿಗೆ ತಲೆಯಾಡಿಸಿದ ಆ ಯುವಕ ನಿಮ್ಮ ಸಲಹೆಗೆ ಧನ್ಯವಾದಗಳು ಅಂತ ಸುಮ್ಮನೆ ಕುಳಿತ. ಏನಪ್ಪಾ ಆ ಹಾಳೆ ತಗೋ ಅಂದ್ರೆ ಸುಮ್ಮನೆ ನಿಂತಿಯಲ್ಲಪ್ಪಾ. ಆ ಮಹಿಳೆಗೆ ಧ್ವನಿ ಜೋಡಿಸುತ್ತಾ ಏ ತಗೊಂಡು ಇಟ್ಕೊಳ್ಳೊ ನಿಮ್ಮಂಥ ಯುವಕರೇ ಈ ರೀತಿ ಮಾಡಿದರೆ ಹೇಗೆ. ಸ್ವಚ್ಛ ಭಾರತದ ಕಲ್ಪನೆನಾ ಬೆಳೆಸಿಕೊಳ್ಳಿ ಅಂತ ಬಸ್‌ನಲ್ಲಿ ಒಬ್ಬೊಬ್ಬರು ಒಂದೊಂದು ರೀತಿ ಮಾತನಾಡುತ್ತಿದ್ದರು. ಆ ಯುವಕ ಮಾತ್ರ ಮೌನದಿಂದ ನಿಂತಿದ್ದ. ಇವನ ಮೌನ ಕಂಡು ಮತ್ತಷ್ಟು ಜನ ಬಾಯಿಗೆ ಬಂದಂತೆ ಮಾತನಾಡ ಹತ್ತಿದರು. ಯುವಕ ಮಾತ್ರ ಜಪ್ಪಯ್ಯ ಅಂದ್ರು ಬಾಯಿ ಬಿಡುತ್ತಿಲ್ಲ. ಬಸ್ಸು ಹುಲಕೋಟಿ ದಾಟಿ ಸಾಗುತ್ತಿದೆ. ಪ್ರಯಾಣಿಕರು ಆ ಯುವಕನಿಗೆ ಬೈಯುತ್ತಿದ್ದಾರೆ. ಹಾಗೇ ಬಸ್ಸಿನ ಚಕ್ರಗಳು ಉರುಳುತ್ತಿರುವ ವೇಗದಂತೆ ಆ ಯುವಕನೆದೆಯಲ್ಲೂ ಹಲವಾರು ಪ್ರಶ್ನೆಗಳು ಉರುಳುತ್ತಿವೆ. ಎದ್ದು ಎಲ್ಲರಿಗೂ ಸರಿಯಾಗಿ ಉತ್ತರಿಸಬೇಕೆನ್ನುವ ಆಕ್ರೋಶ ಬರುತ್ತಿದೆ. ಬಸ್ಸು ಅಣ್ಣಿಗೇರಿ ಪಟ್ಟಣದೊಳಗೆ ಪ್ರವೇಶಿಸುತ್ತಿದೆ. ಆಗ ಯುವಕ ತಿರುಗಿ ನಿಂತು ಆ ಮಹಿಳೆಯತ್ತ ನೋಡಿ ಮೇಡಂ ನಿಮ್ಮ ಬಳಿ ಖಾಲಿ ಸೀಟಿದೆ, ನೀವು ನಾನು ಕೂಡಲು ನಿರಾಕರಿಸಿದಿರಿ, ಮತ್ತು ನೀವು ಕುಳಿತ ಆಸನ ಮಹಿಳೆಯರಿಗೆ ಮೀಸಲಾಗಿದ್ದಲ್ಲ ಎನ್ನುವುದು ನೆನಪಿರಲಿ ನಿಮಗೆ. ನಾನು ಮಹಿಳೆ ಅಂತ ಗೌರವ ಕೊಟ್ಟು ಇಲ್ಲಿಯವರೆಗೂ ನಿಂತುಕೊಂಡೆ ಬಂದೆ. ಇಲ್ಲಿರುವ ಎಲ್ಲ ಪ್ರಯಾಣಿಕರು ನನ್ನ ಬಗ್ಗೆ ಬಾಯಿಗೆ ಬಂದಂತೆ ಮಾತನಾಡಿದಿರಿ ಆದರೂ ನನಗೆ ಬೇಸರವಿಲ್ಲ. ಸ್ವಚ್ಛ ಭಾರತದ ಬಗ್ಗೆ ಹೇಳಿದ್ರಿ ಹೌದು ಇದು ನನ್ನ ಭಾರತ ಸ್ವಚ್ಛವಾಗಿರಬೇಕೆಂದು ಬಯಸುವ ಕೋಟಿ ಕೋಟಿ ಭಾರತೀಯರಲ್ಲಿ ನಾನೂ ಒಬ್ಬ, ಅನ್ನುತ್ತಾ ಕೆಳಗೆ ಬಿದ್ದ ಅಡಿಕೆ ಸುಪಾರಿ ಹಾಳೆಯನ್ನು ಎತ್ತಿ ಕಿಸೆಯಲ್ಲಿರಿಸಿಕೊಂಡು, ಇಲ್ಲಿ ಎಲ್ಲರೂ ಆದರ್ಶ ಬಗ್ಗೆ ಮಾತನಾಡುವವರೇ, ಮಾತುಗಳನ್ನು ಎಲ್ಲರೂ ಹೇಳುವವರೇ ನಿಂತಿರುವ ಪ್ರಯಾಣಿಕನಿಗೆ ಸೀಟು ಕೊಡದ ನೀವು ಮತ್ತು ಈ ಹಾಳೆಗೋಸ್ಕರ ಭಾರತದ ಭವಿಷ್ಯದ ಬಗ್ಗೆ ಮಾತನಾಡುವ ನೀವು, ದಿಲ್ಲಿಯಿಂದ ಹಿಡಿದು ರಾಜ್ಯ, ಗ್ರಾಮೀಣ ರಾಜಕೀಯದ ಕುರಿತು ಮಾತನಾಡಿದ್ರಿ. ಆದರೆ ಪಕ್ಕದ ಜಿಲ್ಲೆ ಕೊಪ್ಪಳದಲ್ಲಿ ದಲಿತರ ಮದುವೆ ದಿನ ಊರಿಗೆ ಊರೇ ಬಹಿಷ್ಕಾರ ಹಾಕಿತ್ತು, ಆ ಕುರಿತು ಮಾತನಾಡದ ತಾವು ಸ್ವಚ್ಛ ಭಾರತದ ಬಗ್ಗೆ ಮಾತನಾಡುತ್ತೀರಿ. ಸ್ವಚ್ಛ ಮನಸ್ಸು ಗಳ ಬಗ್ಗೆ ಏಕೆ ಮಾತನಾಡುವುದಿಲ್ಲ. ಸ್ವಚ್ಛ ಭಾರತ ಕಟ್ಟೋಣ ಅದನ್ನು ಸ್ವಚ್ಛ ಮನಸ್ಸುಗಳೊಂದಿಗೆ, ಮನಸ್ಸಿನಲ್ಲಿನ ಮಲೀನತೆಯನ್ನು ಮೊದಲು ಹೋಗಲಾಡಿಸೋಣ, ನನ್ನ ಭಾರತ ಸ್ವಚ್ಛ ಮನಸ್ಸಿನ ಸ್ವಚ್ಛ ಭಾರತವಾಗಲಿ ಎನ್ನುತ್ತಾ ಅಣ್ಣಿಗೇರಿಯ ಬಸ್ ನಿಲ್ದಾಣದಲ್ಲಿ ಬಸ್ಸಿನಿಂದಿಳಿದು ಹೊರಟ. ಆ ಯುವಕನ ಮಾತಿಗೆ ಬಸ್ಸಿನಲ್ಲಿ ಇದ್ದವರೆಲ್ಲಾ ಮೌನ. ಮೌನ ಏನನ್ನು ಸೂಚಿಸುತ್ತದೆ, ಮೌನಂ ಸಮ್ಮತಿ ಲಕ್ಷಣಂ ಅಂತ ಹೇಳುತ್ತಾರೆ. ಆದರೆ ಇಲ್ಲಿ ಅವನ ಮಾತಿಗೆ ಸಮ್ಮತಿಸಿದ ಹಾಗೇ ಕಾಣಿಸುತ್ತಿಲ್ಲ. ಸಾವಿರಾರು ಅರ್ಥವನ್ನು ತಿಳಿಸುವ ಮೌನವನ್ನು ಮುರಿದು ಯಾಕೋ ಇಡೀ ಬಸ್ಸಿನಲ್ಲಿ ಯಾರೂ ಮಾತನಾಡಲಿಲ್ಲ... ಆ ಮಾತು ಸರಿಯಲ್ಲವೇ ಸ್ವಚ್ಛ ಮನಸ್ಸುಗಳೊಂದಿಗೆ ಸ್ವಚ್ಛ ಭಾರತ ಕಟ್ಟೋಣ...

**ನಾಗರಾಜ ನಾಯಕ ಡಿ. ಡೊಳ್ಳಿನ**
ಕೊಪ್ಪಳ



ಇತ್ತೀಚಿನ ವರ್ಷಗಳಲ್ಲಿ 'ಜಟ್ಟ', 'ಲೂಸಿಯಾ', 'ಗೋಧಿ ಬಣ್ಣ ಸಾಧಾರಣ ಮೈಕಟ್ಟು', 'ರಾಮ ರಾಮರೇ', 'ಅಮರಾವತಿ', 'ಯೂ ಟರ್ನ್', 'ಕರ್ವ', 'ತಿಥಿ', 'ಒಂದು ಮೊಟ್ಟೆಯ ಕಥೆ' ಮತ್ತು ಇನ್ನು ಕೆಲವು ಕನ್ನಡ ಚಲನಚಿತ್ರಗಳು ಮೆಗಾಸ್ಟಾರ್ ಕೇಂದ್ರಿತ ನಡೆ ಮತ್ತು ಬಿಗ್ ಬಡ್ಜೆಟ್‌ಗಳ ಮೋಹಕ ಬಲೆಗೆ ಸಿಲುಕದೆ ಸದಭಿರುಚಿಯ ವೀಕ್ಷಕರಲ್ಲಿ ಭರವಸೆಯನ್ನು ಮೂಡಿಸಿದೆ. ಇಂತಹ ಚಲನ ಚಿತ್ರಗಳ ಪಟ್ಟಿಗೆ ಸೇರುತ್ತದೆ ಇತ್ತೀಚೆಗೆ ತೆರೆಕಂಡ ಕನ್ನಡ ಚಲನಚಿತ್ರ 'ದಯವಿಟ್ಟು ಗಮನಿಸಿ'.

ಈ ಚಲನಚಿತ್ರದ ಶೀರ್ಷಿಕೆಯೇ ವೀಕ್ಷಕರ ಗಮನವನ್ನು ಸೆಳೆಯುತ್ತದೆ. ನಾಲ್ಕು ಭಿನ್ನ ಅಧ್ಯಾಯಗಳನ್ನು ಜೊತೆಗೂಡಿಸಿ ಸಿನಿಮಾ ಹಂದರವನ್ನು ಕಟ್ಟಲಾಗಿದೆ. ಇದೇನೂ ವಿನೂತನ ಪ್ರಯತ್ನವಲ್ಲ. ಹಿಂದೆಯೂ ಮಾಡಲಾಗಿದೆ. ತಕ್ಷಣಕ್ಕೆ ನೆನಪಿಗೆ ಬರುವುದು – ೧೯೭೬ರಲ್ಲಿ ತೆರೆಕಂಡ ಪುಟ್ಟಣ್ಣ ಕಣಗಾಲ್ ನಿರ್ದೇಶನದ 'ಕಥಾ ಸಂಗಮ', ಬಾಲಿವುಡ್‌ನ 'ಬಾಂಬೆ ಟಾಕೀಸ್' (೨೦೧೩) (ನಿರ್ದೇಶನ – ಅನುರಾಗ್ ಕಶ್ಯಪ್), ಭಾರತದ ಚಲನಚಿತ್ರರಂಗಕ್ಕೆ ಬೇರೆ ದಿಕ್ಕನ್ನು ತೋರಿಸಿದ ಸತ್ಯಜಿತ್ ರೇ ನಿರ್ದೇಶನದ 'ತೀನ್ ಕನ್ಯಾ' (ಬಿಡುಗಡೆ – ೧೯೬೧, ಇದು ರವೀಂದ್ರನಾಥ್ ಟ್ಯಾಗೂರರ ಮೂರು ಸಣ್ಣ ಕಥೆ ಗಳನ್ನು ಆಧರಿಸಿತ್ತು) ಚಲನಚಿತ್ರಗಳು. ಪಾಶ್ಚಿಮಾತ್ಯ ಚಲನಚಿತ್ರ ನಿರ್ದೇಶಕರ ಪೈಕಿ ರಾಬರ್ಟೊ ರೋಸ್ಸೆಲಿನಿ, ಇಂಗ್ರಿಡ್ ಬರ್ಗ್‌ಮನ್‌ರಂತಹ ಖ್ಯಾತನಾಮರು ಈ ಪರಿಯ ಚಲನಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಈ ರೀತಿಯ ಚಲನಚಿತ್ರಗಳನ್ನು 'ಆ್ಯನ್ತಾಲಜಿ ಫಿಲ್ಮ್' (Anthology Film's) ಎಂದು ಕರೆಯಲಾಗುತ್ತದೆ.

ಚಲನಚಿತ್ರದ title card ತೋರಿಸುವಾಗಲೇ ಹಿನ್ನೆಲೆಯಲ್ಲಿ ಒಂದು ಟ್ರೈನ್ ಚಲಿಸುತ್ತಿರುವ ಶಬ್ದ ಕೇಳುತ್ತದೆ. ಮೊದಲನೇ ದೃಶ್ಯದಲ್ಲೇ ಟ್ರೈನೊಂದು

ನಾಲ್ಕು ಅಧ್ಯಾಯಗಳ

ದಯವಿಟ್ಟು ಗಮನಿಸಿ

**ರೋಹಿತ್ ಪದಕಿ ಚಿತ್ರಕಥೆಯನ್ನು ಬರೆದು, ನಿರ್ದೇಶನವನ್ನೂ ಮಾಡಿದ್ದಾರೆ. ಇದು ಅದರ ಚೊಚ್ಚಲ ಪ್ರಯತ್ನ. 'ದಯವಿಟ್ಟು ಗಮನಿಸಿ'ಯಲ್ಲಿ ಕೆಲವು ಅರೆಕೊರೆಗಳಿವೆ. ಆದರೂ ರೋಹಿತ್‌ರಲ್ಲಿ ಭರವಸೆಯ ನಿರ್ದೇಶಕನಾಗುವ ಕುರುಹುಗಳಿವೆ. ಮುಂದಿನ ಅವರ ಸಿನಿಮಾ ಏನಾಗಿರಬಹುದು ಎಂಬ ಕುತೂಹಲ ನನಗಿದೆ. ಕನ್ನಡ ಸಿನಿಮಾ ಲೋಕದಲ್ಲಿ ಅವರು ಗುರುತಿಸಲ್ಪಡುವ ನಿರ್ದೇಶಕರಾಗಲಿ ಎಂದು ಹಾರೈಸೋಣ. 'ದಯವಿಟ್ಟು ಗಮನಿಸಿ'ಯಂತಹ ಚಲನಚಿತ್ರವನ್ನು ನಿರ್ಮಿಸಲು ಮುಂದೆ ಬಂದ ಕೃಷ್ಣ ಸಾರ್ಥಕ್ ಅವರಿಗೆ ಅಭಿನಂದನೆಗಳು.**

**ಮ. ಶ್ರೀ. ಮುರಳಿ ಕೃಷ್ಣ**

ಪ್ಲಾಟ್‌ಫಾರ್ಮ್ ಒಳಗೆ ಹೋಗುವ, "ದಯವಿಟ್ಟು ಗಮನಿಸಿ..." ಎಂಬ ಉದ್ಘೋಷಣೆ ಕೇಳಿಬರುತ್ತದೆ. ಒಬ್ಬ ಸೂಕ್ಷ್ಮಗ್ರಾಹಿ ವೀಕ್ಷಕನಿಗೆ ಈ ಚಲನಚಿತ್ರ ಯಾನದ ಬಗೆಗೆ ವಸ್ತುವನ್ನು ಹೊಂದಿದೆ ಎಂದು ತಿಳಿದುಬರುತ್ತದೆ. ಹೌದು, ಇಲ್ಲಿ ಹುಡುಕಾಟಗಳ ಜೀವನಯಾನವಿದೆ. 'ಆವೃತ್ತ' ಎಂಬ ಮೊದಲನೆಯ ಅಧ್ಯಾಯದಲ್ಲಿ ನಡುವಯಸ್ಕನೊಬ್ಬನಿಗೆ (ನಟ–ರಾಜೇಶ್ ನಟರಂಗ) ವಿವಾಹವಾಗುವುದರ ಬಗೆಗೆ ಹಿಂಜರಿಕೆಯಿರುತ್ತದೆ. ಒಮ್ಮೆ ಒಬ್ಬ ವೃದ್ಧರು (ನಟ–ಪ್ರಕಾಶ್ ಬೆಳವಾಡಿ) ತಮ್ಮ ಮಗಳಿಗಾಗಿ ಸೂಕ್ತ ವರನ ಹುಡುಕಾಟದಲ್ಲಿರುವಾಗ ಈತನ ಮನೆಗೆ ಬರುತ್ತಾರೆ. ಮಗಳಿಗೆ ಮೊದಲೇ ಮದುವೆಯಾಗಿರುತ್ತದೆ. ಆದರೆ ಕೆಲವೇ ದಿನಗಳಲ್ಲಿ ಅದು ಮುರಿದು ಬಿದ್ದಿರುತ್ತದೆ. ಈ ಸಂಗತಿಯನ್ನು ನೇರವಾಗಿಯೇ ತಿಳಿಸುತ್ತಾರೆ. ಇವರಿಬ್ಬರ ನಡುವೆ ಎರಡು ಮೂರು ಭೇಟಿಗಳಾಗುತ್ತವೆ. ಕೊನೆಗೆ ಮಗಳು ಮನೆಯಿಂದ ಓಡಿಹೋಗಿರುವ ಸುದ್ದಿಯನ್ನು ತಿಳಿಸುತ್ತಾರೆ. ಈ ಅಧ್ಯಾಯದಲ್ಲಿ ಹಾಸ್ಯವಿದೆ. ಆದರೆ ಒಂದು ಮಹಾನಗರದ ಯಾಂತ್ರಿಕ ಜೀವನ, ವೃದ್ಧ ತಂದೆಯಲ್ಲಿ ಮಗಳನ್ನು ವೈವಾಹಿಕ ದಡಕ್ಕೆ ತಲುಪಿಸಬೇಕೆನ್ನುವ ಆತಂಕ ಹಾಗೂ ತಲ್ಲಣ ಅವಿವಾಹಿತನೊಬ್ಬನ ತೊಳಲಾಟ – ಇತ್ಯಾದಿ ಗಹನ ವಿಷಯಗಳು ಹಾಸ್ಯದಲ್ಲಿ ಕಳೆದುಹೋಗುತ್ತವೆ. ವೃದ್ಧ ತನ್ನ ಮಗಳ ಕನ್ಯತ್ವದ ಸರ್ಟಿಫಿಕೇಟ್‌ನ ಪ್ರತಿ ನೀಡುವುದು, ಆಕೆಯ ಮಾರುಕಟ್ಟೆಯ ಧಾರಣೆ ಕುರಿತು ಮಾತನಾಡುವುದು ಇತ್ಯಾದಿ ಅಸಹಜ ವೆಂದೆನಿಸುತ್ತವೆ. ಯಾವ ತಂದೆ ಒಬ್ಬ ಆಗಂತುಕನ ಎದುರು ತನ್ನ ಮಗಳ ಬಗೆಗೆ ಹೀಗೆ ಮಾತನಾಡುತ್ತಾನೆ? ನಡುವಯಸ್ಕನ ಹೊಯ್ದಾಟಗಳನ್ನು ರಾಜೇಶ್ ನಟರಂಗ ಸಮರ್ಥವಾಗಿ ಬಿಂಬಿಸಿದ್ದಾರೆ. ಸಮಾಜದಲ್ಲಿರುವ ವಸ್ತುಸ್ಥಿತಿಯನ್ನು ದಾಟಿಸಬೇಕೆನ್ನುವ ಕಳಕಳಿಯೇನೋ ನಿರ್ದೇಶಕರಿಗಿದೆ. "ನಾನು ಬೆಂಗಳೂರನ್ನೇ ಮದುವೆ ಯಾಗಿದ್ದೇನೆ" ಎಂಬ ಸಂಭಾಷಣೆ ದಟ್ಟ ಅರ್ಥವಿನ್ಯಾಸಗಳನ್ನು ಪಡೆಯುತ್ತವೆ.

'ಅಸ್ತಿತ್ವ' ಎಂಬ ಎರಡನೆಯ ಅಧ್ಯಾಯ ದಲ್ಲಿ ಜೀವನ ನಡೆಸುವುದಕ್ಕೆ ಪಿಕ್‌ಪಾಕೆಟ್ಟನ್ನೇ ವೃತ್ತಿ ಮಾಡಿ ಕೊಂಡಿರುವ 'ಪ್ರಾಕ್ಸಿ' ಎಂಬ ಅಡ್ಡನಾಮವಿರುವ ಯುವಕ, ಆತನ ತುಡಿತಗಳು ಮತ್ತು ಜೀವನದ ಬಗೆಗೆ ತನ್ನದೇ ಕನಸುಗಳಿರುವ ಚಂದದ ಹುಡುಗಿಯ ಕಥೆಯಿದೆ. ಪೊಲೀಸ್ ಸ್ಟೇಷನ್‌ನ ಲಾಕಪ್‌ನಲ್ಲಿ ಇತರರಿಗೆ ಪ್ರಾಕ್ಸಿಯಾಗಿ ದುಡಿಯುವ ಯುವಕನ ಮೂಲಕ ನಿರ್ದೇಶಕರು ಕಾನೂನು ಹಾಗೂ ಸುವ್ಯವಸ್ಥೆಯ ಇಲಾಖೆಯಲ್ಲಿರುವ ಕರ್ಮಕಾಂಡಗಳ ಬಗೆಗೆ ಗಮನವನ್ನು ಸೆಳೆಯುತ್ತಾರೆ. ಹೀಗೆ ಒಂದು ವಾರ ಪ್ರಾಕ್ಸಿಯಾಗುವ ಯುವಕ ತನ್ನ ಮನದನ್ನೆಯನ್ನು ಕಳೆದುಕೊಳ್ಳುತ್ತಾನೆ! ಅದಕ್ಕಾಗಿ ತುಂಬ ಹಪಹಪಿಸುತ್ತಾನೆ.

ಮೂರನೆಯದು 'ಭ್ರಮೆ' ಎಂಬ ಅಧ್ಯಾಯ. ಮೂರು ಧರ್ಮಗಳ ಬಗೆಗೆ ಭ್ರಮನಿರಸನಗೊಳ್ಳುವ ಒಬ್ಬ ಯುವಕ ಸ್ವಾಮೀಜಿಯಾಗುತ್ತಾನೆ. ಪ್ರವಚನಕಾರ ಕೂಡ. ಆತನನ್ನು ಬೆಳೆಸಲು, ಅದರ ಮೂಲಕ ತನ್ನ ಬೇಳೆ ಬೇಯಿಸಿ ಕೊಳ್ಳಲು ಯತ್ನಿಸುವ ಸಹಾಯಕನೊಬ್ಬನ ದೊಂಬರಾಟ, ಇಂತಹ ದೇವಮಾನವ(?)ರ ಬಗೆಗಿನ ಮೀಡಿಯಾದ ಸೆಳೆತ ಮುಂತಾದುವುಗಳನ್ನು ಸೂಕ್ಷ್ಮವಾಗಿ ತೋರಿಸಲಾಗಿದೆ. ಆದರೆ ಸ್ವಾಮೀಜಿ ತನ್ನ ನಿವಾಸದ ಬಳಿ ವಾಸಿಸುವ ವೇಶ್ಯೆಯೊಬ್ಬಳೊಡನೆ ವರ್ತಿಸುವ ಉದಾರತೆರಹಿತ ರೀತಿ ವೀಕ್ಷಕರಲ್ಲಿ "ಹೀಗೇಕೆ?" ಎಂಬ ಪ್ರಶ್ನೆಯನ್ನು ಮೂಡಿಸಿದರೇ, ಅಚ್ಚರಿಯಾಗಬೇಕಿಲ್ಲ.

ಕೊನೆಯ ಅಧ್ಯಾಯ 'ಡಿಕ್ರಿ' (ನಿರ್ಣಯ) ಐಟಿ ಜಗತ್ತಿನ ಡೆಡ್‌ಲೈನ್‌ಗಳ ಭರಾಟೆಯಲ್ಲಿ ಯುವಕನೊಬ್ಬನ ವೈವಾಹಿಕ ಜೀವನದ ಬಿರುಕಿನ ಸುತ್ತ ಕಥೆ ಸುಳಿದಾಡುತ್ತದೆ. ಈತನತ್ತ ಆಕರ್ಷಿತಗೊಳ್ಳುವ ಸಹೋದ್ಯೋಗಿ ಯೊಬ್ಬಳಿಗೆ "ನಾನು ವಿವಾಹಿತ.... ಬೇರೊಬ್ಬನೊಡನೆ ಸಂಪರ್ಕ ಬೆಳಸು. ನಿನ್ನ ಕಾಮವೂ ತಣಿಯುತ್ತದೆ; ದುಡ್ಡೂ ಸಿಗುತ್ತದೆ...!!" ಎಂಬ ಸಂಭಾಷಣೆ (ಇಲ್ಲಿ ಅದರ ಭಾವಾರ್ಥವನ್ನು ಉಲ್ಲೇಖಿಸಲಾಗಿದೆ) ಕಂಪಿಸುವಂತೆ ಮಾಡುತ್ತದೆ.

ನಾಲ್ಕು ಭಿನ್ನ ಕಥೆಗಳನ್ನು ಒಂದು ಚಲನಚಿತ್ರದಲ್ಲಿ ಹೆಣೆದು ವೀಕ್ಷಕರನ್ನು ಹಿಡಿದಿಟ್ಟುಕೊಳ್ಳುವುದು ಸುಲಭದ ಕೆಲಸವಲ್ಲ. ಇಲ್ಲಿರುವ ನಾಲ್ಕು ಅಧ್ಯಾಯಗಳಲ್ಲಿ ಸಮಾನ ಎಳೆಗಳಿವೆ, ಅವೇ – ಜೀವನಪಯಣ ಹಾಗೂ ಹುಡುಕಾಟ. ಅಧ್ಯಾಯಗಳನ್ನು ಕಟ್ಟಿಕೊಟ್ಟಿರುವ ಬಗೆಯಲ್ಲಿ ಏನೋ ಕೊರತೆಯಿದೆ ಎಂದು ಭಾಸವಾದರೂ ನಮ್ಮ ಸಮಾಜದಲ್ಲಿ ಹಾಸುಹೊಕ್ಕಾಗಿರುವ ಹಲವು ಅನಿಷ್ಟ ಸಂಗತಿಗಳ ಮೇಲೆ ಬೆಳಕನ್ನು ಚೆಲ್ಲುವುದರಲ್ಲಿ ನಿರ್ದೇಶಕರು ಸಫಲರಾಗಿದ್ದಾರೆ. ನಾಲ್ಕು ಅಧ್ಯಾಯಗಳ ಪ್ರಮುಖ ಪಾತ್ರಧಾರಿಗಳು ಕೊನೆಗೆ ಟ್ರೈನೊಂದರಲ್ಲಿ ಸೇರುವುದು ಅವರ ಮುಂದಿನ ಜೀವನದ ಅರಸುವಿಕೆಯ ಪಯಣವನ್ನು ಸಂಕೇತಿಸುವಂತಿದೆ.

ಅನೂಪ್ ಸೀಳಿನ್‌ರ ಸಂಗೀತ ಸಶಕ್ತವಾಗಿದೆ. "ಮರೆತೇ ಹೋದೆನು ಹೊರಟ ಕಾರಣ ನಿನ್ನ ಮಿಂಚಿನ ದಾಳಿಯಲಿ..." ಮತ್ತು "ಸಂಚಾರಿ... ಸಂಚಾರಿ... ನಿನ್ನ ದಾರಿ ಎಲ್ಲಿಂದ ಶುರು..." ಎಂಬ ಹಾಡುಗಳು ಚೇತೋ ಹಾರಿಯಾಗಿವೆ; ಗುನುಗುನಿಸು ವಂತಿವೆ. ಹಿನ್ನೆಲೆ ಸಂಗೀತ ದಲ್ಲೂ ಅನೂಪ್ ಗಮನವನ್ನು ಸೆಳೆಯುತ್ತಾರೆ. ಛಾಯಾಚಿತ್ರಗ್ರಹಣ ದಲ್ಲಿ ಅರವಿಂದ್ ಕಶ್ಯಪ್ "ಸೈ" ಎನ್ನಿಸಿಕೊಂಡಿದ್ದಾರೆ! ಹೊರಾಂಗಣ ಚಿತ್ರೀಕರಣದಲ್ಲೂ ಮಿಂಚಿದ್ದಾರೆ. ಪಾತ್ರಧಾರಿಗಳು ತಮಗೊದಗಿದ ಅವಕಾಶ ಗಳನ್ನು ಸದವಕಾಶಗಳನ್ನಾಗಿ ಪರಿವರ್ತಿಸಿದ್ದಾರೆ.

ಈ ಸಿನಿಮಾದಲ್ಲಿರುವ ಪಂಚ್ ಒನ್ ಲೈನರ್ ಡೈಲಾಗುಗಳು ಯುವ ಪ್ರೇಕ್ಷಕರಿಗೆ ಮೆಚ್ಚುಗೆಯಾಗುತ್ತವೆ. ಹಾಗೆಯೇ ಲೈಫ್ ಈಸ್ ಸಿಂಪಲ್. ಸಿಂಪಲ್ ಈಸ್ ಕಾಂಪ್ಲಿಕೇಟಡ್ ಎಂಬ ಟ್ಯಾಗ್‌ಲೈನ್ ಕೂಡ.

ರೋಹಿತ್ ಪದಕಿ ಚಿತ್ರಕಥೆಯನ್ನು ಬರೆದು, ನಿರ್ದೇಶನವನ್ನೂ ಮಾಡಿದ್ದಾರೆ. ಇದು ಅದರ ಚೊಚ್ಚಲ ಪ್ರಯತ್ನ. 'ದಯವಿಟ್ಟು ಗಮನಿಸಿ'ಯಲ್ಲಿ ಕೆಲವು ಅರೆಕೊರೆಗಳಿವೆ. ಆದರೂ ರೋಹಿತ್‌ರಲ್ಲಿ ಭರವಸೆಯ ನಿರ್ದೇಶಕನಾಗುವ ಕುರುಹುಗಳಿವೆ. ಮುಂದಿನ ಅವರ ಸಿನಿಮಾ ಏನಾಗಿರಬಹುದು ಎಂಬ ಕುತೂಹಲ ನನಗಿದೆ. ಕನ್ನಡ ಸಿನಿಮಾ ಲೋಕದಲ್ಲಿ ಅವರು ಗುರುತಿಸಲ್ಪಡುವ ನಿರ್ದೇಶಕರಾಗಲಿ ಎಂದು ಹಾರೈಸೋಣ. 'ದಯವಿಟ್ಟು ಗಮನಿಸಿ'ಯಂತಹ ಚಲನಚಿತ್ರವನ್ನು ನಿರ್ಮಿಸಲು ಮುಂದೆ ಬಂದ ಕೃಷ್ಣ ಸಾರ್ಥಕ್‌ರಿಗೆ ಅಭಿನಂದನೆಗಳು.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧




# ಲಿಂಗಾಯತ ಒಂದು ಸ್ವತಂತ್ರ ಧರ್ಮ

## - ಒಂದು ವಿಶ್ಲೇಷಣೆ

ಲಿಂಗಾಯತ ಸಮುದಾಯಕ್ಕೆ ಸ್ವತಂತ್ರ ಧರ್ಮದ ಸ್ಥಾನಮಾನ ಬೇಕು ಎಂಬ ಬೇಡಿಕೆ ದಿನದಿಂದ ದಿನಕ್ಕೆ ದೊಡ್ಡದಾಗುತ್ತಿದೆ. ಈ ವಿದ್ಯಮಾನದ ಹಿಂದಿನ ಒತ್ತಡಗಳೇನು, ಇದರಲ್ಲಿ ರಾಜಕೀಯವಿದೆಯೇ, ಇದರ ಸೈದ್ಧಾಂತಿಕ ಗಟ್ಟಿತನವೆಷ್ಟು ಇವೇ ಮುಂತಾದ ಪ್ರಶ್ನೆಗಳು ಇಂದು ಸಮಾಜದ ಅನೇಕ ಸ್ತರಗಳಲ್ಲಿ ಚರ್ಚೆಯಾಗುತ್ತಿವೆ. ಆದರೆ ಒಂದೆರಡು ಮುಖ್ಯ ಸಂಗತಿಗಳು ಈ ಸಂದರ್ಭದಲ್ಲಿ ಇನ್ನೂ ಚರ್ಚೆಯ ಆಚೆಗೇ ಉಳಿದಿವೆ; ಅವುಗಳ ವಿಶ್ಲೇಷಣೆ–ವಿವೇಚನೆಯಿಂದ ಈ ವಿಷಯಕ್ಕೆ ಹೆಚ್ಚಿನ ಸ್ಪಷ್ಟತೆ ಬರುತ್ತದೆ ಎಂಬುದು ನನ್ನ ಅನಿಸಿಕೆ. ಆ ನಿಟ್ಟಿನಲ್ಲಿ ಒಂದು ಪುಟ್ಟ ಪ್ರಯತ್ನ ಈ ಲೇಖನ.

'ಲಿಂಗಾಯತವು ಒಂದು ಸ್ವತಂತ್ರ ಧರ್ಮ; ಅದು ಹಿಂದೂ ಧರ್ಮದ ಭಾಗವಲ್ಲ' ಎಂಬ ವಿಚಾರ ಇಂದು ನಿನ್ನೆಯದಲ್ಲ. ಇದಕ್ಕೆ ಶತಮಾನಕ್ಕೂ ಮಿಕ್ಕಿದ ಚರಿತ್ರೆಯಿದೆ. ಲಿಂಗಾಯತವು ಹಿಂದೂ ಧರ್ಮದ ಒಂದು ಭಾಗವೇ ಎಂದು ಹೇಳುವವರೂ ಅನೇಕರಿದ್ದಾರೆ. ಅಲ್ಲದೆ ಹಿಂದೂ ಧರ್ಮದ ಸಬಲೀಕರಣ, ಹಿಂದೂಗಳ ಮೇಲೆ ಆಗಿರುವ ಅನ್ಯಾಯದ ನಿವಾರಣೆ ಎನ್ನುವ ವಿಚಾರಕ್ಕೂ ಅನೇಕ ದಶಕಗಳ ಇತಿಹಾಸವಿದೆ. ಹಿಂದೂಗಳ ಏಕತೆಯ ಈ ಪ್ರಯತ್ನದ ಒಂದು ಮೈಲುಗಲ್ಲು ಅಂದರೆ ಬಾಬರಿ ಮಸೀದಿ – ರಾಮ ಜನ್ಮಭೂಮಿ ಚಳುವಳಿ ಹಾಗೂ ೬ ಡಿಸೆಂಬರ್ ೧೯೯೨ರಂದು ಘಟಿಸಿದ ಬಾಬರಿ ಮಸೀದಿಯ ನಾಶ. ಈ ಚಳುವಳಿಗೆ ಅನೇಕ ಲಿಂಗಾಯತರು ಮತ್ತು ಲಿಂಗಾಯತ ಮಠಾಧೀಶರು ಬಹಿರಂಗವಾಗಿ ಅಥವಾ ತಟಸ್ಥವಾಗಿರುವ ಮೂಲಕ ಮೌನವಾಗಿ ತಮ್ಮ ಬೆಂಬಲ ನೀಡಿದ್ದರು. ಹಿಂದೂ ಏಕತೆಯ ಪ್ರತಿಪಾದಕರು ತಮ್ಮ ಈ ಚಳುವಳಿಗೆ ತಾತ್ವಿಕ ಕೇಂದ್ರಬಿಂದುವನ್ನಾಗಿ ಆರಿಸಿಕೊಂಡಿದ್ದು ರಾಮನನ್ನು. ಅದೂ ಸೀತೆ ಲಕ್ಷ್ಮಣ ಹನುಮಂತರಿರುವ

**ಡಾ॥ ಸಂಜೀವ ಕುಲಕರ್ಣಿ (ಸಂಕುಲಜೀವ)**

ಲಿಂಗಾಯತ ಸಮುದಾಯಕ್ಕೆ ಇಂದು ಹಿಂದುತ್ವದ ಏಕರೂಪೀಕರಣ ಮತ್ತು ಪಶ್ಚಿಮೀಕರಣದ ಏಕರೂಪೀಕರಣ ಇವೆರಡರ ವಿರುದ್ಧವೂ ಎದ್ದು ನಿಂತು ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳುವ ಅನಿವಾರ್ಯತೆ ಬಂದಿದೆ. ಹಾಗೆಂದೇ 'ಲಿಂಗಾಯತವು ಹಿಂದೂ ಧರ್ಮದ ಭಾಗವಲ್ಲ; ಅದು ಸ್ವತಂತ್ರ ಧರ್ಮ' ಎಂಬ ಕೂಗಿಗೆ ಇಂದು ಇಷ್ಟು ದೊಡ್ಡ ಬಲ ಬಂದಿದೆ. ಬಾಬರಿ ಮಸೀದಿ – ರಾಮ ಜನ್ಮಭೂಮಿ ಚಳುವಳಿಯಲ್ಲಿ ಬಹಳ ಜೋರಾಗಿ ಕೇಳಬಂದ ಘೋಷಣೆಯೆಂದರೆ 'ಗರ್ವ್ ಸೇ ಕಹೋ ಹಮ್ ಹಿಂದೂ ಹೈ' ಎಂಬುದು. ಈ ಗರ್ವದ ಭಾವನೆ – ಅದರೊಳಗೆ ಹುದುಗಿರುವ ಹಿಂಸೆಯ ಬೀಜ – ಬಿಲ್ಲು ಹೆದೆಯೇರಿಸಿ ನಿಂತಿರುವ ರಾಮನ ಚಿತ್ರವನ್ನು ಮತ್ತೊಮ್ಮೆ ನೆನಪಿಸಿಕೊಳ್ಳಿ – ಇಂತಹ ಒಂದು ಘೋಷಣೆಯನ್ನು ಒಪ್ಪಿಕೊಳ್ಳುವ ಹಿಂದುತ್ವದ ಮಾನಸಿಕತೆಗೂ 'ದಯವಿರಲಿ ಸಕಲ ಜೀವಾತ್ಮಗಳಲಿ' ಎಂದು ಬಯಸುವ ಶರಣರ ಮಾನಸಿಕತೆಗೂ ಹೊಂದಾಣಿಕೆ ಹೇಗೆ ಸಾಧ್ಯ?

ಕುಟುಂಬ ವತ್ಸಲ ರಾಮನನ್ನಲ್ಲ, ಬಿಲ್ಲು ಹೆದೆಯೇರಿಸಿ ಯುದ್ಧಕ್ಕೆ ಸನ್ನದ್ಧನಾಗಿ ನಿಂತಿರುವ ವೀರಾವೇಶದ ರಾಮನನ್ನು. ಚಳುವಳಿಯ ಉದ್ದಕ್ಕೂ ಬಿಂಬಿತವಾದದ್ದು ರಾಮನ ಈ ಚಿತ್ರವೇ. ಹದಿನೆಂಟು ಇಪ್ಪತ್ತರ ಆಸುಪಾಸಿನ ಇಂದಿನ ಯುವ ಜನಾಂಗದವರು ಅಂತರ್ಜಾಲದಲ್ಲಿ ಓಡಾಡಿ ಈ ಮಾತನ್ನು ಖಾತ್ರಿ ಮಾಡಿಕೊಳ್ಳಬಹುದು. ನಾನು ಈ ಮಾತನ್ನು ಏಕೆ ಹೇಳುತ್ತಿದ್ದೇನೆ? ಏಕೆಂದರೆ ತಾತ್ವಿಕ ಸಂಘರ್ಷದ ಮೂಲ ಇರುವದೇ ಇಲ್ಲಿ. ಬಿಲ್ಲು ಹೆದೆಯೇರಿಸಿ ಕಾಳಗಕ್ಕೆ ಸಿದ್ಧನಾಗಿ, ಅಂದರೆ ಹಿಂಸೆಯನ್ನು ಒಪ್ಪಿಕೊಂಡು ನಿಂತಿರುವ ಈ ರಾಮನ ಹಿಂದುತ್ವಕ್ಕೂ ದಯವೇ ಧರ್ಮದ ಮೂಲವಯ್ಯ ಎಂದು ಹೇಳಿದ ಬಸವಣ್ಣನ ಶರಣ ಧರ್ಮಕ್ಕೂ ಅಜಗಜಾಂತರ. 'ನಾವೆಲ್ಲರೂ ಹಿಂದೂ ನಾವೆಲ್ಲರೂ ಒಂದು' ಎಂದು ಹೇಳುವದು ತಥಾಕಥಿತ ಹಿಂದೂ ಧರ್ಮದ ಸಾಂಸ್ಥೀಕರಣದ ಪ್ರಯತ್ನ. ಇದಕ್ಕೆ ಹಿಂದುತ್ವವಾದಿಗಳು ತಮ್ಮ ಆರಾಧ್ಯ ದೈವವನ್ನಾಗಿ ಆರಿಸಿಕೊಂಡಿದ್ದು ರಾಮನನ್ನು. ಆದರೆ ಉತ್ತರ ಕರ್ನಾಟಕದ ಲಿಂಗಾಯತರಿಗೆ ರಾಮ ಯಾವತ್ತೂ ಪೂಜಿಸುವ ದೇವರೇ ಆಗಿಲ್ಲ. ಅಂದರೆ ಲಿಂಗಾಯತರು ರಾಮನನ್ನು ಆರಾಧಿಸುವದಿಲ್ಲ. ಮನೆಯಲ್ಲಿ ರಾಮನ ಫೋಟೋ ಹಾಕುವದಿಲ್ಲ.

ಒಂದೆರಡು ನಿದರ್ಶನ ನೋಡೋಣ. ನನ್ನ ಹುಟ್ಟೂರು ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಸತ್ತಿ ಎಂಬ ಹಳ್ಳಿ. ಹೆಚ್ಚು ಪ್ರಮಾಣದ ಬ್ರಾಹ್ಮಣರಿರುವ ಕೃಷ್ಣಾ ನದಿ ದಂಡೆಯ ಊರಿದು. ಊರ ಹೊರಗೆ ನದಿ ದಂಡೆಗೆ ರಾಮನ ಗುಡಿಯಿದೆ. ಗುಡಿಯ ಎದುರಿಗೆ ನದಿಗೆ ಹೋಗುವ ಜಾಗಕ್ಕೆ 'ಹಾರುವರ ಹೊಳೆ' ಎಂದು ಕರೆಯುತ್ತಾರೆ. ಅದು ಕೇವಲ ಊರಿನ ಬ್ರಾಹ್ಮಣರ ಬಳಕೆಗೆ ಮಾತ್ರ ಮೀಸಲು. ಇತರೆ ಜಾತಿಯವರಿಗೆ ಹೊಳೆಯ ಬಳಕೆಗೆ ಸ್ವಲ್ಪ ದೂರ ಪ್ರತ್ಯೇಕ ಜಾಗವಿದೆ. ಕಳೆದ ಐವತ್ತು ವರ್ಷಗಳಿಂದ ನನಗೆ ಗೊತ್ತಿರುವ ಪ್ರಕಾರ ಊರಿನ ಲಿಂಗಾಯತರು ಈ ರಾಮದೇವರ ಗುಡಿಗೆ ನಡೆದುಕೊಳ್ಳುವದಿಲ್ಲ; ವರ್ಷಕ್ಕೊಮ್ಮೆ ನಡೆಯುವ ರಾಮನವಮಿಯ ಪೂಜೆ ಸಂಭ್ರಮಾಚರಣೆ ಮತ್ತು ಸಾಮೂಹಿಕ ಭೋಜನ ಬ್ರಾಹ್ಮಣರಿಗೆ ಮಾತ್ರ. ಲಿಂಗಾಯತರು ಇದರಲ್ಲಿ ಭಾಗವಹಿಸುವದಿಲ್ಲ. "ಅಯ್ಯೋ ಇದು ಯಾವದೋ ಮೂಲೆಯ ಹಳ್ಳಿಯ ಕತೆ" ಅಂದಿರಾ? ಹಾಗಾದರೆ ಧಾರವಾಡಕ್ಕೆ ಬರ್‍ರಿ. ನಾನು ಕಳೆದ ಮೂವತ್ತು ವರ್ಷಗಳಿಂದ ಧಾರವಾಡದಲ್ಲಿ ವಾಸಿಸುತ್ತಿದ್ದೇನೆ. ಧಾರವಾಡ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ. ವಿದ್ಯಾಕಾಶಿ. ಶಿಕ್ಷಣ, ಸಾಹಿತ್ಯ, ಕಲೆಗಳ ಪುನರುತ್ಥಾನದ ಕೇಂದ್ರ. ಧಾರವಾಡದ ಮಾಳಮಡ್ಡಿಯಲ್ಲಿ ಎರಡು ರಾಮನ ಗುಡಿಗಳಿವೆ. ಇವತ್ತಿಗೂ ಲಿಂಗಾಯತರು ಈ ರಾಮನ ಗುಡಿಗಳಿಗೆ ಹೋಗುವದಿಲ್ಲ. ಈ ಗುಡಿಗಳಲ್ಲಿ ಕೇವಲ ಬ್ರಾಹ್ಮಣರ ಪೂಜೆ, ಪುರಾಣ, ಪ್ರವಚನ, ಮದುವೆ ಮುಂತಾದವು ನಡೆಯುತ್ತವೆಯೇ ಹೊರತು ಬಸವಾದಿ ಶರಣರ ಕುರಿತಾದ ಅಥವಾ ವಚನಗಳ ಕುರಿತಾದ ಪ್ರವಚನಗಳು ನಡೆಯುವದಿಲ್ಲ.

ಇಲ್ಲಿ ತಕ್ಷಣ ಇನ್ನೊಂದು ಪ್ರಶ್ನೆ ಎದುರಾಗುತ್ತದೆ. ಲಿಂಗಾಯತರು ರಾಮನನ್ನು ದೇವರೆಂದು ಪರಿಗಣಿಸದೆ ಇರಬಹುದು. ಆದರೆ ಹನುಮಂತನನ್ನು ಪೂಜಿಸುತ್ತಾರಲ್ಲ? ಇದು ಹೇಗೆ? ಹನುಮಂತ ರಾಮನ ಬಂಟನಲ್ಲವೇ? ಹೌದು, ಹನುಮಂತ ಬ್ರಾಹ್ಮಣ, ಲಿಂಗಾಯತ ಹಾಗೂ ಇತರ ಎಲ್ಲ ಸಮುದಾಯದವರಿಗೂ ದೇವರು. ಊರಿಗೊಬ್ಬ ಹಣಮಪ್ಪ ಇರಲೇಬೇಕು; ಊರು ಸುಟ್ಟರೂ ಹಣಮಪ್ಪ ಸುಡುವದಿಲ್ಲ ಎಂಬುದು ದಿಟವೇ. ಪ್ರಾಚೀನ ಭಾರತದಲ್ಲಿ ದೇವತೆಗಳು ಸೃಷ್ಟಿಗೊಂಡಿದ್ದು ಮತ್ತು ಕ್ರಮೇಣ ರೂಪಾಂತರಗೊಳ್ಳುತ್ತ ಬಂದಿದ್ದು ಒಂದು ಬಲು ಆಸಕ್ತಿದಾಯಕ ವಿಷಯ. ಹನುಮಂತ ಮಂಗ ಅಥವಾ ವಾನರ. ನಮ್ಮ ಸಂಸ್ಕೃತಿಯಲ್ಲಿ ದೇವರೆಂದು ಪೂಜಿಸಲ್ಪಡುವ ಪ್ರಾಣಿ–ಪಕ್ಷಿಗಳ ದೊಡ್ಡ ಪಟ್ಟಿಯೇ ಇದೆ. ಹನುಮಂತ, ಗರುಡ, ನಾಗ, ನಂದಿ, ಕಾಮಧೇನು, ವರಾಹ, ಗಜಾನನ... ಹೀಗೆ ಅನೇಕ ನಿದರ್ಶನಗಳನ್ನು ಕೊಡಬಹುದು. ಪುರಾತನ ಇತಿಹಾಸ ತಜ್ಞರ ಪ್ರಕಾರ ಪ್ರಾಚೀನ ಕಾಲದಲ್ಲಿ ಬುಡಕಟ್ಟು ಜನಾಂಗದವರು ಆನೆ, ಹಾವು, ಪಕ್ಷಿ ಮುಂತಾದ ಲಾಂಛನ ದೇವತೆಗಳನ್ನು (ಟೋಟೆಮ್ ದೇವತೆಗಳು) ಹೊಂದಿರುತ್ತಿದ್ದರು. ಕಾಲಾಂತರದಲ್ಲಿ ಈ ಲಾಂಛನ ದೇವತೆಗಳು ಬ್ರಾಹ್ಮಣ ಕ್ಷತ್ರಿಯರ ವೈದಿಕ ದೇವತೆಗಳಿಗೆ ಅಧೀನ ದೇವತೆಗಳಾಗಿ ಮಾರ್ಪಾಡುಗೊಂಡವು. ಆದುದರಿಂದ ಲಿಂಗಾಯತರಾದಿಯಾಗಿ ಎಲ್ಲ ಸಮುದಾಯದವರು ಹನುಮಂತನನ್ನು ಪೂಜಿಸುತ್ತಾರೆ. ಮನೋವೈಜ್ಞಾನಿಕವಾಗಿ ವಿಶ್ಲೇಷಿಸಿದಾಗ ಗೊತ್ತಾಗುವ ಸಂಗತಿಯೆಂದರೆ ಜನರು ಹನುಮಂತನನ್ನು ಅವನ ಗುಣವಿಶೇಷಗಳಿಗಾಗಿ ಆರಾಧಿಸುತ್ತಾರೆಯೇ ಹೊರತು ಅವನು ರಾಮನ ಬಂಟನೆಂದಲ್ಲ. ಏಕೆಂದರೆ ಮೂಲದಲ್ಲಿ ರಾಮ ವೈದಿಕ, ಹನುಮಂತ ಅವೈದಿಕ. ಇಲ್ಲಿ ಇನ್ನೂ ಒಂದು ವಿಶೇಷ ಬೆಳವಣಿಗೆಯನ್ನು ಗಮನಿಸಬೇಕು. ಹಿಂದೂ ಏಕತೆಯ ಪ್ರಯತ್ನದಲ್ಲಿ ರಾಮನನ್ನು ಆರಾಧ್ಯ ದೇವತೆಯ ರೂಪದಲ್ಲಿ ಕೇಂದ್ರ ಸ್ಥಾನಕ್ಕೆ ತಂದು ಇಪ್ಪತ್ತೈದು ವರ್ಷಗಳೇ ಕಳೆದಿವೆ. ಇದಕ್ಕಾಗಿ ಬಹಳ ದೊಡ್ಡ ರಾಜಕೀಯ ಮತ್ತು ಸಾಮಾಜಿಕ ಶ್ರಮ ವ್ಯಯವಾಗಿದೆ. ಈ ಅವಧಿಯಲ್ಲಿ ಉತ್ತರ ಕರ್ನಾಟಕದಲ್ಲಿ – ದಕ್ಷಿಣ ಕರ್ನಾಟಕದ ಬಗ್ಗೆ ನನಗೆ ಗೊತ್ತಿಲ್ಲ – ಹಳ್ಳಿ ಹಳ್ಳಿಗಳಲ್ಲಿ, ಶಹರಗಳ ಹೊಸ ಬಡಾವಣೆಗಳಲ್ಲಿ ಅಥವಾ ರಸ್ತೆ ಪಕ್ಕದಲ್ಲಿ ಸಾವಿರಾರು ಗುಡಿಗಳು ಸ್ಥಾಪಿತಗೊಂಡಿವೆ. ಈ ಎಲ್ಲ ಗುಡಿಗಳೂ ಒಂದೋ ಹನುಮಂತನ ಗುಡಿಗಳು ಅಥವಾ ಗಣಪತಿಯ ಗುಡಿಗಳು. ಲಿಂಗಾಯತರ ಬಾಹುಳ್ಯವಿರುವ ಉತ್ತರ ಕರ್ನಾಟಕದ ಜನಮಾನಸದಲ್ಲಿ ರಾಮ ಇವತ್ತಿಗೂ ಆರಾಧ್ಯ ದೇವತೆಯಲ್ಲ ಎಂಬುದಕ್ಕೆ ಇದು ಸಾಕ್ಷಿ.

ಇಲ್ಲಿ ಅಡಕವಾಗಿರುವ ಜಾತೀಯತೆಯ ತಾರತಮ್ಯವನ್ನು ನೋಡಿ – 'ಹರಿ ಸರ್ವೋತ್ತಮ ವಾಯು ಜೀವೋತ್ತಮ' ಎಂಬುದು ಮಾಧ್ವ ಬ್ರಾಹ್ಮಣರ ಅತಿಮುಖ್ಯ ಪರಿಕಲ್ಪನೆ. ಈ ಪರಿಕಲ್ಪನೆ ಶತಮಾನಗಳಿಂದಲೂ ಸಾಕಾರಗೊಂಡಿರುವ ರೀತಿ ಯಾವುದು? ಅದ್ವೈತದ ಸ್ಮಾರ್ತರಿಗಿಂತಲೂ ದ್ವೈತದ ತಾವು ಮಾಧ್ವ ಬ್ರಾಹ್ಮಣರು ಸಂಪೂರ್ಣ ಭಿನ್ನ ಎಂದು ಜೀವಿಸುತ್ತಾ ಬಂದಿರುವ ಮಾಧ್ವರ ಪ್ರಕಾರ ಹನುಮಂತ ವಾಯುವಿನ ಅವತಾರ. ಅವರು ಹೇಳುವದು – 'ವಾಯು ಜೀವೋತ್ತಮ ಹೌದು ಆದರೆ ಹರಿಯೇ ಸರ್ವೋತ್ತಮ; ಹನುಮಂತ ದೇವರು ಹೌದು ಆದರೆ ರಾಮನೇ ಅವನಿಗಿಂತ ಶ್ರೇಷ್ಠ. ನೀವು ಲಿಂಗಾಯತರನ್ನು ಒಳಗೊಂಡು ಬ್ರಾಹ್ಮಣೇತರರು ಹನುಮಂತನನ್ನು ಮಾತ್ರ ಪೂಜಿಸಿರಿ, ನಾವು ಹರಿಯ ಅವತಾರವಾದ ರಾಮನನ್ನು ಪೂಜಿಸುತ್ತೇವೆ. ಪ್ರಭು ನಮ್ಮವನು ಸೇವಕ ನಿಮ್ಮವನು?'

ಹೀಗೆ ಕಳೆದ ೨೫–೩೦ ವರ್ಷಗಳಿಂದಲೂ ಹಿಂದೂ ಏಕತೆಯ ಪ್ರತಿಪಾದಕರು ಲಿಂಗಾಯತರ ಮೇಲೆ ರಾಮನನ್ನು ಆರಾಧ್ಯ ದೇವತೆಯನ್ನಾಗಿ ಹೇರಲು ಮತ್ತು ಆ ಮೂಲಕ ಏಕಸಂಸ್ಕೃತಿಯನ್ನು (ಮಾನೊ ಕಲ್ಚರ್) ಹೇರಲು ಪ್ರಯತ್ನಿಸುತ್ತಿದ್ದಾರೆ.

## ಬಿಡುಗಡೆಯ ದಾರಿಯಲಿ

ಬಿಡುಗಡೆಯ ದಾರಿಯಲಿ ನೋವೆಷ್ಟೊ ನಲಿವಷ್ಟೆ
ಲೆಕ್ಕ ಇಟ್ಟವರಿಲ್ಲ 'ಚುಕ್ತಾ' ಎಂದವರಿಲ್ಲ

ಉಸಿರು ಕರಗಸವಾಗೆ ಮೈತುಂಬ ಕೆನ್ನೀರು
ಹೆಸರು ಹೇಳದ ಕಷ್ಟ ಕತ್ತಲೆಯ ದಾರಿಯಲಿ

ನೂರು ನಿನ್ನೆಗೂ ಭಾರ ಇಂದು ಬೀಸುವ ಗಾಳಿ
'ಮಾತುಂಟು ಬಾಯಿಲ್ಲ' ಎಂಬಂಥ ಸ್ಥಿತಿಯಲ್ಲಿ!

ಹೊಸತಲ್ಲವೀ ಕತೆಯು ಏಗಲಾಗದ ಸ್ಥಿತಿಯು
ಮಾರುದ್ದ ಮನೆಯೊಳಗೆ ಬೆಂಕಿಯಾಟದ ಗತಿಯು!

ಯಾರು ಯಾರಿಗೆ ಯಾವ ದಾರಿಯಲಿ ಕೂಡುವರೊ
ತಲೆಮಾರ ಗುರುತಿಲ್ಲ ಹೊಸತೇನ ತಂದಾರೊ!

ನಂಬಿದ್ದು ನಿಜ ಮುಂದೆ ನಂಬುವುದು ನಿಜ ಬೆಳಕ
ಮೋಡ ಮುತ್ತದೆ ಇರಲಿ ಚುಕ್ಕೆ ಮೂಡುವ ತನಕ.

**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲು, ಅಂಕೋಲ (ಉ.ಕ. ಜಿಲ್ಲೆ)







ಆದರೆ ಲಿಂಗಾಯತರಾದಿಯಾಗಿ ಸಮಾಜದ ಬಹುಸಂಖ್ಯಾತ ಜನರು ಇದನ್ನು ತಾತ್ವಿಕವಾಗಿ ಹಾಗೂ ಪ್ರತ್ಯಕ್ಷವಾಗಿ ನಿರಾಕರಿಸುತ್ತ ಪ್ರತಿಭಟಿಸುತ್ತಲೇ ಬಂದಿದ್ದಾರೆ – ವೈದಿಕ ರಾಮ ದೇವರಿರಬಹುದು, ನಮಗಲ್ಲ; ನಮಗೆ ಅವೈದಿಕ ಗಣಪತಿ, ಹನುಮಂತ ಇವರೇ ದೇವರು ಎಂದು ಹೇಳುವ ಮೂಲಕ.

ಹಿಂದೂ ಏಕತೆಯ ಪ್ರತಿಪಾದಕರು ಮತ್ತು ಲಿಂಗಾಯತ ಸ್ವತಂತ್ರ ಧರ್ಮ ಪ್ರತಿಪಾದಕರು ಇವರ ನಡುವಿನ ಭಿನ್ನಾಭಿಪ್ರಾಯವನ್ನು ಇನ್ನೂ ಒಂದು ದೃಷ್ಟಿಕೋನದಿಂದ ವಿಶ್ಲೇಷಿಸೋಣ. ಅಕ್ಕ-ಅಲ್ಲಮ ಬಸವಾದಿ ಶರಣರ ಚಳುವಳಿ ನಡೆದಿದ್ದು ಒಂಬತ್ತು ಶತಮಾನಗಳ ಹಿಂದೆ. ಸಮಾನತೆ ಮತ್ತು ಬಹುತ್ವದ ಆಧಾರದ ಮೇಲೆ ರೂಪುಗೊಂಡ ಈ ಚಳುವಳಿ ನಮ್ಮ ನಾಡಿನಲ್ಲಿ ಸೈದ್ಧಾಂತಿಕ ಮತ್ತು ಸಾಮಾಜಿಕ ಕ್ರಾಂತಿಯನ್ನೇ ಮಾಡಿತು. ಆದರೆ ವೈದಿಕ ಸಮುದಾಯವು ತಾತ್ವಿಕವಾಗಿ ಇದನ್ನು ಸ್ವೀಕರಿಸುವದಿಲ್ಲ – ಗೌರವಿಸುವದಿಲ್ಲ. ಸ್ವೀಕಾರ, ಗೌರವ ಅಂದರೇನು? ಒಂದು ಸಂಸ್ಕೃತಿಯಲ್ಲಿ ಸ್ವೀಕಾರ ಗೌರವ ಅಂದರೆ ಮಕ್ಕಳಿಗೆ ಇಂತಹ ಸಾಧಕರ ಹೆಸರಿಡುವ ಮೂಲಕ ವ್ಯಕ್ತಪಡಿಸುವದು. 'ನಾವೆಲ್ಲರೂ ಹಿಂದೂ ನಾವೆಲ್ಲರೂ ಒಂದು' ಎಂದು ಹೇಳುವ ವೈದಿಕ – ಬ್ರಾಹ್ಮಣ ಸಮುದಾಯದವರು ಇವತ್ತಿಗೂ ಕೂಡ ಅಪ್ಪಿತಪ್ಪಿಯೂ ತಮ್ಮ ಮಕ್ಕಳಿಗೆ ಅಕ್ಕಮಹಾದೇವಿ, ಅಲ್ಲಮಪ್ರಭು ಅಥವಾ ಬಸವ ಮುಂತಾದ ಹೆಸರುಗಳನ್ನು ಇಡುವದಿಲ್ಲ. ಎಂಟು ನೂರು ವರ್ಷಗಳಷ್ಟು ದೀರ್ಘ ಕಾಲ ಕಳೆದುಹೋಗಿದ್ದರೂ ವೈದಿಕ – ಬ್ರಾಹ್ಮಣ ಸಮುದಾಯದವರು ಶರಣರನ್ನು, ಶರಣ ಚಳುವಳಿಯನ್ನು, ಇವರು ನಮ್ಮವರು ಇದು ನಮ್ಮದು ಎಂದು ಯಾಕೆ ಸ್ವೀಕರಿಸಿಲ್ಲ –ಗೌರವಿಸಿಲ್ಲ?

ಅಂದರೆ ಇದು ಸೈದ್ಧಾಂತಿಕವಾಗಿ ಏಕಸಂಸ್ಕೃತಿ ಮತ್ತು ಬಹುಸಂಸ್ಕೃತಿಗಳ ನಡುವಿನ ಕದನ. ಇಪ್ಪತ್ತೈದು ವರ್ಷಗಳ ಈಚೆಗೆ ರಾಮನನ್ನು ಹೇರುವ ಮೂಲಕ ಮತ್ತು 'ನಾವೆಲ್ಲರೂ ಹಿಂದೂ ನಾವೆಲ್ಲರೂ ಒಂದು' ಎಂದು ಹೇಳುವ ಮೂಲಕ ಏಕಸಂಸ್ಕೃತಿಯನ್ನು ತರುವ ಈ ಪ್ರಯತ್ನದ ಹಿಂದಿರುವ ಅಪಾಯ ಅನೇಕ ಪ್ರಜ್ಞಾವಂತ ಲಿಂಗಾಯತರನ್ನು ಕಾಡಿರಲು ಸಾಕು. ಅದರಲ್ಲೂ ಮುಖ್ಯವಾಗಿ ಕಳೆದ ಮೂರು ವರ್ಷಗಳಲ್ಲಿ ಹಿಂದುತ್ವದ ಶಕ್ತಿಗಳ ರಾಜಕೀಯ ಬಲ ಹೆಚ್ಚುತ್ತಿರುವದು ಲಿಂಗಾಯತ ಮನಸ್ಸುಗಳನ್ನು ಇನ್ನೂ ಹೆಚ್ಚು ವಿಚಲಿತಗೊಳಿಸಿದೆ. ಇದು ನಮ್ಮ ಉಳಿವು ಅಳಿವಿನ ಕಾಲ. ಈಗ ನಾವು ಎಚ್ಚೆತ್ತುಕೊಳ್ಳದಿದ್ದರೆ ಶರಣ ತತ್ವಗಳು, ವಚನ ಸಾಹಿತ್ಯ, ಇಷ್ಟ ಲಿಂಗ ಆಧಾರಿತ ಪ್ರಜ್ಞಾಪೂರ್ಣ ಜೀವನಶೈಲಿ ಮುಂತಾದವೆಲ್ಲ ಹಿಂದೂ ಏಕತೆಯ ಪ್ರವಾಹದಲ್ಲಿ ಕೊಚ್ಚಿಕೊಂಡುಹೋಗಿಬಿಡುತ್ತವೆ ಎಂಬ ಭಯ ಈ ಪ್ರಾಜ್ಞರನ್ನು ಚಿಂತನೆಗೆ ಹಚ್ಚಿದೆ. ಆದುದರಿಂದಲೇ 'ಲಿಂಗಾಯತವು ಸ್ವತಂತ್ರ ಧರ್ಮ' ಎಂಬ ಬೇಡಿಕೆಗೆ ಈಗ ಇಷ್ಟು ದೊಡ್ಡ ಬಲ ಬಂದಿದೆ.

ಇನ್ನೊಂದು ಮಹತ್ವದ ಮಾತು. 'ಲಿಂಗಾಯತರು ಹಿಂದೂಗಳಲ್ಲ; ಲಿಂಗಾಯತರಿಗೆ ಸ್ವತಂತ್ರ ಧರ್ಮದ ಸ್ಥಾನಮಾನ ಬೇಕು' ಎಂಬ ವಿಷಯ ನಾಡಿನ ಉದ್ದಗಲಕ್ಕೂ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಚರ್ಚೆಯಾಗುತ್ತಿದೆ. ಆದರೆ ಆರ್.ಎಸ್.ಎಸ್. ಹಾಗೂ ವಿಶ್ವ ಹಿಂದೂ ಪರಿಷತ್ ಒಳಗೊಂಡು ಇಡೀ ಸಂಘ ಪರಿವಾರ ಸಂಪೂರ್ಣ ಮೌನವಾಗಿದೆ. ಪೇಜಾವರರೊಬ್ಬರು ಮಾತ್ರ ಒಂದು ದಿನ ಲಿಂಗಾಯತ ಪ್ರತ್ಯೇಕ ಧರ್ಮವಲ್ಲ ಎನ್ನುವ ಅರ್ಥದ ಹೇಳಿಕೆ ಕೊಟ್ಟು ಮರುದಿನವೇ 'ಅದನ್ನು ನಾನು ಪ್ರೀತಿಯಿಂದ ಹೇಳಿದ್ದೆ, ಅಷ್ಟೆ' ಎಂದು ಸಮಜಾಯಿಷಿ ನೀಡಿ ಸುಮ್ಮನಾದರು. 'ಈ ವಿದ್ಯಮಾನ ಯಾವ ಲೆಕ್ಕದ್ದೂ ಅಲ್ಲ. ಈ ಸಭೆ–ಚರ್ಚೆಗಳಿಂದ ಏನೂ ಆಗುವದಿಲ್ಲ; ಇದು ಇತ್ತಲಿಂದ ಬೀಸಿ ಅತ್ತ ಮಾಯವಾಗಿ ಹೋಗಿಬಿಡುವ ಗಾಳಿಯ ಅಲೆಯಷ್ಟೇ' ಎಂದು ಆರ್.ಎಸ್.ಎಸ್. – ಸಂಘ ಪರಿವಾರ ಹೇಳುವ ಹಾಗಿಲ್ಲ. ನಾಡಿನ ನೂರಾರು ಮಠಾಧೀಶರು ಮತ್ತೆ ಮತ್ತೆ ಸಭೆ ಸೇರುತ್ತಿದ್ದಾರೆ; ಸಮಾಲೋಚನೆ ನಡೆಸುತ್ತಿದ್ದಾರೆ; ಬಹಿರಂಗ ಮೆರವಣಿಗೆಗಳು ನಡೆಯುತ್ತಿವೆ; ಮುಖ್ಯಮಂತ್ರಿಯನ್ನೂ ಹಿಡಿದು ಅನೇಕ ಮಂತ್ರಿಗಳು ರಾಜಕಾರಣಿಗಳು ಸಭೆ ನಡೆಸುತ್ತಿದ್ದಾರೆ, ಹೇಳಿಕೆ ನೀಡುತ್ತಿದ್ದಾರೆ. ಆದರೂ ಆರ್.ಎಸ್.ಎಸ್. ಮಾತ್ರ ಮೌನವಾಗಿದೆ. ದೇಶದ ಯಾವದೋ ಮೂಲೆಯಲ್ಲಿ ಒಬ್ಬ ಹಿಂದೂ ಯುವತಿ ಒಬ್ಬ ಮುಸ್ಲಿಂ ಯುವಕನನ್ನು ಮದುವೆಯಾದರೆ ಅದು ಇವರಿಗೆ ದೊಡ್ಡ ಸುದ್ದಿಯಾಗುತ್ತದೆ. ಇಂತಹ ನೂರು ಅಥವಾ ಸಾವಿರ ಹಿಂದೂ–ಮುಸ್ಲಿಂ ಮದುವೆಗಳಿಂದ ಹಿಂದೂಗಳ ಸಂಖ್ಯೆ ಎಷ್ಟು ಕಡಿಮೆಯಾಗುತ್ತದೆ? ಆದರೆ ಇಲ್ಲಿ ನೂರಲ್ಲ ಸಾವಿರವಲ್ಲ ನಾಲ್ಕು ಕೋಟಿ ಲಿಂಗಾಯತರು 'ನಾವು ಹಿಂದೂಗಳಲ್ಲ, ನಾವು ಲಿಂಗಾಯತರು; ನಮ್ಮದು ಹಿಂದೂ ಧರ್ಮವಲ್ಲ, ಲಿಂಗಾಯತ ಧರ್ಮ; ನಿಮ್ಮ ನಡೆ ನಿಮಗೆ, ನಮ್ಮ ನಡೆ ನಮಗೆ' ಎಂದು ಜಗಜ್ಜಾಹೀರವಾಗಿ ಸಾರುತ್ತಿರುವಾಗಲೂ ಆರ್.ಎಸ್.ಎಸ್. ಮೌನವಾಗಿದೆ. ಶ್ರೀ ಚಿದಾನಂದಮೂರ್ತಿ ಮತ್ತು ಶ್ರೀ ಭೈರಪ್ಪ ಮುಂತಾದ ಒಬ್ಬಿಬ್ಬರು ಬಲಪಂಥೀಯ ಬುದ್ಧಿಜೀವಿಗಳ ಲೇಖನ – ಹೇಳಿಕೆ ಬಿಟ್ಟರೆ ಸಂಘ ಪರಿವಾರದವರ ಕಡೆಯಿಂದ ಈವರೆಗೂ ಅಧಿಕೃತವಾಗಿ 'ಲಿಂಗಾಯತರ ಈ ನಡೆ ತಪ್ಪು; ಇದು ಹಿಂದೂ ಧರ್ಮ ವಿರೋಧಿ ನಡೆ' ಎಂದು ಪ್ರತಿಪಾದಿಸುವ ಒಂದೇ ಒಂದು ಹೇಳಿಕೆಯೂ ಬಂದಿಲ್ಲ. ಇದು ಹಿಂದೂ ಧರ್ಮದ ರಕ್ಷಣೆಯೇ? ಸಂಘ ಪರಿವಾರದ ಇನ್ನೊಂದು ಮುಖವಾಗಿರುವ ಬಿಜೆಪಿಯಂತೂ ತನ್ನ ಶಾಸಕರಿಗೆ 'ಈ ವಿಷಯದ ಕುರಿತು ಬಹಿರಂಗ ಹೇಳಿಕೆ ನೀಡತಕ್ಕದ್ದಲ್ಲ' ಎಂದು ಅಧಿಕೃತವಾಗಿ ತಾಕೀತು ಮಾಡಿದೆ. ಇದು ಯಾವ ಪ್ರಜಾಪ್ರಭುತ್ವ? ಯಾಕೆ ಸಂಘ ಪರಿವಾರದವರಿಗೆ ಲಿಂಗಾಯತ ಸ್ವತಂತ್ರ ಧರ್ಮ ಎಂಬ ವಾದವನ್ನು ಸೈದ್ಧಾಂತಿಕವಾಗಿ ವಿರೋಧಿಸಲು ಆಗುತ್ತಿಲ್ಲ ?

ಲಿಂಗಾಯತವು ಒಂದು ಸ್ವತಂತ್ರ ಧರ್ಮ ಎನ್ನುವ ಈ ವಿದ್ಯಮಾನದಲ್ಲಿ ರಾಜಕೀಯವಿಲ್ಲವೇ ಎಂಬುದು ಇನ್ನೊಂದು ಮುಖ್ಯ ಪ್ರಶ್ನೆ. ಉತ್ತರ ಬಹಳ ಸ್ಪಷ್ಟ: ಹೌದು ಇದರಲ್ಲಿ ರಾಜಕೀಯವಿದೆ. ಆದರೆ ಹೀಗೆಂದ ಮಾತ್ರಕ್ಕೆ ಇದರೊಳಗಿರುವುದು ಕೇವಲ ಕೀಳು ರಾಜಕೀಯ ಮಾತ್ರ ಎಂದು ತೀರ್ಮಾನಿಸಿಬಿಡುವದು ತಪ್ಪಾಗುತ್ತದೆ. ಈ ವಿಷಯದ ಕುರಿತು ಚರ್ಚೆ ಮಾಡುವಾಗ ಅನೇಕರು, 'ಓ ಇದು ಸ್ವಾರ್ಥದ, ಅಧಿಕಾರದ ರಾಜಕೀಯ' ಎಂದು ಷರಾ ಎಳೆದುಬಿಡುತ್ತಾರೆ. ಆದರೆ ಸ್ವಲ್ಪ ವಿವೇಚನೆ ಮಾಡಿದ್ದಾದರೆ ಇದರಲ್ಲಿ ಎರಡು ತರದ ರಾಜಕೀಯ ಇರುವದು ಗೊತ್ತಾಗುತ್ತದೆ. ಯಾವ ಕಾಲಘಟ್ಟದಲ್ಲಿಯೇ

### ‘ಹೊಸತು’ ಚಂದಾದಾರ / ಓದುಗರಿಗೆ ಮಾಹಿತಿ

**ಜನವರಿ ೨೦೧೮ರ ‘ಹೊಸತು’ ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿದ್ದು ಲೇಖನಗಳ ಆಯ್ಕೆ/ ಪರಿಷ್ಕರಣೆ ಮುಂತಾದ ಕೆಲಸಗಳಿಗೆ ಹೆಚ್ಚಿನ ಕಾಲಾವಕಾಶ ಬೇಕಿರುವುದರಿಂದ ಓದುಗರಿಗೆ ಸಂಚಿಕೆ ೨೦೧೮ ಜನವರಿ ೧೮ರೊಳಗೆ ತಲುಪುವುದು. ಓದುಗರು ಸಹಕರಿಸಬೇಕಾಗಿ ವಿನಂತಿ.**

ಆಗಲಿ ಸಮಾಜದಲ್ಲಿ ಮಹತ್ವದ ಬದಲಾವಣೆಗಳಾಗುವ ಸಂದರ್ಭದಲ್ಲಿ ಅದರಲ್ಲಿ ರಾಜಕೀಯ ಬಂದೇ ಬರುತ್ತದೆ. ರಾಮಾಯಣದಲ್ಲಿ ರಾಮನಿಗೆ ರಾಜ್ಯಾಧಿಕಾರ ದೊರಕುವ ಸಂದರ್ಭದಲ್ಲಿ ಕೈಕೇಯಿ ಮಾಡುವದು ರಾಜಕೀಯವೇ. ರಾವಣವಧೆಯ ನಂತರ ಸೀತೆಯನ್ನು ಅಗ್ನಿಪರೀಕ್ಷೆಗೆ ಒಡ್ಡುವದು ರಾಮ ಮಾಡುವ ಶೀಲದ ರಾಜಕೀಯ. ಬಸವಣ್ಣ, ಹರಳಯ್ಯ, ಮಧುವರಸರ, ಮಕ್ಕಳ ಅಂತರ್ಜಾತೀಯ ಮದುವೆ ಮಾಡುವದು ರಾಜಕೀಯ. ದಾಸವರೇಣ್ಯ ಕನಕ ಭಕ್ತಿಯಿಂದ ಬಂದಾಗ ಅವನಿಗೆ ಉಡುಪಿಯ ಕೃಷ್ಣ ಮಠದೊಳಗೆ ಜಾತಿಯ ಕಾರಣಕ್ಕೆ ಪ್ರವೇಶ ನಿರಾಕರಿಸುವದು ಮಠಾಧೀಶರು ಮಾಡಿದ ರಾಜಕೀಯ. ಮಹಾಡ್ ಕೆರೆಯೊಳಗಿನ ನೀರು ಬಳಸಲು ಅಸ್ಪೃಶ್ಯರಿಗೂ ಅವಕಾಶವಿರಬೇಕು ಎಂದು ಅಂಬೇಡ್ಕರ್ ಸತ್ಯಾಗ್ರಹ ಮಾಡುವದೂ ರಾಜಕೀಯವೇ. ಅಯೋಧ್ಯೆಯಲ್ಲಿ ಬಾಬರಿ ಮಸೀದಿ ಇದ್ದ ಸ್ಥಳದಲ್ಲಿಯೇ ರಾಮ ಹುಟ್ಟಿದ್ದು ಎಂದು ಅಡ್ವಾಣಿ ರಥಯಾತ್ರೆ ಮಾಡಿದ್ದು ರಾಜಕೀಯವೇ ಅಲ್ಲವೇ?

ರಾಜಕೀಯ ಎಂಬುದು ನಾವು ಮಾಡಿದಾಗ ಒಳ್ಳೆಯದು, ಇನ್ನೊಬ್ಬರು ಮಾಡಿದಾಗ ಕೆಟ್ಟದ್ದು; ಎಲ್ಲ ರಾಜಕಾರಣಿಗಳೂ ಸ್ವಾರ್ಥಿಗಳಾಗಿರುತ್ತಾರೆ ಎಂದು ವಾದಿಸುವದು ಸರಿಯಲ್ಲ. ಸಮಾಜದಲ್ಲಿ ಯಾವದೋ ಒಂದು ವಿಷಯದ ಕುರಿತು ಗಂಭೀರವಾದ ಚಿಂತನ ಮಂಥನ ಪ್ರಾರಂಭವಾದಾಗ ಅದರಲ್ಲಿ ಅನೇಕ ಸ್ತರಗಳ ಅನೇಕ ಕ್ಷೇತ್ರಗಳ ಜನರು ಸೇರಿಕೊಳ್ಳುತ್ತಾರೆ. ಅಂತೆಯೇ ಅನೇಕ ರಾಜಕಾರಣಿಗಳೂ ಸದುದ್ದೇಶದಿಂದಲೇ ಇದರಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಇವರ ಸಾಚಾತನವನ್ನು ಯಾಕೆ ಶಂಕಿಸಬೇಕು? ಹಾಗೆಂದ ಮಾತ್ರಕ್ಕೆ ಸ್ವಾರ್ಥ ರಾಜಕಾರಣಿಗಳು ಸೇರಿಕೊಳ್ಳುವದಿಲ್ಲ ಎಂದಲ್ಲ. ಇಂಥವರು ಯಾವಾಗಲೂ ಇದ್ದೇ ಇರುತ್ತಾರೆ. ಇಂಥವರ ಬಗ್ಗೆ ಚಳುವಳಿಯ ಮುಖಂಡರು ಎಚ್ಚರದಿಂದಿರಬೇಕು. ಅವರು ಒಟ್ಟೂ ಚಳುವಳಿಯ ಮೂಲ ಗುರಿಯ ಇಂತಹ ಸ್ವಾರ್ಥ ರಾಜಕಾರಣಿಗಳಿಂದ ಅಡ್ಡಿಬಾರದ ಹಾಗೆ ನೋಡಿಕೊಳ್ಳಬೇಕು. ಆದುದರಿಂದ ಈ ಚಳುವಳಿಗೆ ಆಳವಾದ ಅಧ್ಯಯನ, ಗುರಿಯ ಸ್ಪಷ್ಟತೆ ಇರುವಂತಹ ಮಠಾಧೀಶರು, ಸಮಾಜ ಚಿಂತಕರು ಹಾಗೂ ರಾಜಕಾರಣಿಗಳ ಸಾಮೂಹಿಕ ಮುಖಂಡತ್ವ ಅತ್ಯವಶ್ಯ.

ಲಿಂಗಾಯತವು ಪ್ರತ್ಯೇಕ ಸ್ವತಂತ್ರ ಧರ್ಮ ಎಂಬ ಬೇಡಿಕೆಗೆ ಇನ್ನೂ ಒಂದು ಆಯಾಮವಿದೆ. ಕಳೆದ ಐವತ್ತು ವರ್ಷಗಳಲ್ಲಿ ವಿಜ್ಞಾನ ತಂತ್ರಜ್ಞಾನದಲ್ಲಿ ಅಗಾಧವಾದ ಪ್ರಗತಿಯಾಗಿದೆ. ಇದರ ಬಲದಿಂದ ಪಶ್ಚಿಮದ ಅನೇಕ ದೇಶಗಳು ಮಾರುಕಟ್ಟೆ ಮತ್ತು ಲಾಭವನ್ನೇ ಮುಖ್ಯವಾಗಿಟ್ಟುಕೊಂಡು ಹಲವಾರು ದೇಶಗಳ ಸಂಸ್ಕೃತಿಯನ್ನು ಪ್ರಭಾವಿಸುತ್ತಿವೆ. ಈ ಜಾಗತೀಕರಣ – ಪಶ್ಚಿಮೀಕರಣದ ಪರಿಣಾಮವಾಗಿ ನಮ್ಮ ಸಮಾಜದೊಳಗಿನ ನಂಬಿಕೆಗಳು, ಆಚರಣೆಗಳು, ಜೀವನಶೈಲಿಗಳು ಮನುಷ್ಯ ಸಂಬಂಧಗಳು ಮುಂತಾದವೆಲ್ಲ ಕ್ಷಿಪ್ರ ಗತಿಯಲ್ಲಿ ಬದಲಾಗುತ್ತಿವೆ. ಸಮುದಾಯಗಳು ಸಂಸ್ಕೃತಿಗಳು ತಮ್ಮ ಚಹರೆಗಳನ್ನೇ ಕಳೆದುಕೊಂಡು ಈ ಜಾಗತೀಕರಣ – ಪಶ್ಚಿಮೀಕರಣದ ಸುನಾಮಿಯೊಳಗೆ ಕೊಚ್ಚಿಕೊಂಡು ಹೋಗುತ್ತಿವೆ. ಇದನ್ನು ವಿರೋಧಿಸಿ ಜಗತ್ತಿನಾದ್ಯಂತ ಪರಿಸರ, ಕಲೆಗಳು–ಭಾಷೆಗಳು–ವೃತ್ತಿಗಳು ಇತ್ಯಾದಿಗಳನ್ನು ಉಳಿಸಿಕೊಳ್ಳುವ ಅನೇಕ ಹೋರಾಟಗಳು ನಡೆಯುತ್ತಿವೆ. ಲಿಂಗಾಯತಕ್ಕೆ ಸ್ವತಂತ್ರ ಧರ್ಮದ ಸ್ಥಾನಮಾನ ಬೇಕು ಎಂಬ ಬೇಡಿಕೆ ಕೂಡ ಜಾಗತೀಕರಣ – ಏಕರೂಪೀಕರಣದ ವಿರುದ್ಧದ, ಅಸ್ಮಿತೆಯ ರಕ್ಷಣೆಯ ಕೂಗು ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಅಂದರೆ ಲಿಂಗಾಯತ ಸಮುದಾಯಕ್ಕೆ ಇಂದು ಹಿಂದುತ್ವದ ಏಕರೂಪೀಕರಣ ಮತ್ತು ಪಶ್ಚಿಮೀಕರಣದ ಏಕರೂಪೀಕರಣ ಇವೆರಡರ ವಿರುದ್ಧವೂ ಎದ್ದು ನಿಂತು ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳುವ ಅನಿವಾರ್ಯತೆ ಬಂದಿದೆ. ಹಾಗೆಂದೇ ‘ಲಿಂಗಾಯತವು ಹಿಂದೂ ಧರ್ಮದ ಭಾಗವಲ್ಲ; ಅದು ಸ್ವತಂತ್ರ ಧರ್ಮ’ ಎಂಬ ಕೂಗಿಗೆ ಇಂದು ಇಷ್ಟು ದೊಡ್ಡ ಬಲ ಬಂದಿದೆ. ಬಾಬರಿ ಮಸೀದಿ – ರಾಮ ಜನ್ಮಭೂಮಿ ಚಳುವಳಿಯಲ್ಲಿ ಬಹಳ ಜೋರಾಗಿ ಕೇಳಿಬಂದ ಘೋಷಣೆಯೆಂದರೆ ‘ಗರ್ವ್ ಸೇ ಕಹೋ ಹಮ್ ಹಿಂದೂ ಹೈ’ ಎಂಬುದು. ಈ ಗರ್ವದ ಭಾವನೆ – ಅದರೊಳಗೆ ಹುದುಗಿರುವ ಹಿಂಸೆಯ ಬೀಜ – ಬಿಲ್ಲು ಹೆದೆಯೇರಿಸಿ ನಿಂತಿರುವ ರಾಮನ ಚಿತ್ರವನ್ನು ಮತ್ತೊಮ್ಮೆ ನೆನಪಿಸಿಕೊಳ್ಳಿ – ಇಂತಹ ಒಂದು ಘೋಷಣೆಯನ್ನು ಒಪ್ಪಿಕೊಳ್ಳುವ ಹಿಂದುತ್ವದ ಮಾನಸಿಕತೆಗೂ ‘ದಯವಿರಲಿ ಸಕಲ ಜೀವಾತ್ಮಗಳಲಿ’ ಎಂದು ಬಯಸುವ ಶರಣರ ಮಾನಸಿಕತೆಗೂ ಹೊಂದಾಣಿಕೆ ಹೇಗೆ ಸಾಧ್ಯ?

ಕೊನೆಯದಾಗಿ, ಒಂದು ಮಾತು. ಸ್ವತಂತ್ರ ಧರ್ಮದ ಹೆಸರು ಏನಿರಬೇಕು ಎಂಬುದರ ಕುರಿತು ಕೂಡ ಚರ್ಚೆ ನಡೆದಿದೆ. ಲಿಂಗಾಯತ, ಲಿಂಗಾಯತ–ವೀರಶೈವ, ಬಸವ ಧರ್ಮ, ಶರಣ ಧರ್ಮ ಮುಂತಾದವು ಚರ್ಚೆಯಾಗುತ್ತಿವೆ. ಬಸವಣ್ಣ ಶರಣ ಚಳುವಳಿಗೆ ನಾಯಕತ್ವ ಕೊಟ್ಟಿದ್ದು ನಿಜ. ಬಸವಣ್ಣನಲ್ಲಿ ಸೈದ್ಧಾಂತಿಕ ಮತ್ತು ಕ್ರಿಯಾತ್ಮಕ ಎರಡೂ ಆಯಾಮಗಳು ಮಿಳಿತಗೊಂಡಿದ್ದವು. ಅಂತಲೇ ಅಲ್ಲಮ ಅವನನ್ನು ‘ಯುಗದ ಉತ್ಸಾಹ’ ಎಂದು ಕರೆದಿದ್ದು. ಬಸವಣ್ಣನ ಕುರಿತಾದ ಅಲ್ಲಮನ ಈ ವರ್ಣನೆ ಮತ್ತು ಈ ವರ್ಣನೆಯ ಹಿಂದಿರುವ ಕಲ್ಪನೆ ಇಂದಿಗೂ ರೋಮಾಂಚನ ಉಂಟುಮಾಡುವಂಥದ್ದು. ಆದರೂ ಸ್ವತಂತ್ರ ಧರ್ಮಕ್ಕೆ ಬಸವ ಧರ್ಮ ಎಂದು ಕರೆಯುವದು ಸರಿಯಾಗಲಿಕ್ಕಿಲ್ಲ. ಬಸವ ಧರ್ಮ ಎಂದು ಕರೆದಿದ್ದಾದರೆ ನಾವು ಆ ಇಡೀ ಮಹಾನ್ ಕನಸನ್ನು ಒಬ್ಬ ವ್ಯಕ್ತಿಗೆ ಸೀಮಿತಗೊಳಿಸಿದಂತಾಗುತ್ತದೆ, ಇದು ಬಸವಣ್ಣನ ಸಾಮಾಜಿಕ ಆಯಾಮವನ್ನು ಸಂಕುಚಿತಗೊಳಿಸಿದಂತಾಗುತ್ತದೆ, ‘ಇವ ನಮ್ಮವ ಇವ ನಮ್ಮವ’ ಎನ್ನುವ ಬಸವಣ್ಣನ ಆ ಆರ್ತ ಆಪ್ತ ಆತ್ಮೀಯ ಹಂಬಲವನ್ನು ಮೊಟಕುಗೊಳಿಸಿದಂತಾಗುತ್ತದೆ. ಅಕ್ಕ ಅಲ್ಲಮ ಬಸವಣ್ಣ ಅವರ ಜೊತೆ ಕೈ ಜೋಡಿಸಿದವರೆಲ್ಲರೂ ತಮ್ಮನ್ನು ಶರಣರೆಂದೇ ಕರೆದುಕೊಂಡಿದ್ದಾರೆ. ಶರಣ ಎಂಬುದು ಒಂದು ಸಮಗ್ರವಾದ ಬಲು ವಿಸ್ತಾರವಾದ ಆಧ್ಯಾತ್ಮಿಕ ಪರಿಕಲ್ಪನೆ. ಅದನ್ನು ಅದರ ಸಂಪೂರ್ಣ ಅರ್ಥದಲ್ಲಿ ನಿತ್ಯಜೀವನದಲ್ಲಿ ಸಾಕಾರಗೊಳಿಸಿಕೊಳ್ಳುವದೇ ಎಲ್ಲ ಪ್ರಜ್ಞಾವಂತ ಮನಸ್ಸುಗಳ ಗುರಿ ಮತ್ತು ಸಾಧನೆಯಾಗಬೇಕು. ಆದುದರಿಂದ ಶರಣ ಧರ್ಮ ಎಂದು ಕರೆಯುವದೇ ತಾತ್ವಿಕವಾಗಿ ಹೆಚ್ಚು ಯುಕ್ತ ಮತ್ತು ಸೂಕ್ತ ಎಂಬುದು ನನ್ನ ವಿನಯಪೂರ್ಣ ಅಭಿಪ್ರಾಯ.

**ಡಾ॥ ಸಂಜೀವ ಕುಲಕರ್ಣಿ (ಸಂಕುಲಜೀವ)**
‘ನಗೆ ಮಲ್ಲಿಗೆ’, ನಂ. ೨೦/೧, ಮಹಿಷಿ ರಸ್ತೆ, ಮಾಳಮಡ್ಡಿ
ಧಾರವಾಡ – ೫೮೦ ೦೦೭



ಎಸ್. ನಟರಾಜ ಬೂದಾಳು

# ಅಲ್ಲಮ ಮತ್ತು ಝೆನ್ ದಾರಿಯಲ್ಲಿ ಒಂದಷ್ಟು ದೂರ...



ಝೆನ್ ಒಂದು ತಳವಿಲ್ಲದ ಮಡಕೆ. ಅದರ ಬಗೆಗೆ ಏನಾದರೂ ಕೇಳಿಸಿಕೊಂಡ ನಂತರ, ಓದಿದ ನಂತರ ಏನೂ ಉಳಿಯಬಾರದು. ಬದಲಿಗೆ ಇದ್ದುದರಲ್ಲೇ ಒಂದಷ್ಟು ಖಾಲಿಯಾಗಬೇಕು. ಅದು ಉಂಟಾಗುತ್ತಾ ಗತಿಸುತ್ತಾ ಮುಂದುವರಿಯುವ ಪ್ರಕ್ರಿಯೆ. ಅದರ ನಡೆಯನ್ನು ಗತೇ ಗತೇ ಪರಗತೇ ಪರಸಂಗತೇ ಬೋಧೀ ಸ್ವಾಹಾ... ಎಂದು ಮಂತ್ರದ ರೀತಿಯಲ್ಲಿ ಹೇಳುತ್ತಾರೆ. ಝೆನ್ ಗುರು ಬೋಧಿಧರ್ಮನ ಒಂದು ಪೇಂಟಿಂಗ್ ಸಾಮಾನ್ಯವಾಗಿ ಎಲ್ಲ ಝೆನ್ ಬರಹಗಳ ಜೊತೆಯಲ್ಲಿ ಕಾಣಬರುತ್ತದೆ. ಒಂದು ಥರಾ ಸಿಟ್ಟು ಮತ್ತು ತಿರಸ್ಕಾರದಿಂದ ನೋಡುತ್ತಿರುವ ಚಿತ್ರ. ನಮ್ಮಂತಹ ಮಾತುಗಾರರನ್ನು ಕಂಡಾಗ ಅವನಿಗೆ ಅನ್ನಿಸುವುದನ್ನು ಯಾರೋ ಚಿತ್ರಿಸಿದ್ದಾರೆ. ಅಲ್ಲಮನ ಚಿತ್ರ ಬರೆದರೂ ಹಂಗೇ ಇರುತ್ತೆ. ಝೆನ್ ಬಗೆಗೆ ಮಾತನಾಡಲು ನಿಂತರೆ ಎದುರಿಗೆ ಬೋಧಿಧರ್ಮ ಸಿಟ್ಟಿನಿಂದ ನೋಡುತ್ತಿರುವಂತೆ ಭಯವೂ, ಆತಂಕವೂ ಆಗುತ್ತದೆ. ಆಗಬೇಕು. ಝೆನ್ ಗುರುಗಳೊಂದಿಗೆ, ಝೆನ್ ತಾತ್ವಿಕತೆಯೊಂದಿಗೆ ಅಲ್ಲಮಗುರುವಿನ ಪ್ರಯಾಣವನ್ನು ಗುರುತಿಸುವ ಇಂತಹ ಪ್ರಯತ್ನ ಮೊದಲಿಗೆ ನನ್ನ ಅಳವಿಗೆ ಅದೆಷ್ಟು ನಿಲುಕಿದೆಯೋ ನನಗೆ ಗೊತ್ತಿಲ್ಲ. ಆದರೆ ಇಂತಹದೊಂದು ಪ್ರಯತ್ನದ ಇತಿಮಿತಿಗಳೇನೇ ಇರಲಿ ಬೋಧಿಧರ್ಮ ಗುರುವಾಗಲೀ, ಅಲ್ಲಮ ಗುರುವಾಗಲೀ ನಮ್ಮನ್ನು ಕಂಡು ಲಘುವಾಗಿ ನಕ್ಕಾರು, ಆದರೆ ತಿರಸ್ಕರಿಸುವವರಲ್ಲ ಎಂಬ ಒಂದು ವಿಶ್ವಾಸವೇ ಇಂತಹ ಪ್ರಯತ್ನಕ್ಕೆ ಬಲವೆಂದು ನಂಬುತ್ತೇನೆ.

ಹೀಗೆ ಅಲ್ಲಮಗುರುವನ್ನು ಅನಾಮತ್ತು ಬೇರೊಂದು ಅನುಭಾವಿ ಪಂಥದ ಮೂಲಕ ಓದಬಹುದೆ? ಎಂಬ ಪ್ರಶ್ನೆಗೆ 'ಯಾಕೆ ಓದಬಾರದು?' ಎನ್ನುವುದೇ ಉತ್ತರ. ಅಂತಹ ಓದುಗಳನ್ನು ಈಗಾಗಲೇ ಕೊಡೇಕಲ್ ಪರಂಪರೆ ಮತ್ತು ಮಂಟೇಸ್ವಾಮಿ ಪರಂಪರೆಗಳು ನಡೆಸಿ ತೋರಿಸಿವೆ. ಇಂತಹ ದಾಟುವಿಕೆಯನ್ನು ಅಲ್ಲಮಗುರುವೇ ಪ್ರಚೋದಿಸುವುದರಿಂದ ಅಂತಹ ಸಾಧ್ಯತೆಗಳು ಅವನ ವಚನಗಳಲ್ಲಿ ಗೋಚರಿಸುತ್ತವೆ. ಇಂತಹ ಹೋಲಿಕೆಗೆ ಅನೇಕ ಒತ್ತಾಯಗಳು ಒಳಗಿನಿಂದಲೇ ಮೂಡುತ್ತವೆ. ಮೊದಲನೆಯದಾಗಿ ಅಲ್ಲಮನನ್ನು ಕೇವಲ ವಚನಕಾರನಾಗಿ ಓದುವ ಓದನ್ನು ಪಲ್ಲಟಿಸಬೇಕಾದ ಗಂಭೀರ ಒತ್ತಡವೊಂದು ಹನ್ನೆರಡನೆಯ ಶತಮಾನದಿಂದ ಈ ಹೊತ್ತಿನವರೆಗೆ ಇದ್ದೇ ಇದೆ. ಎರಡನೆಯದಾಗಿ ಈ

ಚೀನಾ ಝೆನ್ ತಾತ್ವಿಕತೆಗೂ ಕನ್ನಡದ ವಚನ ಪರಂಪರೆಗೂ ಹತ್ತಿರದ ಸಂಬಂಧವೊಂದಿದೆ. ಅದೇನೆಂದರೆ ಎರಡೂ ಮಾರ್ಗಗಳಿಗೆ ಕಾಯಕದ ಬಗೆಗೆ ಅಪಾರ ಗೌರವವಿದೆ ಮತ್ತು ಕಾಯಕವನ್ನು ಎಲ್ಲರೂ ಮಾಡಲೇಬೇಕು ಎಂದು ಒತ್ತಾಯಿಸುತ್ತವೆ. ಕಾಯಕವು ಜ್ಞಾನದ ಮಾಧ್ಯಮವಾಗಬೇಕು ಎಂದು ಈ ಯಾನಗಳು ಸೂಚಿಸುತ್ತವೆ. ಎರಡೂ ಗುರು, ಗುರುಮಾರ್ಗಗಳು. ಗುರುಮಾತ್ರವೇ ಅರಿವಿಗೆ ಕೈ ತೋರಿಸಬಲ್ಲವನು. ಕೇವಲ ಕೈತೋರಿಸುವುದಷ್ಟೆ ಅವರ ಕೆಲಸ. ಅವರವರ ದಾರಿಯನ್ನು ಅವರೇ ನಡೆಯಬೇಕು. ಕೋನ್‌ಗಳಾಗಲೀ, ವಚನಗಳಾಗಲೀ ಕೈಮರ, ತೋರುಬೆರಳುಗಳೇ ಹೊರತು ಅವೇ ದಾರಿಯಲ್ಲ, ಅವೇ ಚಂದ್ರನಲ್ಲ. ಇವತ್ತಿನ ನಾವು ಎನ್ನುವುದು ನಿನ್ನೆಯವರೆಗೆ ನಾವು ನಡೆದುಬಂದ ದಾರಿಯ ಫಲ. ಹಾಗಾಗಿ ನಾಳೆಯ ನಾವು ಈ ಹೊತ್ತು ಮತ್ತು ನಿನ್ನಿನವರೆಗೆ ಯೋಚಿಸಿದ ಫಲ. ಇದರಿಂದ ನಾವು ಪ್ರತಿಕ್ಷಣ ನಡೆಯುವ ದಾರಿಯನ್ನು ಎಚ್ಚರದಿಂದ ಗುರುತಿಸಿಕೊಳ್ಳಬೇಕಾಗುತ್ತದೆ. ಅದರ ಸಂಪೂರ್ಣ ಹೊಣೆಗಾರಿಕೆಯನ್ನು ನಾವೇ ಹೊರಬೇಕಾಗುತ್ತದೆ.

ಎರಡೂ ದಾರಿಗಳು ಅನುಭವನಿಷ್ಠ ಮತ್ತು ಯಾವುದೇ ಪೂರ್ವನಿರ್ಧಾರಿತ ಪಠ್ಯವನ್ನಾಗಲೀ ನಿಲುವನ್ನಾಗಲೀ ಪ್ರಮಾಣವೆಂದು ಮಾನ್ಯ ಮಾಡುವುದಿಲ್ಲ. ಮೂರನೆಯದಾಗಿ ಇಲ್ಲಿ ನಡೆಯಬೇಕಾದ ದಾರಿಯೂ ನಿರ್ಧಾರಿತವಾಗಿರುವುದಿಲ್ಲ. ಇದು ಹೋಗ ಹೋಗುತ್ತಲೇ ಕೇಳಿಕೊಂಡು ಹೋಗಬೇಕಾದ ದಾರಿ.

ಝೆನ್ ಬೌದ್ಧ ತಾತ್ವಿಕತೆಯು ಪಾಂಥಿಕ, ಪಾಠ್ಯಿಕ ಬೌದ್ಧ ಧರ್ಮದ ವಿರುದ್ಧ ಎದ್ದ ಒಳಗಿನ ದಂಗೆ, ಇಸ್ಲಾಮಿನೊಳಗಿನ ಸೂಫಿಯಂತೆ, ವಚನದ ವಿರುದ್ಧ ಎದ್ದ ಕೊಡೇಕಲ್, ಮಂಟೇಸ್ವಾಮಿ ಪರಂಪರೆಯಂತೆ. ಹಾಗಾಗಿಯೇ ಬೋಧಿಧರ್ಮ, ಅಲಿ, ಸರಹ, ಮಂಟೇಸ್ವಾಮಿ, ಕೊಡೇಕಲ್, ಬಸವಣ್ಣ ಇವರೆಲ್ಲ ಒಳಗಿನ ದಂಗೆಕೋರರು. ಆಯಾ ಪಂಥಗಳು ನೆಟ್ಟಗಿರುವಂತೆ ನೋಡಿಕೊಂಡವರು. ನಿರಂತರ ಎಚ್ಚರದಲ್ಲೇ ಸಾಗುವ ಇವರು ತಮ್ಮ ಯಾನ ದಿಕ್ಕು ತಪ್ಪುತ್ತಿರುವುದನ್ನು ಮೊದಲು ಗುರುತಿಸುತ್ತಾರೆ.

ಝೆನ್ ಮತ್ತು ಅಲ್ಲಮನ ವಚನಗಳನ್ನು ಶೈಕ್ಷಣಿಕ ವಲಯವು ಸಾಮಾನ್ಯವಾಗಿ ಭಾಷಿಕ ಸಲಕರಣೆಗಳ ಮೂಲಕ ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡುತ್ತದೆ. ಬೆಡಗನ್ನು ಬಿಚ್ಚಿಕೊಡುವ ಭಾಷಿಕ ಕೀಲಿಕೈಯೊಂದನ್ನು ಒದಗಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ಆದರೆ ಅವು ಅಂತಹ ಭಾಷಿಕ ಕೀಲಿಕೈಗಳಿಂದ ದೊರಕಲಾರವು ಎನ್ನುವುದು ಮುಖ್ಯ ಸಂಗತಿ. ಅದಕ್ಕೆ ಬೇಕಾಗುವುದು ನೇರ ಅನುಭವದ ಅನುಸಂಧಾನ. ಅಲ್ಲಮನ ವಚನಗಳನ್ನು, ಝೆನ್ ಕೋನ್‌ಗಳನ್ನು ವಿನ್ಯಾಸಗೊಳಿಸಿರುವ ಕ್ರಮವೇ ವಿಶಿಷ್ಟವಾದುದು. ಒಬ್ಬನ ಅಹಂ ಪ್ರಜ್ಞೆಯ ದಪ್ಪ ಚಿಪ್ಪನ್ನು ಮೊದಲು ಒಡೆದು ಆ ನಂತರವೂ ಸಾಮಾನ್ಯ ಬೌದ್ಧಿಕ ವಿವರಣೆಯಿಂದ ಅವುಗಳನ್ನು ಬಿಡಿಸಲು ಸಾಧ್ಯವಾಗದಂತೆ ಕಟ್ಟಿಡಲಾಗಿದೆ. ಝೆನ್ ಒಪ್ಪಿತ ಅಭಿಪ್ರಾಯಗಳಿಗೆ ವಿರುದ್ಧವಾದ ಅಥವಾ ಅತಾರ್ಕಿಕ ಹೇಳಿಕೆಗಳನ್ನು ನೀಡಿ ಎದುರು ನಿಂತವನನ್ನು ತಬ್ಬಿಬ್ಬು ಮಾಡುತ್ತದೆ. ಝೆನ್ ಗುರುಗಳು ಉಪದೇಶಗಳನ್ನು ಮಾಡುವುದಿಲ್ಲ, ಪ್ರವಚನಗಳನ್ನು ನೀಡುವುದಿಲ್ಲ, ಯಾವುದೇ ಪ್ರಮೇಯ ಸಮೀಕರಣಗಳನ್ನು ಮಂಡಿಸುವುದಿಲ್ಲ. ಅಪ್ಪನ ಥರಾ ಇದೀಯೋ ಅಮ್ಮನ ಥರಾ ಇದೀಯೋ ಎಂದು ಕೇಳದೆ, "ನಿನ್ನ ಅಪ್ಪ ಅಮ್ಮಗಳು ಜನಿಸುವ ಮುನ್ನ ನೀನು ಯಾರಂತಿದ್ದೆ? ಎಂಬಂತಹ ಸಾಮಾನ್ಯ ತರ್ಕರಾಹಿತ್ಯ ಸವಾಲುಗಳನ್ನು ಎದುರಿಗೆ ಇಡುತ್ತಾರೆ. ಅಲ್ಲಮಗುರುವೂ :

*ಎನ್ನ ನಾನರಿಯದ ಮುನ್ನ*
*ನೀನೇನಾಗಿದ್ದೆ ಹೇಳಾ?*
*ಮುನ್ನ ನೀ ಬಾಯ ಮುಚ್ಚಿಕೊಂಡಿದ್ದೆಯೆಂಬುದ*
*ನಾ ನಿನ್ನ ಕಣ್ಣಿಂದ ಕಂಡೆ*

ಎನ್ನುತ್ತಾನೆ.

ಝೆನ್ ಮಹಾಯಾನ ಬೌದ್ಧ ಧರ್ಮದ ಒಂದು ಕವಲು ಎಂದು ತಾತ್ವಿಕರು ಅದನ್ನು ಓದುತ್ತಾ ಬಂದಿದ್ದಾರೆ. ಹಾಗೇ ಅಲ್ಲಮಗುರುವನ್ನು ವಚನ ಪರಂಪರೆಯ ಜೊತೆ ಓದುವ ಒಂದು ಕ್ರಮ ನಡೆದು ಬಂದಿದೆ. ಆದರೆ ಝೆನ್ ಆಗಲಿ ಅಲ್ಲಮ ಸಂಪ್ರದಾಯವಾಗಲೀ ತತ್ವಶಾಸ್ತ್ರದ ಆಕರಗಳ ಬಗೆಗೆ ಮತ್ತು ಇಂತಹ ಅಧ್ಯಯನ ಮಾದರಿಗಳ ಬಗೆಗೆ ತೋರಿಸುವ ತೀವ್ರ ಅನಾದರವನ್ನು ಗಮನಿಸದೆ ಇರಲು ಸಾಧ್ಯವಿಲ್ಲ. ಅಲ್ಲಮಮಾರ್ಗಿಗಳು ಗ್ರಾಂಥಿಕ ಅಥವಾ ಪಠ್ಯಜ್ಞಾನದ ಬಗೆಗೆ ತೋರುವ ತೀವ್ರ ಅನಾದರವೂ ಇದೇ ಮಾದರಿಯದ್ದು. ಇನ್ನು ಸರಹನಂತೂ ಅಂತಹ ಅನಾದರದ ಉತ್ತುಂಗ. ನಮ್ಮಂತಹವರು ಇಂತಹ ವೇದಿಕೆಗಳಲ್ಲಿ ಮಾಡುವ ಪ್ರಯತ್ನವನ್ನು ಈ ಮಾರ್ಗಿಗಳು ಗೇಲಿಯಿಂದ ಕಂಡು ನಕ್ಕರೆ ನಾವು ಅದನ್ನು ಗೌರವಿಸಲೇಬೇಕು. ಆದರೆ ಇಂತಹ ಮಾತುಕತೆಗಳಿಗಿರುವ ಲೋಕಪ್ರಯೋಜನ ಮತ್ತು ಇತರ ಉದ್ದೇಶಗಳನ್ನು ಬೋಧಿಧರ್ಮನಾಗಲೀ, ಅಲ್ಲಮನಾಗಲೀ ಅಲ್ಲಗಳೆಯಲಾರರು. ಅವರು ಎಂತಿದ್ದರೂ ಏನೂ ಇಲ್ಲದೆ ಎಲ್ಲವೂ ಆಗುವವರ ಪರವಾದವರು. ಇದರಲ್ಲಿ ನಮಗೆ ಇರುವ ಒಂದು ಅರ್ಹತೆ ಎಂದರೆ ನಾವು ಏನೂ ಇಲ್ಲದೆ ಇರುವವರು. ಎಲ್ಲವೂ ಆಗಬಲ್ಲ ಸಮೂಹದ ಎದುರಿಗೆ ನಿಂತಿದ್ದೇವೆ. ಇದೊಂದು ರೀತಿಯಲ್ಲಿ ನಮ್ಮ ಮಾತುಕತೆಗೆ ಅಪ್ಪಣೆ ಬೇಡುವ ಪರಿ.

ಝೆನ್ ಮತ್ತು ಅಲ್ಲಮಮಾರ್ಗದ ನಡುವಿನ ಕೆಲವು ಸಾಮ್ಯತೆಗಳನ್ನು ಕೋನ್‌ಗಳ ಮೂಲಕ ವಚನಗಳ ಮೂಲಕ ತೋರಿಸಿಕೊಡುವುದೇನೂ ಮಹತ್ವದ ಕೆಲಸವಲ್ಲ. ಅಂತಹ ಸಮಾನ ಸಂಗತಿಗಳನ್ನು ಅನೇಕ ಪರಂಪರೆಗಳ ನಡುವೆ ಗುರುತಿಸಬಹುದು. ಆದರೆ ಬಹು ಮುಖ್ಯ ಸಂಗತಿಯೆಂದರೆ ಎರಡೂ ಜ್ಞಾನ ಮಾರ್ಗಗಳು ಚಲನೆಯನ್ನು ಆರಂಭಿಸುವುದೇ ಸುಳ್ಳು ಸಂರಚನೆಗಳನ್ನು ಆಚೆಗಟ್ಟಿ ಬಯಲನ್ನು ಉಂಟುಮಾಡಿಕೊಳ್ಳುವ ಮೂಲಕ. ಇನ್ನು ಮುಂದಿನ ದಾರಿಯನ್ನು ಅದೇ ಕಂಡುಕೊಳ್ಳುತ್ತದೆ. ಹಾಗಾಗಿ ಇಲ್ಲಿ ನಿರ್ದೇಶಿಸಿ ತೋರಿಸಲು ನಿರ್ಧಾರಿತ ದಾರಿ ಎಂಬುದೇನೂ ಇಲ್ಲ. ಇದು ಹೋಗ ಹೋಗುತ್ತಲೇ ಕೇಳಿಕೊಂಡು ಹೋಗುವ ದಾರಿ. ಅಲ್ಲಮಗುರುವೂ ಮೊದಲು ಎಲ್ಲವನ್ನೂ ಗುಡಿಸಿ ಹಾಕಿ ಬಯಲನ್ನು ಉಂಟುಮಾಡಿಕೊಳ್ಳುತ್ತಾನೆ. ಸಾಮಾನ್ಯವಾಗಿ ಅಲ್ಲಮನ ವಚನ ಸಂಕಲನಗಳ ಮೊದಲ ವಚನಗಳಲ್ಲಿ ಇದೂ ಒಂದು. ಲೋಕದ ಮನುಷ್ಯ ನಿರ್ಮಿತ ಎಲ್ಲ ಸಂರಚನೆಗಳನ್ನೂ ಮೊದಲು ನಿರಸನಗೊಳಿಸಿಕೊಳ್ಳುವುದು ಶರಣನ ಮೊದಲ ಕೆಲಸ. ಝೆನ್ ಗುರುವೂ ಮೊದಲು ಆ ಕೆಲಸವನ್ನೇ ಮಾಡುತ್ತಾನೆ.

*ಆದಿಯಾಧಾರವಿಲ್ಲದಂದು*
*ಹಮ್ಮುಬಿಮ್ಮುಗಳಿಲ್ಲದಂದು*
*ಸುರಾಳ ನಿರಾಳವಿಲ್ಲದಂದು*
*ಸಚರಾಚರಗಳಿಲ್ಲದಂದು*
*ಗುಹೇಶ್ವರ ನಿಮ್ಮ ಶರಣನುದಯಿಸಿದನಂದು*

ಝೆನ್ ಆಗಲಿ ತಾವ್ ಆಗಲಿ ಇವುಗಳನ್ನು ಕುರಿತ ಮಾತೊಂದಿದೆ, ಇವೇ ಏಕೆ? ಬಹುಪಾಲು ಅನುಭಾವಿ ಪರಂಪರೆಗಳ ಬಗೆಗೆ ಇದೇ ಮಾತಿದೆ. ಏನೆಂದರೆ ಇವುಗಳನ್ನು ಅರಿತವನು ಮಾತನಾಡುವುದಿಲ್ಲ; ಮಾತನಾಡುತ್ತಿದ್ದಾನೆಂದರೆ ಅರಿತಿಲ್ಲ. ಇದು ನನಗೂ ಅನ್ವಯವಾಗುವ ಮಾತೆಂಬುದು ನಿರ್ವಿವಾದ! ಝೆನ್ ಮಾತುಕತೆಯನ್ನು ಕುರಿತ ಇನ್ನೂ ಒಂದು ಮಾತಿದೆ. ಅದೇನೆಂದರೆ ಝೆನ್ ಕುರಿತು ಮಾತನಾಡುವುದಾದರೆ ಎರಡು ಸಂಗತಿಗಳ ಬಗೆಗೆ ತೀರಾ ಎಚ್ಚರಿಕೆ ಇರಬೇಕಂತೆ ! ಒಂದು ಕೇಳಿಸಿಕೊಂಡವರು ಝೆನ್ ಕುರಿತು ತುಂಬ ಚಂದಾಗಿ ಮಾತನಾಡಿದರು ಎನ್ನಲೂಬಾರದು ಅಥವಾ ಝೆನ್ ಕುರಿತು ಏನನ್ನೂ ಹೇಳಲಿಲ್ಲ ಎನ್ನಲೂಬಾರದು. ಹಾಗಾಗಿ ಈ ಎರಡೂ ತುದಿಯನ್ನು ವರ್ಜಿಸಿದ ಮಧ್ಯಮಮಾರ್ಗವನ್ನು ನಾವೆಲ್ಲ ಹಿಡಿಯಬೇಕಾದುದು ಅನಿವಾರ್ಯ. ಝೆನ್ ಎಂಬುದು ಉಸಿರಾಟವನ್ನು ಕುರಿತು, ನಡಿಗೆಯನ್ನು ಕುರಿತು ಮಾತನಾಡಿದಂತೆ. ತಿಳಿದವರು ಮಾತನಾಡದೆ ಸುಮ್ಮನೆ ಉಸಿರಾಡುತ್ತಾರೆ ಅಥವಾ ಸುಮ್ಮನೆ ನಡೆದುಹೋಗುತ್ತಾರೆ. ನಾನು ಮಾತನಾಡುತ್ತಿದ್ದೇನೆ. ಲಿಯೋನಾರ್ಡೋ ಡ ವಿಂಚಿಯ ಮಾತಿದೆಯಲ್ಲ ! ಸರಳ ರೇಖೆಯನ್ನು ನಿರ್ವಹಿಸುವುದು ಅತಿ ಕಠಿಣವಂತೆ !

ಹಾಗಾದರೆ, ಝೆನ್ ಮಾರ್ಗಿಗಳಿಗೂ ಸಾಮಾನ್ಯರಿಗೂ ಏನಾದರೂ ವ್ಯತ್ಯಾಸ ಇದೆಯಾ? ಇದೆ, ಝೆನ್ ಮಾರ್ಗಿಗಳು ಹಸಿವಾದಾಗ ಉಣ್ಣುತ್ತಾರೆ ಮತ್ತು ನಿದ್ದೆ ಬಂದಾಗ ನಿದ್ದೆ ಮಾಡುತ್ತಾರೆ. ಅದನ್ನು ಬೇರೆಯವರೂ ಮಾಡುತ್ತಾರಲ್ಲವೆ? ಇಲ್ಲ. ಬೇರೆಯವರು ಹಸಿವಾದಾಗ ಉಣ್ಣುವುದರ ಜೊತೆಗೆ ಏನೇನನ್ನೋ ಮಾಡುತ್ತಾರೆ, ನಿದ್ದೆ ಮಾಡುವಾಗಲೂ ಮತ್ತೇನನ್ನೋ ಮಾಡುತ್ತಿರುತ್ತಾರೆ. ಆದರೆ ಝೆನ್ ಮಾರ್ಗಿಗಳು ಉಣ್ಣುವಾಗ ಕೇವಲ ಉಣ್ಣುತ್ತಾರೆ, ನಿದ್ದೆ ಮಾಡುವಾಗ ಕೇವಲ ನಿದ್ದೆ ಮಾಡುತ್ತಾರೆ.

ಬೌದ್ಧ ಧರ್ಮದಲ್ಲಿ ನಾಲ್ಕು ಚಿಂತನಾ ಧಾರೆಗಳಿವೆ, ಸರ್ವಾಸ್ತಿವಾದ, ಸೌತ್ರಾಂತಿಕವಾದ, ಚಿತ್ತಮಾತ್ರ ಸತ್ಯ ಅಥವಾ ಯೋಗಾಚಾರ ಮತ್ತು ಕೊನೆಯದಾಗಿ ಮಧ್ಯಮ ಮಾರ್ಗ ಅಥವಾ ಶೂನ್ಯತೆ. ಇದೀಗ ಧಾರವಾಡದ ಮಧ್ಯಮಮಾರ್ಗವೊಂದು ಚಾಲನೆಯಲ್ಲಿದೆ. ಇದು ಆ ಮಧ್ಯಮ ಮಾರ್ಗವಲ್ಲ. ಝೆನ್ ಇವುಗಳಲ್ಲಿ ಕೊನೆಯ ಎರಡು ಧಾರೆಗಳನ್ನು ಅಂದರೆ ಚಿತ್ತಮಾತ್ರ ಸತ್ಯ ಮತ್ತು ಶೂನ್ಯತೆಯ ದಾರಿಯಲ್ಲಿ ನಡೆಯುತ್ತದೆ. ಝೆನ್‌ಅನ್ನು ಯೋಗಾಚಾರ ಅಥವಾ ಚಿತ್ತಮಾತ್ರ ಸತ್ಯ ಪ್ರಸ್ಥಾನದ ಹಾದಿ ಎಂದು ಗುರುತಿಸುತ್ತಾರೆ. ಇದರಲ್ಲಿಯೂ ಚೀನಾದ ಝೆನ್ ಮಾರ್ಗದಲ್ಲಿ ನಂತರ ಎರಡು ಧಾರೆಗಳಾದವು ಒಂದನ್ನು ಉತ್ತರದ ಮಾರ್ಗವೆಂದೂ ಇನ್ನೊಂದನ್ನು ದಕ್ಷಿಣದ ಮಾರ್ಗವೆಂದೂ ಕರೆದರು. ಉತ್ತರದ ಮಾರ್ಗವು ಪಿಪೀಲಿಕ ಪದ್ಧತಿಯನ್ನೂ

## ಅಭಿನಂದನೆ

ಮೂಡುಬಿದರೆ ಕಾಂತಾವರ ಕನ್ನಡ ಸಂಘದ ಪಟೇಲ್ ಪುನರೂರು ವಾಸುದೇವರಾವ್ ಟ್ರಸ್ಟ್ ಪ್ರಾಯೋಜಕತ್ವದವರು ಕೊಡಮಾಡುವ ೨೦೧೭ರ ಸಾಲಿನ ಪ್ರತಿಷ್ಠಿತ 'ಮುದ್ದಣ ಕಾವ್ಯ ಪ್ರಶಸ್ತಿ'ಯು ಶ್ರೀಮತಿ ಜ್ಯೋತಿ ಗುರುಪ್ರಸಾದ್ ಅವರಿಗೆ ಲಭಿಸಿದೆ. ಲೇಖಕಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ದಕ್ಷಿಣದ ಮಾರ್ಗವು ವಿಹಂಗಮ ಮಾರ್ಗವನ್ನೂ ಮುಂದಿಡುತ್ತದೆ. ಪಿಪೀಲಿಕವೆಂದರೆ ಇರುವೆಯಂತೆ ನಿಧಾನಗತಿಯಲ್ಲಿ ಹಣ್ಣಿರುವ ಮರವನ್ನು ಗುರುತಿಸಿ, ಹತ್ತಿ ಹಣ್ಣನ್ನು ತಿನ್ನುವುದು. ವಿಹಂಗಮವೆಂದರೆ ಹಕ್ಕಿಯಂತೆ ನೇರವಾಗಿ ಹಣ್ಣಿನ ಮೇಲೆ ಕುಳಿತು ತಿಂದು ಹಾರುವುದು. ಯಾವುದೂ ಶ್ರೇಷ್ಠವೂ ಅಲ್ಲ ಕನಿಷ್ಠವೂ ಅಲ್ಲ ಮತ್ತು ಯಾವುದೂ ಸುಲಭವಲ್ಲ ಕಠಿಣವಲ್ಲ.

ಕ್ರಿ. ಶ. ಐದನೆಯ ಶತಮಾನದಲ್ಲಿ ಭಾರತದಿಂದ ಚೀನಾ ದೇಶಕ್ಕೆ ಬಂದು ಬದುಕಿದ ಬೋಧಿಧರ್ಮನನ್ನು ಝೆನ್ ಪ್ರಸ್ಥಾನದ ಪ್ರಧಾನ ಗುರುವೆಂದು ಪರಿಗಣಿಸುತ್ತಾರೆ. ಬೋಧಿಧರ್ಮ ದೊಡ್ಡ ಕಂಚಿಯಲ್ಲಿ ಹುಟ್ಟಿದವನು. ಅವನ ಗುರು ಪ್ರಜ್ಞಾತಾರ. ಕ್ರಿ. ಶ. ೫೨೦ರಲ್ಲಿ ಚೀನಾಕ್ಕೆ ಬಂದ. ಅವನ ಲಂಕಾವತಾರ ಸೂತ್ರವು ಝೆನ್ ಚಿಂತನಾಕ್ರಮದ ಒಂದು ಮುಖ್ಯ ಕೃತಿಯೆಂದು ಪರಿಗಣಿಸಲ್ಪಟ್ಟಿದೆ. ಬೌದ್ಧ ಮಹಾಯಾನದ ಒಂದು ಪ್ರಸ್ಥಾನವಾದ ಚಿತ್ತ ಮಾತ್ರ ಸತ್ಯ ಪ್ರಸ್ಥಾನವನ್ನಾಧರಿಸಿ ಚೀನಾದ ಕನ್‌ಫ್ಯೂಷಿಯನ್ ತತ್ವ ಮತ್ತು ತಾವೋ ತತ್ವದ ಸಂಕರ ರೂಪವೇ ಝೆನ್ ಎಂದು ಸಾಮಾನ್ಯವಾಗಿ ಭಾವಿಸುತ್ತಾರೆ. ಪ್ರಜ್ಞಾ ಪಾರಮಿತ ಹೃದಯಸೂತ್ರ, ಅವತಂಸಕ ಸೂತ್ರ, ವಿಮಲಕೀರ್ತಿ ನಿರ್ದೇಸ, ವಜ್ರಛ್ಛೇದಿಕ ಸೂತ್ರಗಳನ್ನು ಶೂರಾಗಮ ಸೂತ್ರ, ಮುಂತಾದುವುಗಳನ್ನು ಸಾಮಾನ್ಯವಾಗಿ ಝೆನ್ ಆಕರಗಳೆಂದು ಗೌರವಿಸುತ್ತಾರೆ. ಸಾಮಾನ್ಯವಾಗಿ ಮೊದಲ ಝೆನ್ ಎಂದು ಗಣಿಸುವ ಘಟನೆಯೆಂದರೆ ಒಂದು ದಿನ ಬುದ್ಧಗುರು ಗೃಧ್ರಕೂಟದಲ್ಲಿ ಇದ್ದಾಗ ದೂರದಿಂದ ಬಂದ ಉಪಾಸಕನೊಬ್ಬ ಗುಲಾಬಿಯೊಂದನ್ನು ತಂದು ಅದನ್ನು ಬುದ್ಧಗುರುವಿಗೆ ನೀಡಿ ಧಮ್ಮವನ್ನು ಬೋಧಿಸಲು ಕೋರುತ್ತಾನೆ. ನೀರವ ಮೌನದಲ್ಲಿ ಆ ಹೂವನ್ನೇ ಬುದ್ಧಗುರು ನಿಟ್ಟಿಸುತ್ತಾರೆ. ಅದನ್ನು ಕಂಡು ಮಹಾಕಶ್ಯಪ ಮೆಲುನಗೆ ನಗುತ್ತಾನೆ. ಅದು ಎಲ್ಲ ಕಡೆ ಪ್ರತಿಸ್ಪಂದನೆ ಪಡೆಯುತ್ತದೆ. ಇದನ್ನೆ ಮೊದಲ ಝೆನ್ ಎನ್ನುತ್ತಾರೆ. ಧರ್ಮವೆನ್ನುವುದು ಹೂವಿನಂತೆ ತೆರೆದೇ ಇದೆ. ಎಲ್ಲರಿಗೂ ಸಹಜವಾಗಿ ದಕ್ಕಬಲ್ಲದುದಾಗಿದೆ. ಮತ್ತು ನಿಸರ್ಗ ಸಹಜವಾದ ಬದುಕಾಗಿದೆ. ಹೂವಿಗೆ ಅವಿದ್ಯೆಯಾಗಲೀ, ಅಜ್ಞಾನವಾಗಲೀ, ವಿಸ್ಮೃತಿಯಾಗಲೀ ಇಲ್ಲ. ಅದು ಅರಳುವುದನ್ನು ಮರೆಯದು, ಕಾಯಾಗಿ ಫಲ ನೀಡುವುದನ್ನು ಮರೆಯದು. ಮತ್ತು ಅದು ನಿಸರ್ಗದ ಗಾಢ ಸಂಬಂಧದಿಂದ ಬಂದಿದೆ ಮತ್ತು ಹೋಗುತ್ತದೆ ಇತ್ಯಾದಿ. ಬುದ್ಧಗುರುವಿನಿಂದ ಹಿಡಿದು ಸುಮಾರು ಇಪ್ಪತ್ತು ಬುದ್ಧಮಾರ್ಗಿಗಳಲ್ಲಿ ಕಡೆಯವನು ಬೋಧಿಧರ್ಮ. ಈ ನಡುವೆ ನಾಗಾರ್ಜುನ, ಸರಹ, ವಸುಬಂಧು, ಅಶ್ವಘೋಶ ಮುಂತಾದ ವಿದ್ವಾಂಸ ಸಾಧಕರು ಬಂದು ಹೋಗಿದ್ದಾರೆ. ಇವರೆಲ್ಲ ಝೆನ್ ಬೆಳೆಯಲು ಕಾರಣರಾಗಿದ್ದಾರೆ.



ಚೀನಾ ಝೆನ್ ತಾತ್ವಿಕತೆಗೂ ಕನ್ನಡದ ವಚನ ಪರಂಪರೆಗೂ ಹತ್ತಿರದ ಸಂಬಂಧವೊಂದಿದೆ. ಅದೇನೆಂದರೆ ಎರಡೂ ಮಾರ್ಗಗಳಿಗೆ ಕಾಯಕದ ಬಗೆಗೆ ಅಪಾರ ಗೌರವವಿದೆ ಮತ್ತು ಕಾಯಕವನ್ನು ಎಲ್ಲರೂ ಮಾಡಲೇಬೇಕು ಎಂದು ಒತ್ತಾಯಿಸುತ್ತವೆ. ಕಾಯಕವು ಜ್ಞಾನದ ಮಾಧ್ಯಮವಾಗಬೇಕು ಎಂದು ಈ ಯಾನಗಳು ಸೂಚಿಸುತ್ತವೆ. ಎರಡೂ ಗುರು, ಗುರುಮಾರ್ಗಗಳು. ಗುರುಮಾತ್ರವೇ ಅರಿವಿಗೆ ಕೈ ತೋರಿಸಬಲ್ಲವನು. ಕೇವಲ ಕೈತೋರಿಸುವುದಷ್ಟೆ ಅವರ ಕೆಲಸ. ಅವರವರ ದಾರಿಯನ್ನು ಅವರೇ ನಡೆಯಬೇಕು. ಕೋನ್‌ಗಳಾಗಲೀ, ವಚನಗಳಾಗಲೀ ಕೈಮರ, ತೋರುಬೆರಳುಗಳೇ ಹೊರತು ಅವೇ ದಾರಿಯಲ್ಲ, ಅವೇ ಚಂದ್ರನಲ್ಲ. ಇವತ್ತಿನ ನಾವು ಎನ್ನುವುದು ನಿನ್ನೆಯವರೆಗೆ ನಾವು ನಡೆದುಬಂದ ದಾರಿಯ ಫಲ. ಹಾಗಾಗಿ ನಾಳೆಯ ನಾವು ಈ ಹೊತ್ತು ಮತ್ತು ನಿನ್ನಿನವರೆಗೆ ಯೋಚಿಸಿದ ಫಲ. ಇದರಿಂದ ನಾವು ಪ್ರತಿಕ್ಷಣ ನಡೆಯುವ ದಾರಿಯನ್ನು ಎಚ್ಚರದಿಂದ ಗುರುತಿಸಿಕೊಳ್ಳ ಬೇಕಾಗುತ್ತದೆ. ಅದರ ಸಂಪೂರ್ಣ ಹೊಣೆಗಾರಿಕೆಯನ್ನು ನಾವೇ ಹೊರಬೇಕಾಗುತ್ತದೆ.

ಚೀನಾಕ್ಕೆ ಬಂದ ಬೋಧಿಧರ್ಮ ಝೆನ್ ಪ್ರಸ್ಥಾಪಿಸಲು ಪಾಲಿಸಿದ ನಾಲ್ಕು ಸಂಗತಿಗಳೆಂದರೆ; ಒಂದು: ಪುಸ್ತಕಗಳಾಚೆಗಿನ ಜ್ಞಾನದ ಅನುಸಂಧಾನ, (ಪುಸ್ತಕ ಪ್ರಮಾಣವನ್ನು ನಿರಾಕರಿಸಿದ್ದು) ಎರಡು : ಅಕ್ಷರ–ಪದಗಳನ್ನು ಆಧರಿಸದಿರುವುದು (ಅಂದರೆ ಭಾಷಿಕ ಅನುಸಂಧಾನವನ್ನು ಆಧರಿಸದಿರುವುದು), ಮೂರು : ನೇರವಾಗಿ ಮನುಷ್ಯನ ಪ್ರಜ್ಞೆಯ ಜೊತೆ ಅನುಸಂಧಾನ ಮಾಡುವುದು (ಬುದ್ಧಿಯಲ್ಲ) ಮತ್ತು ನಾಲ್ಕು: ಒಬ್ಬನ ಸಹಜ ಧರ್ಮವನ್ನು ಅರಿಯುವುದು. ಇವುಗಳನ್ನು ಕೊಂಚ ವಿಸ್ತರಿಸಿಕೊಳ್ಳಬಹುದು.

ಝೆನ್ ಮತ್ತು ಅಲ್ಲಮನ ಪಾಲಿಗೆ ಭಾಷೆ ಹರಿಯುವ ಹರಿವನ್ನು ತಡೆವ ಕಟ್ಟೆ. ಅದನ್ನು ಒಡೆಯದ ಹೊರತು ಮುಂದಕ್ಕೆ ಹರಿಯಲು ಆಗದು. ಕಟ್ಟೆ ದೊಡ್ಡದಾದಷ್ಟು ಸಮಸ್ಯೆ ಜಾಸ್ತಿ. ಹರಿಯದೆ ನಿಂತ ಭಾಷೆ ಪ್ರಾಣಘಾತಕ. ಸಾರು ಹೆಂಗದೆ? ಎಂದರೆ ನಾವು ಹೇಳುವ ಉತ್ತರಗಳು ಎರಡು : ಒಂದು : ಚೆನ್ನಾಗಿದೆ, ಇನ್ನೊಂದು ಚೆನ್ನಾಗಿಲ್ಲ. ಎಂದಾದರೂ ಸಾರು ಸಾರಾಗಿದೆ ಎಂದು ಹೇಳಿದ್ದೇವೆಯಾ? ಸಾರು ಎಂದಾಕ್ಷಣ ನೆನಪಿಗೆ ಬಂತು :

*ಸ್ವರದ ಹುಳ್ಳಿಯ ಕೊಂಡು ಗಿರಿಯ ತಟಾಕಕ್ಕೆ ಹೋಗಿ*
*ಹಿರಿಯರು ಓಗರವ ಮಾಡುತ್ತಿಪ್ಪರು*
*ಗಿರಿ ಬೇಯದಾಗಿ ಓಗರವಾಗದು*
*ಅರ್ಪಿತವಿಲ್ಲಾಗಿ ಪ್ರಸಾದವಿಲ್ಲ ಗುಹೇಶ್ವರ*

ಈ ವಚನಕ್ಕೆ ಅನೇಕ ವ್ಯಾಖ್ಯಾನಗಳಿವೆ. (ಡಿ. ಆರ್. ಒಂದು ಆಕರ್ಷಕ ವ್ಯಾಖ್ಯಾನ ನೀಡಿದ್ದಾರೆ. ಎಲ್. ಬಿ. ಅವರು ಮತ್ತೊಂದು ಪಾರಂಪರಿಕ ವ್ಯಾಖ್ಯಾನ ನೀಡಿದ್ದಾರೆ. ಇರಲಿ) ಹುಳ್ಳಿಸಾರು ಮಾಡಬೇಕಾದ್ದು ಮನೇಲಿ, ಆದರೆ ಈ ಹಿರಿಯರು ಬೆಟ್ಟದ ಬುಡಕ್ಕೆ ತಪಸ್ಸಿಗೆ ಹೋಗುವವರಂತೆ ಅಲ್ಲಿಗೆ ತೆಗೆದುಕೊಂಡು ಹೋಗಿದ್ದಾರೆ. ಅಲ್ಲಿಗೆ ಹೋದಮಾತ್ರಕ್ಕೆ ಹುಳ್ಳಿಕಾಳನ್ನು ಬೆಟ್ಟವೇನಾದರೂ ಬೇಯಿಸಿಬಿಡುತ್ತದಾ? ಅಲ್ಲಿಗೆ ಹೋದಮಾತ್ರಕ್ಕೆ ಆದ ಪ್ರಯೋಜನ ಏನು? ಗಿರಿಯೂ ಬೇಯಿಸಲಿಲ್ಲ, ಓಗರವೂ ಆಗಲಿಲ್ಲ, ಪ್ರಸಾದವೂ ಸಿಗಲಿಲ್ಲ ! ಈ ಭಾಷಿಕ ಹುರುಳಿಯನ್ನು ಗಿರಿಗೇ ಉರಿ ಇಕ್ಕಿ ಬೇಯಿಸಿದರೂ ಅಷ್ಟೆ. ಎರಡೂ ಬೇಯದ ಸಂಗತಿಗಳು. ಹಾಗಾಗಿ ಭಾಷೆಯಲ್ಲಿ ಸಂಭವಿಸುವ ಸಂಗತಿಗಳು ನಿಜವನ್ನು ಇದಿರಾಗಲು ಸಾಧ್ಯವಿಲ್ಲ. ಅದೇನಿದ್ದರೂ ಅನುಭವಕ್ಕೆ ಮಾತ್ರ ದಕ್ಕುವ ಸಂಗತಿ.

ಹಾಗಾಗಿಯೇ ಭಾಷೆಯೆಂಬುದು ಈ ಧಾರೆಗಳಿಗೆ ಪ್ರಾಣಘಾತಕ ಸಂಗತಿ. ಏಕೆಂದರೆ ಭಾಷೆಯ ವ್ಯವಹಾರ ನಡೆಯುವುದೇ ತರ–ತಮದ ಮೂಲಕ. ಅದು ಏನನ್ನಾದರೂ ಗುರುತಿಸುವುದೇ ಬೇರೆ ಸಂಗತಿಗಳ ನಡುವಿನ ವ್ಯತ್ಯಾಸಗಳ ಮೂಲಕ. ಮ ಎನ್ನುವ ಅಕ್ಷರ ಏಕೆ ಮ ಎಂದರೆ ಅದು ಕ ಅಲ್ಲ ರ ಅಲ್ಲ ಸ ಅಲ್ಲ ಅದಕ್ಕೆ ಮ. ಸಿಹಿ ಏಕೆ ಸಿಹಿ ಎಂದರೆ ಅದು ಕಹಿಯಲ್ಲ, ಉಪ್ಪಲ್ಲ, ಖಾರವಲ್ಲ ಅದಕ್ಕೆ ಸಿಹಿ. ಹೀಗೆ ಭಾಷೆಯ ವ್ಯವಹಾರವೇ ತರತಮದ ಮೂಲಕ ನಡೆಯುವಂಥದ್ದು. ಹಾಗಾಗಿಯೇ ತಥಾಗತನು ಅಕ್ಷರ ಪತಿತನಿಗೆ ಧಮ್ಮವನ್ನು ಉಪದೇಶಿಸಲಾಗದು ಎನ್ನುತ್ತಾನೆ. ಅಲ್ಲಮನೂ ಭಾಷೆಯ ಬಗೆಗೆ ಇದೇ ನಿಲುವನ್ನು ವ್ಯಕ್ತಪಡಿಸಿದ್ದಾನೆ.

*ಅಕ್ಷರವ ಬಲ್ಲೆವೆಂದು ಅಹಂಕಾರವೆಡೆಗೊಂಡು ಲೆಕ್ಕಗೊಳ್ಳರಯ್ಯ*
*ಗುರುಹಿರಿಯರು ತೋರಿದ ಉಪದೇಶದಿಂದ*
*ವಾಗದ್ವೈತವ ಕಲಿತು ವಾದಿಪರಲ್ಲದೆ ಆಗು ಹೋಗೆಂಬುದನರಿಯರು*
*ಭಕ್ತಿಯನರಿಯರು, ಮುಕ್ತಿಯನರಿಯರು, ಯುಕ್ತಿಯನರಿಯರು*
*ಮತ್ತೂ ವಾದಿಗೆಳಸುವರು ಹೋದರು ಗುಹೇಶ್ವರ ಸಲೆ ಕೊಂಡ ಮಾರಿಂಗೆ.*

ವಿಕಲ್ಪಗಳ ಮಹಾಕವಚವೊಂದನ್ನು ನಾವೇ ಕವುಚಿಕೊಂಡಿದ್ದೇವೆ. ಅಂತಹ ತಪ್ಪುಗ್ರಹಿಕೆಗಳಿಂದ ಮುಕ್ತವಾಗುವ ದಾರಿಯನ್ನು ಝೆನ್ ಮಾರ್ಗ ಮುಂದಿಡುತ್ತದೆ. ಬಂಧನಂ ಚಿತ್ತ ಸಂಭವಂ – ಬಂಧನದಿಂದ ಮುಕ್ತಗೊಳಿಸುವುದೇ ಬೋಧಿಧರ್ಮನ, ಅಲ್ಲಮನ ದಾರಿಯಾಗಿರುವುದರಿಂದ ಅದು ನಿರಂತರ ಎಚ್ಚರದಿಂದ ಕಾವಲಿನ ಕೆಲಸ ಮಾಡುತ್ತಿರುತ್ತದೆ. ಹಾಗಾಗಿಯೇ ಅಲ್ಲಮನೆದುರಿಗೆ ಬಸವಣ್ಣ, ಸಿದ್ಧರಾಮ, ಎಲ್ಲರೂ ವಿಮರ್ಶೆಗೆ ಒಡ್ಡಿಕೊಂಡು ನಿಲ್ಲಬೇಕಾಗುತ್ತದೆ.

## ಹೊಸತು – ೨೦೧೮ ಜನವರಿ ಸಂಚಿಕೆ : ಓದುಗರ ವೇದಿಕೆ

ಆತ್ಮೀಯ ಹೊಸತು ಓದುಗ ಬಂಧುಗಳೇ,

ಜನವರಿ ೨೦೧೮ಕ್ಕೆ ನಿಮ್ಮ ಹೊಸತು ಪತ್ರಿಕೆಯ ವಿಶೇಷ ಸಂಚಿಕೆ ತಯಾರಿ ನಡೆದಿದೆ. ಈ ಸಂಚಿಕೆಯಲ್ಲಿ ಪ್ರತಿವರ್ಷದಂತೆ ಈ ವರ್ಷವೂ ಓದುಗರ ವೇದಿಕೆ ಇರಲಿದೆ. ಈ ಸಲದ ಓದುಗರ ವೇದಿಕೆಯ ವಿಷಯ : **'ಜಿ. ಎಸ್. ಟಿ. (ಸರಕು ಸೇವಾ ತೆರಿಗೆ) ನಿಮ್ಮ ಅನುಭವ, ಅಭಿಪ್ರಾಯ'**.

ಈ ಕುರಿತು ೧೫೦ ಪದಗಳೊಳಗೆ ಇರುವ ನಿಮ್ಮ ಬರಹ ೩೦ ನವೆಂಬರ್ ೨೦೧೭ರೊಳಗೆ ಹೊಸತು ಕಾರ್ಯಾಲಯಕ್ಕೆ ಕಳಿಸಬೇಕಾಗಿ ವಿನಂತಿ.

*– ಸಂ.*

ಝೆನ್ ಆಗಲಿ, ಅಲ್ಲಮ ಗುರುವಿನ ಬಯಲಾಗಲೀ ಭಾವದಗ್ಧವಾದ ಸ್ಥಿತಿ. ಝೆನ್ ಮಾತೊಂದಿದೆ, ಮೂವತ್ತು ವರ್ಷ ಧ್ಯಾನಮಾಡಿ ಕಂಡುಕೊಂಡ ಸಂಗತಿಯೆಂದರೆ ಧ್ಯಾನವೆಂಬುದು ಇಲ್ಲ ಎಂದು. ಅದನ್ನು ಅಲ್ಲಮ ಹೀಗೆನ್ನುತ್ತಾನೆ :

*ಸ್ವತಂತ್ರ ಪರತಂತ್ರಕ್ಕೆ ಆವುದು ಚಿಹ್ನ ನೋಡಾ !*
*ತಾನೆಂಬುದಳಿದು, ಇದಿರೆಂಬುದ ಮಱೆದು,*
*ಭಾವದಗ್ಧವಾಗಿರಬಲ್ಲಡೆ ಅದು ಸ್ವತಂತ್ರ !*
*ನೀನೆಂಬುದ ಧಿಃಕರಿಸಿ, ತಾನೆಂಬುದ ನಿಃಕರಿಸಿಉಭಯಭಾವದಲ್ಲಿ*
*ಸನ್ನಿಹಿತವಾಗಿರಬಲ್ಲಡೆ ಪರತಂತ್ರ !*
*ಸ್ವತಂತ್ರ ಪರತಂತ್ರವೆಂಬೆರಡನೂ ವಿವರಿಸದೆ*
*ತನ್ನ ಮಱೆದಿಪ್ಪನೆ ಉಪಮಾತೀತನು !*
*ಗೊಹೇಶ್ವರನ ಶರಣರು ದೇಹವಿಲ್ಲದ ನಿರ್ದೇಹಿಗಳೆಂಬುದು*
*ಇಂದೆನಗೆ ಕಾಣಬಂದಿತ್ತು ನೋಡಾ, ಸಿದ್ಧರಾಮಯ್ಯ*

ಈ ಭಾವದಗ್ಧ ಸ್ಥಿತಿಯೇ ಝೆನ್ ಮಾರ್ಗಿಗಳ ತಾಕ್ಷಣಿಕತೆ ಮತ್ತು ಸಹಜ ಮಾರ್ಗ. ಝೆನ್ ಒಂದು ಏಣಿ. ಪೊಳ್ಳುಗ್ರಹಿಕೆಗಳ ತಲೆಯ ಮೇಲಿಟ್ಟ ಏಣಿ. ನಿಜವಲ್ಲದ್ದರ ತಲೆಯ ಮೇಲಿಟ್ಟು ನಿಜವನ್ನು ಕಾಣಿಸುವ ಏಣಿ. ನಾವು ಸಹಜದ ಜೊತೆಗೇ ಇದ್ದೇವೆ ಎಂದಾಗ ಏಣಿಯೂ ಬೇಡ, ಹತ್ತುವುದೂ ಬೇಡ; ಮತ್ತೊಂದೆಡೆಗೆ ನೋಡುವುದೂ ಬೇಡ. ಅದರ ಬಗೆಗೆ ಯೋಚಿಸುವ ನುಡಿಯುವ ಅಗತ್ಯವೂ ಇಲ್ಲ. ನಿಸ್ಸಂಶಯವಾಗಿ ಝೆನ್ ಅವಾಚ್ಯ; ಬೆಲ್ಲದ ಹಾಗೆ.

*ಒಬ್ಬ ಸಂತ ಇನ್ನೊಬ್ಬನನ್ನು ಕೇಳಿದ, 'ಬಯಲು ಎಂಬುದೆಲ್ಲಿದೆ?'*
*ಅದಕ್ಕೆ ಇನ್ನೊಬ್ಬ ಸಂತ : 'ನೇರ ನಮ್ಮೆದುರಿಗೇ ಇದೆ'*
*'ಮತ್ತೆ ನನಗೆ ಅದು ಕಾಣುತ್ತಿಲ್ಲವಲ್ಲ?'*
*'ನಿನ್ನ ಅಹಂಕಾರದ ಕಾರಣದಿಂದ ಕಾಣುತ್ತಿಲ್ಲ'*
*'ನಾನು ನನ್ನ ಅಹಂಕಾರದ ಕಾರಣದಿಂದ ಕಾಣುತ್ತಿಲ್ಲವಾದರೆ ನೀನು ಅದನ್ನು ಕಾಣುತ್ತಿರುವಿಯೋ?'*
*'ನಾನು ಮತ್ತು ನೀನು ಇಲ್ಲಿ ಇರುವವರೆಗೆ ಬಯಲನ್ನು ಕಾಣಲು ಸಾಧ್ಯವಿಲ್ಲ'*
*'ನಾನು ಮತ್ತು ನೀನು ಇಲ್ಲದೆ ಹೋದರೆ ಬಯಲನ್ನು ಕಾಣಬಹುದೋ'*
*'ನಾನು ಮತ್ತು ನೀನು ಇಬ್ಬರೂ ಇಲ್ಲದೆ ಹೋದಾಗ ಬಯಲನ್ನು ನೋಡುವವರ್‍ಯಾರು?'*

ಝೆನ್ ನಿತ್ಯದ ತಾರ್ಕಿಕ ನಡೆಯನ್ನು ಮೊದಲಿಗೆ ಗೇಲಿ ಮಾಡುತ್ತದೆ. ಅಲ್ಲಮನೂ ನಿತ್ಯದ ಸಾಮಾನ್ಯ ಸಮಯಾಚರಣೆಗಳನ್ನು ತಿರಸ್ಕರಿಸಿ ನುಡಿಯುತ್ತಾನೆ. ಬಾಟಲ್ ಒಳಗಡೆ ಬಾತುಕೋಳಿ ಇದೆ. ಬಾಟಲ್ ಒಡೆಯದೆ, ಬಾತುಕೋಳಿಯನ್ನು ಸಾಯಿಸದೆ ಹೇಗೆ ಹೊರಗೆ ತೆಗೆಯುವುದು? ಇದು ಪ್ರಶ್ನೆ. ಝೆನ್ ತಕ್ಷಣವೇ ಉತ್ತರಿಸುತ್ತದೆ. ಅಗೋ ನೋಡು ಬಾತುಕೋಳಿ ಹೊರಗೆ ಬಂತು! ಸಮಸ್ಯೆಯನ್ನು ಪರಿಹರಿಸಲು ನಾವು ಬುದ್ಧಿಯನ್ನು ತರ್ಕವನ್ನು ಅವಲಂಬಿಸಿದರೆ, ಉತ್ತರ ದೊರಕುವುದಿಲ್ಲ. ಬದಲಿಗೆ ಆ ಬಾಟಲಿಯೊಳಗೆ ಬಾತುಕೋಳಿ ಹಾಕಿದ್ದು, ನಮ್ಮ ಮನಸ್ಸು ತಾನೆ! ಅದನ್ನು ಹಾಕಿ ಈಗ ಹೊರಗೆ ತೆಗಿ ಎನ್ನುವ ಗಂಟಿಗೆ, ಉತ್ತರವೆಂದರೆ ಅದನ್ನು ಹಾಕದಿದ್ದರಾಯಿತು ಅಷ್ಟೆ!

ಒಬ್ಬ ಚೀನೀ ಚಿತ್ರಕಲಾವಿದ ತನ್ನ ಗೆಳೆಯನ ಕೋರಿಕೆಯ ಮೇರೆಗೆ ಬಿದಿರಿನ ಮೆಳೆಯ ಚಿತ್ರ ಬರೆದ. ಬೇರೆ ಬಣ್ಣ ಸಿಗಲಿಲ್ಲ. ಕೆಂಪು ಇಂಕನ್ನು ಬಳಸಿ ಬರೆದ. ಅದನ್ನು ನೋಡಿದ ಅವನ ಗೆಳೆಯನಿಗೆ ತೀರಾ ಬೇಜಾರಾಯಿತು. ಎಷ್ಟು ಚೆನ್ನಾಗಿ ಚಿತ್ರ ಬಿಡಿಸಿದ್ದೀಯಾ, ಆದರೆ ಕೆಂಪು ಬಣ್ಣದಿಂದ ಯಾಕೆ ಬರೆದೆ? ಎಲ್ಲಿಯಾದರೂ ಕೆಂಪು ಬಿದಿರು ಇರುತ್ತಾ? ಎಂದು ಕೇಳಿದ. ಮತ್ಯಾವ ಬಣ್ಣದಿಂದ ಬಿಡಿಸಬೇಕಿತ್ತು? "ಕಪ್ಪು ಬಣ್ಣದಿಂದ" ಎಂದ ಗೆಳೆಯನಿಗೆ ಆ ಕಲಾವಿದ, "ಎಲ್ಲಿಯಾದರೂ ಕಪ್ಪು ಬಿದಿರು ಇರುವುದನ್ನು ನೋಡಿದ್ದೀಯಾ?" ಎಂದ. ಇನ್ನು ಗಾಳಿಪಟವೊಂದು ಹಾರಾಡುತ್ತಿದೆ. ಗಾಳಿಯಲ್ಲಿ ಬಡಿದುಕೊಳ್ಳುತ್ತಿದೆ. ಅಲ್ಲಿ ಬಡಿದುಕೊಳ್ಳುತ್ತಿರುವುದು ಯಾವುದು? ಗಾಳಿಯೋ ಗಾಳಿಪಟವೋ ಎಂದು ಇಬ್ಬರು ಭಿಕ್ಕುಗಳು ವಾದಿಸಹತ್ತಿದರು. ಕಡೆಗೆ ಅದನ್ನು ಕಂಡು ಝೆನ್ ಗುರುಗಳು ಹೇಳಿದರು ಗಾಳಿಯೂ ಅಲ್ಲ; ಗಾಳಿಪಟವೂ ಅಲ್ಲ ಬಡಿದುಕೊಳ್ಳುತ್ತಿರುವುದು ಆ ಇಬ್ಬರು ಭಿಕ್ಕುಗಳ ಮನಸ್ಸುಗಳು!

ಝೆನ್ ಮಧ್ಯಮ ಮಾರ್ಗಿ ನಡೆ. ಆ ತುದಿಯ ಒಂದಿಷ್ಟನ್ನು ಈ ತುದಿಯ ಒಂದಿಷ್ಟನ್ನು ಸೇರಿಸಿಕೊಂಡದ್ದಲ್ಲ; ಬದಲಿಗೆ ಆ ತುದಿ ಈ ತುದಿ ಎರಡೂ ಅಲ್ಲದ ಎರಡನ್ನೂ ದಾಟಿದ ನಡೆ. ಈ ಎರಡನ್ನೂ ದಾಟುವುದನ್ನು ನಮ್ಮ ಅನುಭಾವಿಗಳು ಅದ್ವಯವೆಂದು ಕರೆದಿದ್ದಾರೆ. ಅದು ಅದ್ವೈತವಲ್ಲ. ಅದು ಸಾಮಾನ್ಯ ತಾರ್ಕಿಕ ಲೋಕದ ಬಂಧನದಿಂದ ಬಿಡುಗಡೆ ಪಡೆದ ನಡೆ.

ಝೆನ್ ಎಂದರೇನು? ಕೇಳಿಸಿಕೊಳ್ಳಹೋದರೆ ಏನೂ ಕೇಳುವುದಿಲ್ಲ, ನೋಡಲು ಹೋದರೆ ಏನೂ ಕಾಣುವುದಿಲ್ಲ. ಆದರೆ ಬದುಕಲು ಹೋದರೆ ಬೇಕೆನಿಸುವಷ್ಟು, ಸಾಕೆನಿಸುವಷ್ಟು. ಒಬ್ಬ ಬುದ್ಧ ಭಿಕ್ಕು ಬುದ್ಧನನ್ನು ಆರಾಧಿಸುತ್ತಿದ್ದನಂತೆ. ಶಿಷ್ಯರೊಡನೆ ಬಂದ ಝೆನ್ ಗುರು ಮತ್ತು ಅವನ ಶಿಷ್ಯರು ಅದನ್ನು ಕಂಡು ನಿಂತರಂತೆ. ತಕ್ಷಣ ಗುರು 'ಇಲ್ಲಿ ಮಾತ್ರ ಬುದ್ಧನಿದ್ದಾನೆ, ಇಲ್ಲಿ ಇಲ್ಲ ಎನ್ನುವುದೆಲ್ಲ ಸುಳ್ಳು, ಸುಮ್ಮನೆ ಮುಂದೆ ನಡೆಯಿರಿ' ಎಂದ. ಅದಕ್ಕೆ ಶಿಷ್ಯನೊಬ್ಬ 'ಬುದ್ಧನನ್ನು ಆರಾಧಿಸುವುದರಲ್ಲಿ ಒಳ್ಳೆಯದೇನೂ ಇಲ್ಲವೆ? ಎಂದು ಕೇಳಿದ. ಅದಕ್ಕೆ ಗುರು, 'ಏನೂ ಇಲ್ಲದಿರುವುದು ಒಳ್ಳೆಯದಕ್ಕಿಂತ ಒಳ್ಳೆಯದು ಮುಂದಕ್ಕೆ ನಡೆಯಿರಿ' ಎಂದ.

'ಮನಸ್ಸಿನಲ್ಲಿ ಯಾವ ಯೋಚನೆಯೂ ಇಲ್ಲದಿರುವುದು ಸರಿಯಲ್ಲವೆ?' ಶಿಷ್ಯನ ಪ್ರಶ್ನೆ, ಗುರು : 'ನಿನ್ನ ಯೋಚನೆಯನ್ನು ಆಚೆ ಒಗೆದುಬಿಡು.' 'ಏನೂ ಇಲ್ಲದಿರುವಾಗ ಏನನ್ನು ಒಗೆಯಬೇಕು?,' 'ಅಯ್ಯೋ ಮೂರ್ಖ ಆ ಏನೂ ಇಲ್ಲದಿರುವ ಯೋಚನೆಯನ್ನು ಯಾತಕ್ಕೆ ಹೊತ್ತುಕೊಂಡು ಓಡಾಡುತ್ತಿದ್ದೀಯಾ?' ಏನೂ ಇಲ್ಲದಿರುವುದರ ತೂಕ ಜಾಸ್ತಿ, ಸರಹನ ಮಾತಿನಂತೆ –

"ಸಿದ್ಧನಾಗಿಲ್ಲದಿರಲು ಸಿದ್ಧನಾಗಿರು, ಅಭದ್ರತೆಯಲ್ಲಿ ಭದ್ರವಾಗಿರು. ನಿನ್ನ ಮನಸ್ಸನ್ನು ಅಲಂಕರಿಸಬೇಡ. ಏನನ್ನೂ ಹೊತ್ತು ತರಬೇಡ, ನಿನ್ನನ್ನಂತೂ ಬೇಡವೇ ಬೇಡ. ಎಲ್ಲ ಕೆಳಗಿಟ್ಟು ನೀನಿರುವಂತೆ ಬಾ."

ಮನೋ ಮುದ್ರೆಯನ್ನೊಡೆಯಲು ಝೆನ್ ಕೋನ್‌ಗಳು ಬಳಕೆಯಾಗುತ್ತವೆ. ಅವನ್ನು ಬಿಡಿಸಲು ಪ್ರಯತ್ನಿಸುವುದು ಅದರಲ್ಲೂ ಬುದ್ಧಿಯ ಮೂಲಕ ಪ್ರಯತ್ನಿಸುವುದು ವ್ಯರ್ಥ. ಬದಲಿಗೆ ಅವು ಉಂಟುಮಾಡುವ ತಲ್ಲಣಗಳನ್ನು ಅನುಭವಿಸುತ್ತ ಸಮಚಿತ್ತವನ್ನು ಕಂಡುಕೊಳ್ಳುವತ್ತ ನಮ್ಮ ದಾರಿ ಸಾಗಬೇಕು. ಗೋಡೆಗಳು ಇರಬೇಕು ಸರಿ. ಆದರೆ ಬಳಸಿಕೊಳ್ಳುವುದು ಯಾವಾಗಲೂ ಏನೂ ಇಲ್ಲದ ಖಾಲಿ ಕಿಟಕಿ ಬಾಗಿಲುಗಳನ್ನೇ ಅಲ್ಲವೆ?

ಹಾಗಾದರೆ ಝೆನ್‌ಮಾರ್ಗದ ಅಲ್ಲಮ ಮಾರ್ಗದ ಉದ್ದೇಶವೇನು?

ಅಂತಿಮವಾಗಿ ಸತೋರಿ ಅಥವಾ ಅರಿವು ಸ್ವಯವಾಗುವುದೇ ಗುರಿ. ಅದೇ ದಾರಿ ಮತ್ತು ಗುರಿ ಹಾಗೂ ಗುರು. ಈವರೆಗೆ ಹೇಳಿದ ಕತೆಗಳು, ಕೋನ್‌ಗಳು ವಚನಗಳು ಎಲ್ಲ ಝೆನ್ ಅಲ್ಲ; ಬದಲಿಗೆ ಅವೆಲ್ಲ ಝೆನ್ ಬಗೆಗೆ ಹೇಳಿದ ಸಂಗತಿಗಳು. ಸತೋರಿಯೇ, ಅರಿವು ಸ್ವಯವಾಗುವುದೇ ನಿಜವಾದ ಝೆನ್ ಮತ್ತು ಅದು ಅನುಭವಿಸಬೇಕಾದ ಸಂಗತಿಯೇ ಹೊರತು ಹೇಳಬಹುದಾದ ಸಂಗತಿಯಲ್ಲ. ಕೇವಲ ಆಚರಣಾ ಧರ್ಮದಿಂದ ಏನೂ ಆಗುವುದಿಲ್ಲ. ಅಲ್ಲಮನ ನುಡಿ : ಮಣಿಯನೆಣಿಸಿ ದಿನವ ಕಳೆಯಲು ಬೇಡ, ಕಣಿಯ ಪೂಜಿಸಿ ದಿನವ ಕಳೆಯಲು ಬೇಡ, ಕ್ಷಣವಾದಡೆಯೂ ಆಗಲಿ ನಿಜದ ನೆನಹೇ ಸಾಕು, ಕ್ಷಣಾರ್ಧವಾದಡೆಯೂ ಅಗಲಿ ನಿಜನ ನೆನಹೇ ಸಾಕು, ಬೆಂಕಿಯೊಳಗುಳ್ಳ ಗುಣ ಬಿಸಿನೀರಲುಂಟೇ ಗೊಹೇಶ್ವರ?

ಒಳಗಿನ ದಂಗೆಕೋರರು :

ಬೋಧಿಧರ್ಮ ಮತ್ತು ಅಲ್ಲಮರಲ್ಲಿ ಕೆಲವು ಸಮಾನ ಅಂಶಗಳಿವೆ. ಬೋಧಿಧರ್ಮ ಬೌದ್ಧಧರ್ಮದ ಒಳಗಿದ್ದು, ಅದರ ನಡೆಯನ್ನು ಎಚ್ಚರದಿಂದ ಗಮನಿಸಿದರೆ, ಅಲ್ಲಮ ವಚನದ ಹಾದಿಯನ್ನು ಅದರೊಳಗೆ ಮತ್ತು ಹೊರಗೆ ಇದ್ದು ಕಟು ಎಚ್ಚರದಿಂದ ಗಮನಿಸಿದವನು. ತಾವು ಕಂಡುಕೊಂಡ ನಿಜದ ದಾರಿ ಕ್ರಮೇಣ ದಿಕ್ಕುತಪ್ಪುವುದನ್ನು ಕಂಡು ಕನಲುವ ಈ ಒಳಗಿನ ದಂಗೆಕೋರರು ಎಂತಹ ಕಠಿಣ ನಿರ್ಧಾರವನ್ನು ತೆಗೆದುಕೊಳ್ಳಲೂ ಹಿಂದೆಗೆಯುವುದಿಲ್ಲ. ಅದು ಬೌದ್ಧ ಧರ್ಮದೊಳಗಿನ ಕೇಡಾಗಲೀ ವಚನದೊಳಗಿನ ಕೇಡಾಗಲೀ ಕನಲಿ ಪ್ರತಿಕ್ರಿಯಿಸುತ್ತಾರೆ. ಅಲ್ಲಮನ ವಚನಗಳಲ್ಲಿ ಸರಹನ ಸಹಜಯಾನದ ಝೆನ್‌ನ ಮನೋಲಯದ ಗಂಭೀರ ಮುಂದುವರಿಕೆಯನ್ನು ಕಾಣಬಹುದು. ಮನೋಲಯ, ಅಮನಸ್ಕಯೋಗ ಮುಂತಾದ ಅನೇಕ ಕವಲುಗಳಾಗಿ ಈ ಸಾಧನೆ ಬೇರೆ ಬೇರೆ ದರ್ಶನಗಳಲ್ಲಿ ಕಾಣಿಸಿಕೊಂಡಿತು. ಅಲ್ಲಮನ ವಚನಗಳ ಮೂಲಕ ಅದು ಕನ್ನಡದ ಭಾಗವಾಗಿರುವುದನ್ನು ಸೂಚಿಸಲು ಮತ್ತು ಅದರ ಮುಂದುವರಿಕೆಯು ಪ್ರಮುಖವಾಗಿ ಶ್ರಮಣಧಾರೆಗಳಲ್ಲಿ ಇರುವುದನ್ನು ಸೂಚಿಸಲು ಅಲ್ಲಮನ ಸಮಾನ ತಾತ್ವಿಕ ವಚನಗಳನ್ನು ಗುರುತಿಸಿ ಉದ್ಧರಿಸಬಹುದು.

*ಕಂಗಳ ಕರುಳ ಕೊಯ್ದವರ,*
*ಮನದ ತಿರುಳ ಹುರಿದವರ,*
*ಮಾತಿನ ಮೊದಲ ಬಲ್ಲವರನೆನಗೊಮ್ಮೆ ತೋಱಾ ಗುಹೇಶ್ವರ.*

*ಮನ ಉಂಟೆ ಮರುಳೆ, ಶಿವಯೋಗಿಗೆ?*
*ಮತ್ತೊಮ್ಮೆ ಮನಮಗ್ನ ಉಂಟೆ ಶಿವಯೋಗಿಗೆ?*
*ಇಲ್ಲದ ಮನವನುಂಟೆಂದು ನುಡಿದು*
*ಅಡಗಿಸಿದೆನೆಂಬ ಮಾತು ಮನವ ನೆಲೆಮಾಡಿ ತೋಱುತ್ತದೆ*
*ಗೊಹೇಶ್ವರನನಱಿದ ಶರಣಂಗೆ ತೋಱಲಿಲ್ಲ ಅಡಗಲಿಲ್ಲ ಕೇಳಾ*

*ಮನಮಗ್ನವೆಂತಿರ್ಪುದು ಅಂತೆ ಇರಬೇಕಲ್ಲದೆ*
*ಮತ್ತೊಂದು ಮನವೆಂಬುದುಂಟೆ ಹೇಳಾ?*
*ಅಱಿದು ಮಱೆದುದ ಅಱಿದು ನುಡಿದು*
*ಮಱೆದೆನೆಂಬ ಜ್ಞಾನ ಉಂಟೆ?*
*ಗೊಹೇಶ್ವರಲಿಂಗವು ನೆಱೆಯಱಿದೆನೆಂಬಲ್ಲಿ*
*ಮನವ ಮಱೆಮಾಡಿ ಕಾಡುವನು*

*ಮನಕ್ಕೆ ಮನೋಹರವಾದಡೆ ಮನಕ್ಕೆ ಭಂಗ ನೋಡಾ!*
*ತನುವಿನಲ್ಲಿ ಸುಖವ ಧರಿಸಿಕೊಂಡಡೆ ಆ ತನುವಿಂಗೆ ಕೊಱತೆ ನೋಡಾ !*
*ಅಱಿವನಱಿದು ಸುಖವಾಯಿತ್ತೆಂದಡೆ*
*ಆ ಅಱಿವಿಗೆ ಭಂಗ ನೋಡಾ ಗುಹೇಶ್ವರ*

ಈ ವಚನಗಳಲ್ಲಿ ಮನೋಲಯದ ಸಾಧನೆಯ ಗುರುತು ಕೂಡ ಉಳಿಯಬಾರದು ಎನ್ನುವ ಸೂಚನೆ ಇದೆ. ಮೊದಲಿಗೆ ಮನೋಕೋಶವೊಂದನ್ನು ಉಂಟುಮಾಡಿಕೊಂಡು ಅದನ್ನು ಬರಿದಾಗಿಸುವ ಪ್ರಯತ್ನದ ಬಗೆಗೆ ಅಲ್ಲಮನಿಗೆ ತಿರಸ್ಕಾರವಿದೆ. ಬರಿದಾಗಬೇಕಾದ ಒಂದು ಮನಸ್ಸು ಅದನ್ನು ಬರಿದುಮಾಡಲು ಇನ್ನೊಂದು ಮನಸ್ಸು ಹೀಗೆ ಒಂದನ್ನು ಇಲ್ಲವಾಗಿಸಲು ಇನ್ನೊಂದನ್ನು ಹುಟ್ಟುಹಾಕಿಕೊಂಡು ಒಟ್ಟು ಎರಡನ್ನಾಗಿಸಿಕೊಳ್ಳುವ ಸಂಕಟವನ್ನು ಗೇಲಿ ಮಾಡುತ್ತಾನೆ. ಅಳಿಸಿದ ಮೇಲೆ ಏನೇನನ್ನು ಅಳಿಸಿದೆ ಎಂಬುದು ಉಳಿದರೆ ಅದು ಅಳಿಸಿದಂತಲ್ಲ. ಹಾಗಾಗಿ ನಂತರ ಉಂಟಾಗುವ ಶಬ್ದಮುಗ್ಧನಾಗುವ ಪ್ರಕ್ರಿಯೆ ಮಾತ್ರ ನಿರಸನದ ಸೂಚನೆ ನೀಡಬಲ್ಲದು. ಅದು ಉಂಟು–ಇಲ್ಲ, ಸುಖ–ದುಃಖ, ಅರಿವು–ಮರೆವು ಮುಂತಾದ ಅವಳಿಗಳನ್ನು ದಾಟಿದ ಬಯಲು. ಎಷ್ಟು ಸರಿಯಾಗಿ ಹೇಳಿದರೆಂದು ಸಂಭ್ರಮಿಸಿದ್ದೇ ಆದರೆ ಅದು ಸರಿಯಾದುದಲ್ಲವೆಂದೇ ಅರ್ಥ. ನಿರಸನಗೊಂಡದ್ದನ್ನು ಇದೆ–ಇಲ್ಲವೆಂದು ಸೂಚಿಸಲಾಗದು. ತಾನು–ಇದಿರಳಿದ, ದ್ವೈತಾದ್ವೈತಗಳನ್ನು ದಾಟಿದ, ಒಂದು–ಒಂದಲ್ಲ ಇತ್ಯಾದಿ ಅಂಕಿಸಂಖ್ಯೆಗಳಿಂದ ಸೂಚಿಸಲು ಸಾಧ್ಯವಿರದ ಸಹಜ ಬಯಲನ್ನು ಅಲ್ಲಮ ಕನ್ನಡದ ನುಡಿಗಟ್ಟಿನಲ್ಲಿ, ಕನ್ನಡದ ಮಟ್ಟಿನಲ್ಲಿ ಅನಾವರಣಗೊಳಿಸಿದ್ದಾನೆ. ಜೈನ ಧಾರ್ಮಿಕ ಆವರಣದಲ್ಲಿಯೂ ಇಂತಹ ನಡೆಗಳಿವೆ. ಬಿಳಿ ಕೂದಲೊಂದನ್ನು ಕಂಡಾಕ್ಷಣ ನಿರ್ವೇಗಪರನಾಗಿ ಹೊರಟುಹೋಗುವುದು, ತಂಬಿಗೆಯಲ್ಲಿದ್ದ ನೀರನ್ನು ಕಾಲಮೇಲೆ ಸುರಿದುಕೊಂಡಾಕ್ಷಣ ನೀರು ಮರಳಿನಲ್ಲಿ ಮರೆಯಾಗಿ ಹೋದದ್ದನ್ನು ಕಂಡು ಸಂಸಾರ ತ್ಯಾಗಮಾಡುವುದು, ಕಾದಾಡುತ್ತಿದ್ದಾಗ ಒಂದೇ ಸಾರಿ ಅಣ್ಣನನ್ನು ಮೇಲೆತ್ತಿ ಎಸೆಯುವಾಕ್ಷಣದಲ್ಲಿ ನಿರ್ವೇಗ ಪ್ರಾಪ್ತಿಯಾಗುವುದು ಇತ್ಯಾದಿ.

ಇಲ್ಲಿನ ಎಲ್ಲ ವಿಶೇಷ ಸಿದ್ಧಿಗಳು ಮಹತ್ಸಾಧನೆಯ ಮೂಲಕ ಮಾತ್ರ ಒದಗಿ ಬರುತ್ತವೆ. ಉಂಟಾದ ಸಿದ್ಧಿಯ ಸ್ವರೂಪವನ್ನು ಭಾಷೆಯ ಮೂಲಕ ಹೇಳಲಸಾಧ್ಯ ವೆಂಬ ಅರಿವೂ ಇದೆ. ಭಾಷಾವೈಕಲ್ಯವೂ ಮನೋವೈಕಲ್ಯದಂತೆಯೇ. ಇನ್ನು ವ್ಯರ್ಥ ಆಚರಣಾ ಜಗತ್ತಿನ ಬಗೆಗೆ ಇವರಿಗೆ ತೀವ್ರವಾದ ಅನಾದರ ಇದೆ. ಸಹಜವಾಗಿ ಸುಮ್ಮನೆ ಬದುಕದೆ ಕೇವಲ ಆಚರಣೆಗಳನ್ನೇ ಧರ್ಮವೆಂದುಕೊಂಡುದರಿಂದಾಗಿ ಇವತ್ತು ತೀವ್ರವಾದ ಸಂಕಟಗಳಿಗೆ ಸಿಕ್ಕಿದ್ದೇವೆ. ಈ ಧಾರ್ಮಿಕ ಸಂಕೇತಗಳು ನಮ್ಮನ್ನು ಆಳುತ್ತಿವೆ. ನಮ್ಮ ಸಂಕಟಕ್ಕೆ ಕಾರಣವಾಗಿವೆ. ಸರಹ ಇದನ್ನು ಹೀಗೆ ನುಡಿಯುತ್ತಾನೆ.

*ಧ್ಯಾನ ಮೋಸ. ಧ್ಯಾನವೇಕೆ ಬೇಕು?*
*ಮಾತಿಗೆ ಅತೀತವಾದುದನ್ನು ಮಾತಲ್ಲಿ ನುಡಿಯುವೆಯಾ?*
*ಸಕಲ ಜಗತ್ತು ಭವ ಮುದ್ರೆಯಲ್ಲಿ ಮೋಸಹೋಗಿದೆ*
*ನಿಜ–ಸಹಜವ ಯಾರೂ ಕಂಡುಕೊಳ್ಳುತ್ತಿಲ್ಲವಲ್ಲ !*

*ಅಲ್ಲಮಗುರು :*

*ಭಾವದಲೊಬ್ಬ ದೇವರ ಮಾಡಿ*
*ಮನದಲೊಂದು ಭಕ್ತಿಯ ಮಾಡಿದರೆ*
*ಕಾಯಕದ ಕೈಯಲ್ಲಿ ಕಾರ್ಯವುಂಟೆ*
*ವಾಯಕ್ಕೆ ಬಳಲುವರು ನೋಡಾ !*
*ಎತ್ತನೇರಿ ಎತ್ತನರಸುವರು ಎತ್ತ ಹೋದರೈ ಗುಹೇಶ್ವರ !*

ದೈವದ ಕಲ್ಪನೆ ಭಾವದ ನೆಲೆಯದ್ದು, ಇನ್ನು ಭಕ್ತಿಯೂ ಮನಸ್ಸಿಗೆ ಸಂಬಂಧಿಸಿದ್ದು. ಎರಡೂ ಕಾಲ್ಪನಿಕ ಸಂಗತಿಗಳು. ಈ ಕಾಲ್ಪನಿಕ ಸಂಗತಿಗಳಿಗೂ ನಮ್ಮ ಕೈಯಿಂದ ಜರುಗಬೇಕಾದ ಕಾರ್ಯಕ್ಕೂ ಯಾವ ಸಂಬಂಧವೂ ಇಲ್ಲ. ಆದರೂ ವಾಯಕ್ಕೆ ಬಳಲುವ ಅರ್ಥಹೀನ ನಡೆ ಹೇಗಿದೆ ಎಂದರೆ ಎತ್ತನೇರಿ ಎತ್ತನರಸುವರು ಎತ್ತ ಹೋದರೋ ಎನ್ನುವಂತಿದೆ. ಎತ್ತನ್ನು ಕಳೆದುಕೊಂಡು, ಅದನ್ನು ಹುಡುಕಿ, ಅದರ ಮೇಲೆ ಕುಂತು ಮನೆಗೆ ಬಂದು ಎತ್ತನ್ನೂ ತನ್ನನ್ನೂ ಮರೆತುಬಿಡುವ ಹನ್ನೆರಡು ಚಿತ್ರಗಳ ಒಂದು ಝೆನ್ ಚಿತ್ರಮಾಲೆಯ ಕಲ್ಪನೆ ಇದೆ.

ಈ ಕತ್ತಲು ಬೆಳಕಿನ ಆಟವನ್ನು ಝೆನ್ ಆಗಲಿ, ಅಲ್ಲಮಗುರುವಾಗಲೀ ಆಡಲೆಂದು ಕೋನ್‌ಗಳ, ವಚನಗಳ ಸಲಕರಣೆಗಳನ್ನು ಕೊಟ್ಟಿದ್ದಾರೆ. ಅವುಗಳನ್ನು ಬಳಸಿ ಆಡಬೇಕಾದವರು ನಾವೇ. ಸುಮ್ಮನೆ ಅವುಗಳನ್ನು ಹಾಗೇ ಇಟ್ಟುಕೊಂಡಿದ್ದರೆ...

*ಹಿಡಿವ ಕೈಯ ಮೇಲೆ ಕತ್ತಲೆಯಯ್ಯ*
*ನೋಡುವ ಕಂಗಳ ಮೇಲೆ ಕತ್ತಲೆಯಯ್ಯ*
*ನೆನೆವ ಮನದ ಮೇಲೆ ಕತ್ತಲೆಯಯ್ಯ*
*ಕತ್ತಲೆಯೆಂಬುದು ಇತ್ತಲೆಯಯ್ಯ*
*ಗುಹೇಶ್ವರನೆಂಬುದು ಅತ್ತಲೆಯಯ್ಯ.*

ಗುಹೇಶ್ವರನೆಂಬ ಬೆಳಕ ಕಾಣಲು ಕತ್ತಲೆಯನ್ನು ದಾಟುವುದು ಅನಿವಾರ್ಯ. ನಮ್ಮೆಲ್ಲರ ನಿತ್ಯದ ಬದುಕಿನಲ್ಲಿ ಬೆಳಕಾಗದ ಹೊರತು ಗುಹೇಶ್ವರನೆಂಬ ಆಚಿನದ್ದು ಕಾಣದು.

**ಎಸ್. ನಟರಾಜ ಬೂದಾಳು**
'ಗೌರಿ', ನಳಂದ ಶಾಲೆ ಹಿಂಭಾಗ, ಸಪ್ತಗಿರಿ ಬಡಾವಣೆ
ತುಮಕೂರು – ೫೭೨ ೧೦೨

## ಚೀಣೀ ಕಮ್ಯುನಿಸ್ಟ್ ಪಾರ್ಟಿಯ ಮಹಾಧಿವೇಶನ : ಹೊಸ ಅಧ್ಯಾಯ ಆರಂಭ

**ಚೀ**ಣಾದ ಕಮ್ಯುನಿಸ್ಟ್ ಪಾರ್ಟಿಯ ಹತ್ತೊಂಬತ್ತನೇ ಮಹಾಧಿವೇಶನ ಅಕ್ಟೋಬರ್ ಕ್ರಾಂತಿಯ ನೂರನೇ ವರ್ಷದ ಸಂದರ್ಭದಲ್ಲಿ ಜರುಗಿದ್ದು ಒಂದು ಬಗೆಯಲ್ಲಿ ಸಮಂಜಸ. ಮಾವೋತ್ಸೆ ತುಂಗರ ನೇತೃತ್ವದಲ್ಲಿ ಚೀಣೀ ಜನತಾ ಗಣರಾಜ್ಯ ಸ್ಥಾಪನೆಗೊಂಡು ಅರವತ್ತೆಂಟು ವರ್ಷ ಮುಗಿದಿದೆ. ಚೀಣಾ ಮತ್ತು ರಷ್ಯದ ಮಹಾಕ್ರಾಂತಿಗಳಲ್ಲಿ ಹಲವು ಸಾಮ್ಯತೆಗಳನ್ನು ಕಾಣಬಹುದು. ಚೀಣಾ ಮೂಲತಃ ಕೃಷಿ ಪ್ರಧಾನ ದೇಶ. ರಷ್ಯ ಕೈಗಾರಿಕಾ ರಾಷ್ಟ್ರವೇನಾಗಿರಲಿಲ್ಲ. ಆದರೂ ಎರಡೂ ದೇಶಗಳಲ್ಲಿ ಕ್ರಾಂತಿ ಜರುಗಿ ಜಗತ್ತಿನಲ್ಲಿ ಹೊಸಯುಗ ಪ್ರಾರಂಭಿಸಿದುವು. ಕಳೆದ ಮೂರು ದಶಕಗಳಲ್ಲಿ ಚೀಣಾ ಕೈಗಾರಿಕೆ ಮತ್ತು ವಾಣಿಜ್ಯದಲ್ಲಿ ಅದ್ಭುತವಾದ ಪ್ರಗತಿ ಸಾಧಿಸಿದೆ. ಏಶಿಯಾದಲ್ಲಿ ಅತ್ಯಂತ ಪ್ರಬಲ ರಾಷ್ಟ್ರವಾಗಿದೆ. ಚೀಣೀ ಕಮ್ಯುನಿಸ್ಟ್ ಪಾರ್ಟಿ ಅಧಿವೇಶನದಲ್ಲಿ ಅದು ಎದ್ದುಕಾಣುತ್ತಿತ್ತು. ಮಾವೋತ್ಸೆ ತುಂಗ್ ಯಶಸ್ವೀ ಕ್ರಾಂತಿ ಪುರುಷ ಎನಿಸಿಕೊಂಡಿದ್ದರೆ, ಡೆಂಗ್‌ಕ್ಸಿಯಾವೊ ಪಿಂಗ್ ಸುಧಾರಣೆಗಳನ್ನು ಜಾರಿಗೆ ತಂದು ಚೀಣಾವನ್ನು ಕೈಗಾರಿಕಾ ಕ್ರಾಂತಿಯ ಪಥದಲ್ಲಿ ಮುನ್ನಡೆಸಿದವರು. ಅದೇ ಹಾದಿಯಲ್ಲಿ ಕ್ಸಿ ಜಿನ್ ಪಿಂಗ್ ಚೀಣೀ ಮಾದರಿ ಸಮಾಜವಾದವನ್ನು ನಿರ್ಮಿಸಲು ಹೊರಟಿದ್ದಾರೆ. ಮಾವೋ ಮತ್ತು ಡೆಂಗ್ ಪಂಕ್ತಿ ಸೇರಿರುವ ಕ್ಸಿ ಈಗ ಚೀಣಾದ ಅತ್ಯಂತ ಪ್ರಬಲ ನಾಯಕ.

ಎರಡನೇ ಬಾರಿಗೆ ಚೀಣೀ ಕಮ್ಯುನಿಸ್ಟ್ ಪಾರ್ಟಿ ನಾಯಕರಾಗಿ ಆಯ್ಕೆಯಾಗಿರುವ ಕ್ಸಿ ಜಿನ್ ಪಿಂಗ್ ಇಪ್ಪತ್ತೊಂದನೇ ಶತಮಾನದಲ್ಲಿ ಮಾರ್ಕ್ಸ್‌ವಾದಕ್ಕೆ ಹೊಸ ಅಧ್ಯಾಯ ಸೇರಿಸಲಿದ್ದಾರೆ ಎಂಬುದಾಗಿ ಊಹಿಸಲಾಗಿದೆ. ಈಗಾಗಲೇ ಚೀಣಾದ ಕಮ್ಯುನಿಸ್ಟ್ ನಾಯಕರುಗಳು ಕ್ಸಿ ಜಿನ್ ಪಿಂಗ್‌ರ ಚಿಂತನೆಗಳನ್ನು ಮಾರ್ಕ್ಸ್, ಏಂಗೆಲ್ಸ್, ಲೆನಿನ್, ಮಾವೋ, ಡೆಂಗ್ ಚಿಂತನೆಗಳ ಜೊತೆ ಸೇರಿಸಲು ಹೊರಟಿದ್ದಾರೆ. ಪಾರ್ಟಿ ಮಹಾಧಿವೇಶನದಲ್ಲಿ ಸುಮಾರು ಮೂರೂವರೆ ಗಂಟೆ ಮಾಡಿದ ತಮ್ಮ ಭಾಷಣದಲ್ಲಿ ಚೀಣಾದ ಪ್ರಗತಿಯನ್ನು ವಿವರಿಸಿ, ಹೊಸ ಯುಗದಲ್ಲಿ ಚೀಣೀ ಮಾದರಿಯ ಸಮಾಜವಾದದ ಪರಿಕಲ್ಪನೆಯನ್ನು ಕುರಿತು ತಮ್ಮ ಚಿಂತನೆಗಳನ್ನು ತೆರೆದಿಟ್ಟರು. ಕ್ಸಿಯವರ ಸಿದ್ಧಾಂತ ಮಾರ್ಕ್ಸ್‌ವಾದ ಲೆನಿನ್‌ವಾದವನ್ನು ಮತ್ತಷ್ಟು ಸಂಪನ್ನ ಗೊಳಿಸುತ್ತದಲ್ಲದೆ, ಮಾವೋ ಚಿಂತನೆಗಳನ್ನು ಮತ್ತು ಡೆಂಗ್ ಕ್ಸಿಯಾವೋ ಪಿಂಗ್‌ರ ಸಿದ್ಧಾಂತಗಳನ್ನು ವಿಸ್ತರಿಸುತ್ತದೆ ಎನ್ನುವುದು ಮಹಾಧಿವೇಶನದಲ್ಲಿ ಪ್ರತಿಧ್ವನಿಸಿತು. ಕ್ಸಿಯವರ ಪರಿಕಲ್ಪನೆಗಳನ್ನು ಚಿಂತನೆಗಳನ್ನು ಸಂವಿಧಾನದಲ್ಲಿ ಸೇರ್ಪಡಿಸುವ ಸಂಭವವೂ ಇದೆ. ಈ ಬಗ್ಗೆ ಪಾರ್ಟಿ ಅಧಿವೇಶನದಲ್ಲಿ ತೀರ್ಮಾನ ಕೈಗೊಳ್ಳಲಾಗಿದೆ.

ಕಳೆದ ಮೂರು ದಶಕಗಳಲ್ಲಿ ಚೀಣೀ ಕಮ್ಯುನಿಸ್ಟ್ ಪಾರ್ಟಿಯಲ್ಲಿ ಪರಿವರ್ತನೆ, ನಾಯಕತ್ವದಲ್ಲಿ ಬದಲಾವಣೆ ಸುಲಲಿತವಾಗಿ ಸಾಗಿದೆ. ಆರ್ಥಿಕವಾಗಿ, ಸೈನಿಕವಾಗಿ ಚೀಣಾ ಇಂದು ಏಶಿಯದ ಈ ಭೂಭಾಗದಲ್ಲಿ ಅತ್ಯಂತ ಪ್ರಬಲ ರಾಷ್ಟ್ರವಾಗಿ ಬೆಳೆದಿದೆ. ಕ್ಸಿ ಜಿನ್ ಪಿಂಗ್ ಆಡಳಿತಾವಧಿಯಲ್ಲಿ ಚೀಣಾ ತನ್ನ ಪ್ರಭಾವ ವಲಯವನ್ನು ವಿಸ್ತರಿಸಲು ಹೊರಟಿದೆ. ಅದರ ಮಹದಾಕಾಂಕ್ಷೆಯ ಹೆದ್ದಾರಿ ಯೋಜನೆ ಹಾಗೂ ದಕ್ಷಿಣ ಚೀಣಾ ಸಮುದ್ರಮಾರ್ಗದ ನಿಯಂತ್ರಣ ಕಿರಿಕಿರಿ ಉಂಟುಮಾಡಿದೆ. ಬಹುತೇಕ ರಾಷ್ಟ್ರಗಳು ಹೆದ್ದಾರಿ ಯೋಜನೆಯನ್ನು ಬೆಂಬಲಿಸಿವೆ. ಭಾರತ ಇದರಿಂದ ದೂರ ಉಳಿದಿದೆ. ಏಶಿಯಾದ ಈ ಭೂಭಾಗದಲ್ಲಿ ಭಾರತ, ಚೀಣಾಗಳೆರಡೂ ಪ್ರಬಲರಾಷ್ಟ್ರಗಳಾಗಿವೆ. ಈ ಎರಡೂ ರಾಷ್ಟ್ರಗಳು ಪರಸ್ಪರ ಸಹಕರಿಸಿದರೆ ಜಗತ್ತಿನ ಯಾವ ದೇಶವೂ ಅವನ್ನು ಎದುರಿಸಲು ಸಮರ್ಥವಾಗಲಾರದು. ಆದರೆ ಎರಡೂ ದೇಶಗಳ ನಡುವೆ ಹೊಂದಾಣಿಕೆಗೆ ಅಮೆರಿಕದೊಂದಿಗೆ ಸಂಬಂಧಗಳು ಅಡ್ಡಿಯಾಗಿವೆ. ಚೀಣಾದ ಆರ್ಥಿಕ ಪ್ರಗತಿ, ಮಾರುಕಟ್ಟೆಯ ದಾಹ ಅಮೆರಿಕದ ಕಣ್ಣು ಕೆಂಪಾಗಿಸಿದೆ. ಭಾರತದೊಂದಿಗೆ ಸಂಬಂಧಗಳನ್ನು ಅಮೆರಿಕ ಚೀಣಾದ ವಿರುದ್ಧ ಬಳಸಿಕೊಳ್ಳಲು ನೋಡುತ್ತಿದೆ. ಅಲ್ಲದೆ ಭಾರತ ಮತ್ತು ಚೀಣಾಗಳ ಮಧ್ಯೆ ಗಡಿವಿವಾದ ಇನ್ನೂ ಜೀವಂತವಾಗಿದೆ. ಈ ದೊಕ್ಲಾಮ ಗಡಿಯಲ್ಲಿನ ಭಾರತ–ಚೀಣಾ ಮುಖಾಮುಖಿಯನ್ನು ನೆನಪಿಸಿಕೊಳ್ಳಬಹುದು. ಹಾಗಾಗಿ ಮುಂದಿನ ಐದು ವರ್ಷಗಳು ಚೀಣೀ ಕಮ್ಯುನಿಸ್ಟ್ ನಾಯಕ ಕ್ಸಿ ಜಿನ್ ಪಿಂಗ್‌ರಿಗೆ ಮಾರ್ಗ ಸುಸೂತ್ರವಾಗೇನೂ ಇರದು.

ಆರ್ಥಿಕವಾಗಿ ಚೀಣಾವನ್ನು ಇನ್ನಷ್ಟು ಅಭಿವೃದ್ಧಿಗೊಳಿಸುವುದು ಮತ್ತು ಪ್ರಪಂಚದಲ್ಲಿ ಅದರ ಪ್ರಭಾವವನ್ನು ವಿಸ್ತರಿಸುವುದು ಮುಂದಿನ ವರ್ಷಗಳಲ್ಲಿ ಚೀಣಾದ ಗುರಿಯಾಗಿರುತ್ತದೆ. ಈಗಾಗಲೇ ಚೀಣಾ ದಕ್ಷಿಣ ಏಶಿಯದ ಸಣ್ಣಪುಟ್ಟ ದೇಶಗಳ ಜೊತೆ ಸಂಬಂಧಗಳನ್ನು ಕುದುರಿಸುತ್ತಿದೆ ಹಾಗೂ ಬಂಡವಾಳ ಹೂಡಿಕೆಯಲ್ಲಿ ತೊಡಗಿಕೊಂಡಿದೆ. ಮುಂದಿನ ವರ್ಷಗಳಲ್ಲಿ ಅದು ಹೆಚ್ಚಾಗುವ ಸಾಧ್ಯತೆಗಳಿವೆ. ಈ ಹಿನ್ನೆಲೆಯಲ್ಲಿ ಭಾರತ ಚೀಣಾದೊಂದಿಗೆ ಸಂಬಂಧಗಳನ್ನು ಪರಿಶೀಲಿಸಬೇಕಿದೆ.

* * *

## ಅಮೆರಿಕದಲ್ಲಿ ಉಗ್ರರ ಉಪಟಳ

**ಹ**ದಿನಾರು ವರ್ಷಗಳಾದ ಮೇಲೆ ಅಮೆರಿಕದ ನ್ಯೂಯಾರ್ಕ್ ನಗರದಲ್ಲಿ ಮತ್ತೊಮ್ಮೆ ಇಸ್ಲಾಮಿಕ್ ರಾಜ್ಯ ಸ್ಥಾಪನೆಯ ಉಗ್ರರು ದಾಳಿ ನಡೆಸಿದ್ದಾರೆ. ಈ ದಾಳಿ ನಡೆದದ್ದು ಕೂಡ ಕಳೆದ ಸಲ ವರ್ಲ್ಡ್ ಟ್ರೇಡ್ ಸೆಂಟರ್‌ನ ಮೇಲೆ ದಾಳಿ ನಡೆದ ಸ್ಥಳದ ಸಮೀಪದಲ್ಲೇ. ಈ ದಾಳಿಯ ಮೂಲಕ ಉಗ್ರರು ಬೇಕೆನಿಸಿದಲ್ಲಿ ತಮ್ಮ ಪ್ರತಾಪ ತೋರಿಸಬಲ್ಲೆವು ಎಂಬುದನ್ನು ತೋರಿಸಿದ್ದಾರೆ. ಇದುವರೆಗೆ ಬಾಂಬು, ಬಂದೂಕು, ಕಾರಿನಲ್ಲಿ ಸ್ಫೋಟಕ ತುಂಬಿ ದಾಳಿ ನಡೆಸುತ್ತಿದ್ದ ಉಗ್ರರು ಈಗ ತಮ್ಮ ಟ್ರಕ್ಕುಗಳನ್ನು ಅಮಾಯಕ ಜನರ ಮೇಲೆ ನುಗ್ಗಿಸುತ್ತಿದ್ದಾರೆ. ನ್ಯೂಯಾರ್ಕ್ ನಗರದಲ್ಲಿ ಜನನಿಬಿಡವಾದ ಮ್ಯಾನ್‌ಹಾಟನ್ ರಸ್ತೆಯಲ್ಲಿ ಉಜ್ಬೆಕಿಸ್ತಾನ ಮೂಲದ ಸೈಫುಲ್ಲ ಸೈಪೋವ್ ಎಂಬಾತ ನಡೆಸಿದ ಈ ದೌರ್ಜನ್ಯದಲ್ಲಿ ೮ ಮಂದಿ ದಾರಿಹೋಕರು ಹತರಾಗಿದ್ದು, ೧೨ ಮಂದಿಗೆ ಗಾಯಗಳಾಗಿವೆ. ಅಮೆರಿಕದಲ್ಲಿ ಒಂದಾದ ಮೇಲೊಂದು ದುರಂತ ಸಂಭವಿಸುತ್ತಲೇ ಇದೆ. ಈಚೆಗೆ ಲಾಸ್‌ವೇಗಾಸ್‌ನಲ್ಲಿ ಬಂದೂಕು ಸಂಸ್ಕೃತಿಯ ಹುಚ್ಚಾಟಕ್ಕೆ ಬಹುದೊಡ್ಡ ಸಂಖ್ಯೆಯಲ್ಲಿ ನಾಗರಿಕರು ಹತರಾಗಿದ್ದನ್ನು ನೆನಪಿಸಿಕೊಳ್ಳಬಹುದು.

ವಾಹನಗಳನ್ನು ಜನ ಸೇರುವ ಕಡೆ ನುಗ್ಗಿಸುವ ಆತ್ಮಾಹುತಿಯ ಪರಿಪಾಠ ಪ್ರಾರಂಭವಾದ್ದು ಎರಡು ವರ್ಷಗಳಿಂದೀಚೆಗೆ. ಕಳೆದ ಆಗಸ್ಟ್ ತಿಂಗಳಲ್ಲಿ ಸ್ಪೇನಿನ ಬಾರ್ಸಿಲೋನಾದಲ್ಲಿ ವಾಹನ ನುಗ್ಗಿಸಿದಾಗ ಹದಿನೈದು ಮಂದಿ ಸಾವಿಗೀಡಾದರು. ಹಾಗೆಯೇ ಲಂಡನ್ನಿನಲ್ಲಿ ಫುಟ್‌ಪಾತ್ ಮೇಲೆ ಟ್ರಕ್ ನುಗ್ಗಿದಾಗ ಎಂಟು ಮಂದಿ ಸತ್ತರು ಮತ್ತು ಹಲವರು ಚೂರಿ ಇರಿತದಿಂದ ಗಾಯಗೊಂಡರು. ಕಳೆದ ವರ್ಷ ಯೂರೋಪಿನ ಜರ್ಮನಿ ಮತ್ತು ಇಟಲಿಗಳಲ್ಲೂ ಇಂಥದೇ ಪ್ರಕರಣಗಳು ಜರುಗಿದ್ದವು. ಈಗ ಅಮೆರಿಕದ ಸರದಿ.

ಉಜ್ಬೆಕ್‌ನ ಈ ನಾಗರಿಕ ಅಮೆರಿಕದ ಗ್ರೀನ್ ಕಾರ್ಡ್ ಪಡೆದುಕೊಂಡ ದೇಶದ ಖಾಯಂ ನಿವಾಸಿ. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಅಧ್ಯಕ್ಷ ಟ್ರಂಪ್ ಅಮೆರಿಕದ ವಲಸೆ ನೀತಿಯ ಮೇಲೆ ಹರಿಹಾಯ್ದಿದ್ದಾರೆ. ಪ್ರತಿವರ್ಷ ಸುಮಾರು ೫೦,೦೦೦ ವಲಸೆಗಾರರಿಗೆ ಗ್ರೀನ್‌ಕಾರ್ಡ್ ಪರವಾನಗಿ ನೀಡುವ ಕ್ರಮವನ್ನು ಅಮೆರಿಕ ನಡೆಸಿಕೊಂಡು ಬಂದಿದೆ. ಈಗ ಅದನ್ನು ಬದಲಿಸಲು ಹೊರಟಿದ್ದಾರೆ ಟ್ರಂಪ್. ಅಧಿಕಾರವಹಿಸಿಕೊಂಡಾಗಿನಿಂದ ಅವರ ಗಮನವೆಲ್ಲ ವಲಸೆಗಾರರನ್ನು ತಡೆಗಟ್ಟುವುದೇ ಆಗಿದೆ. ಅಮೆರಿಕ ವಲಸಿಗರ ನಾಡು ಎಂಬುದನ್ನು ಅವರು ಮರೆತಿರುವಂತೆ ತೋರುತ್ತದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ತಾಯಿ ಒಬ್ಬಳು ಮಗಳನ್ನು ಮಾತ್ರವೇ ನಂಬಬಲ್ಲವಳಾಗಿದ್ದಳು. ತಾಯಿಗೆ ನೀರು, ಆಹಾರ ನೀಡಿ ಕಾಪಾಡುತ್ತಿದ್ದವಳು ಅವಳು ಮಾತ್ರವೇ. ಅವಳಾದರೂ ಉತ್ತಮ ಸಂತತಿಯನ್ನು ಮುಂದು ವರಿಸಲಿ ಎಂದು ಹಾರೈಸುತ್ತಾ ತಾಯಿ ಮಕ್ಕಳ ಪಾಲಿಗೆ ಇನ್ನಿಲ್ಲ ವಾದಳು. ಅಷ್ಟಾಗಿಯೂ ತನ್ನ ವ್ಯಾಮೋಹವನ್ನು ತೊರೆಯ ಲಾರದೇ ಒಂದು ಕಪ್ಪು ಬಟ್ಟೆಯಲ್ಲಿ ತನ್ನ ಅವಶೇಷಗಳನ್ನು ಕಟ್ಟಿಕೊಂಡು ಆಗಾಗ ಬಂದು ಬರಡಾದ ತನ್ನ ನೆಚ್ಚಿನ ಗ್ರಹದಲ್ಲಿ ಪಚ್ಚೆ ನೀಲಿ ರಂಗುಗಳನ್ನು ಅರಸಿ ನೊಂದಳು. ಅವಳ ರೋದನ, ಭೀತಿ ಆಗಾಗ ಬಿರುಗಾಳಿಯಾಗಿ, ಭೂಕಂಪವಾಗಿ ಮಕ್ಕಳ ಅರಿವಿಗೆ ಬರುತ್ತದೆ.



ಕಸ್ತೂರಿ

# ಸೂರ್ಯಪುತ್ರಿಯ ಸಾವು

ಕೆಲವು ಕಥೆಗಳು ಕಾಲದೇಶಾತೀತವಾಗಿ ಯಾವಾಗಲೂ ಎಲ್ಲೆಡೆ ಸಲ್ಲುತ್ತವೆ. ಅಂಥ ಕಥೆಗಳು ಭಾಷೆಯಿಂದ ಭಾಷೆಗೆ ಪ್ರವಹಿಸಿದಾಗ ಮಾತ್ರವೇ ಮಾತೃಭಾಷೆಯ ಹೊರತು ಬೇರ‍್ಯಾವುದೂ ಬಾರದ ಅಕ್ಷರಸ್ಥರು ಅವುಗಳನ್ನು ಅರಗಿಸಿಕೊಳ್ಳಬಲ್ಲರು. ಮನಸ್ಸಿದ್ದಲ್ಲಿ ಪಾಠ ಕಲಿಯಬಹುದು. ಇಲ್ಲವಾದರೆ ನಿಸರ್ಗವೇ ಬೆನ್ನುಬಗ್ಗಿಸಿ ದಬದಬ ಗುದ್ದುತ್ತದೆ. ಅಂಥ ಹಲವಾರು ಕಥೆಗಳಲ್ಲಿ ಆಯಾ ನೆಲದ ಜನಪದ ಸಂಸ್ಕೃತಿಯೂ, ಪಲಾಯನವಲ್ಲದ ಶ್ರೇಷ್ಠ ವಿರಾಗವೂ, ಕಾಯಕ ಯೋಗದ ಅಂತಿಮ ವಿಜಯವೂ ಇರುತ್ತದೆ. ಆಫ್ರಿಕಾದ ಅಸಾಂತಿ ಜನರು ಹೇಳುವ ಹಲವಾರು ಕಥೆಗಳಲ್ಲಿ ಇದೂ ಒಂದಾಗಿದ್ದು ನಮ್ಮ ಅಳಿವು ಉಳಿವಿನ ಸಂದೇಶ ನೀಡುವಂತಿದೆ.

ಬಹಳ ಹಿಂದೆ ಸೂರ್ಯನಿಗೆ ಪ್ರಖರ ತೇಜಸ್ವತಿಯಾದ ಮಗಳಿದ್ದಳಂತೆ. ಸೂರ್ಯನ ಮಗಳು ಎಂದರೆ ಕೇಳಬೇಕೆ ? ನಕ್ಷತ್ರಗಳ ಉಂಗುರಗಳನ್ನು ಧರಿಸಿ, ಸೂರ್ಯಕಿರಣಗಳಿಂದಲೇ ತಯಾರಾದ ಒಡವೆಗಳನ್ನು ಕೈ, ಕೊರಳು, ನಡುವಿನಲ್ಲಿ ಪ್ರಕಾಶಿಸುತ್ತಾ, ಧೂಮಕೇತುವನ್ನು ಕೇಶಾಭರಣವಾಗಿಸಿಕೊಂಡು ಬಾನಂಗಳದಲ್ಲಿ ಆಡುತ್ತಾ ಪಾಡುತ್ತಾ ವಿಹರಿಸುತ್ತಿದ್ದಳಾ ಚೆಲುವೆ.

ಒಂದು ದಿನ ಸೂರ್ಯಪುತ್ರಿ ಹಾಗೇ ತೇಲುತ್ತಾ ಬಹುದೂರದವರೆಗೆ ಬಂದುಬಿಟ್ಟಳು. ಅವಳಿಗೊಂದು ವಿನೂತನ ಗ್ರಹ ಕಂಡಿತು. ಅದು ಹಚ್ಚಹಸಿರಾಗಿಯೂ ನೀಲಿಯಾಗಿಯೂ ಕಂಗೊಳಿಸುತ್ತಿತ್ತು. ಹುಟ್ಟಿದಾರಭ್ಯ ಪ್ರಖರ ಬೆಳಕನ್ನೇ ಅನುಭವಿಸಿದ್ದ ಸೂರ್ಯಪುತ್ರಿಗೆ ಆ ಗ್ರಹದ ಸೌಂದರ್ಯ ಆಹ್ಲಾದಕರವೆನಿಸಿತು. ತಂದೆಯಲ್ಲಿಗೆ ಹಿಂತಿರುಗಿ "ಅಪ್ಪಾಜೀ, ನಾನಿವತ್ತು ತಿರುಗಾಡುತ್ತಾ ಒಂದು ದೂರದ ಗ್ರಹವನ್ನು ಕಂಡೆನು. ಅದು ಪಚ್ಚೆ ನೀಲಿ ರಂಗುಗಳಿಂದ ಕೂಡಿದ್ದು ತಂಪಾಗಿದೆ. ನನಗೆ ಅಲ್ಲಿನ ವೃಕ್ಷ ಸಿಂಹಾಸನ ಏರಬೇಕೆಂದಿದೆ. ನನ್ನನ್ನು ಅಲ್ಲಿಗೆ ಕಳುಹಿಸಿಕೊಡಿ" ಎಂದು ಬೇಡಿದಳು. ಸೂರ್ಯನ ದೃಷ್ಟಿವಲಯಕ್ಕೆ ಆ ಗ್ರಹ ಗೋಚರಿಸಿತು. ಅದ್ಯಾವುದೋ, ತನ್ನ ಉಜ್ವಲ ಪ್ರಭಾಮಯ ಪುತ್ರಿ ಅಲ್ಲಿಗೆ ಹೋದ ಬಳಿಕ ಏನೇನಾಗಲಿದೆ ಎಲ್ಲವೂ ತಿಳಿಯಿತು. ತಡೆಯಲಾಗದೆಂದು ತಿಳಿದಿದ್ದೂ ತನ್ನಿಂದಾಗುವ ಪ್ರಯತ್ನ ಮಾಡೋಣ ಎಂದು "ನನ್ನ ಮುದ್ದಿನ ಮಗಳೇ. ಆ ಗ್ರಹದ ಕುರಿತು ನಿನಗಿಂತಲೂ ನಾನು ಚೆನ್ನಾಗಿ ಬಲ್ಲೆನು. ಆ ಹಸಿರು ಪರಿಸರವೂ ನೀಲ ಜಲರಾಶಿಯೂ ನಿನ್ನ ಅತಿಶಯ ಕಾಂತಿಯನ್ನು ತಡೆದುಕೊಳ್ಳಲಾರವು. ಅವು ಬಹು ಕೋಮಲವಾದವು. ಒಮ್ಮೆಲೇ ನಿನ್ನ ಸ್ಪರ್ಶಕ್ಕೆ ಸುಟ್ಟು ಕರಕಾಗುತ್ತವೆ. ಆ ಕುರಿತು ನಿಧಾನವಾಗಿ ಯೋಚಿಸು. ಅದರ ಬದಲಿಗೆ ಬೇರೆ ಮೂರು ವರಗಳನ್ನು ಕೇಳಿಕೊಳ್ಳುವಿಯಾದರೆ ತಪ್ಪದೇ ಈಡೇರಿಸುವೆ" ಎಂದನು.

ಸೂರ್ಯಪತ್ರಿ ಒಪ್ಪಿಕೊಂಡಳು. ಸುಮಾರು ಒಂದು ಲಕ್ಷ ವರ್ಷಗಳ ಕಾಲ ಯೋಚಿಸಿದಳು. ಸೂರ್ಯಲೋಕದಲ್ಲಿ ಆ ಕಾಲ ಒಂದು ಕ್ಷಣಕ್ಕೆ ಸಮನಂತೆ. ಮಗಳ ಮನಸ್ಸು ಬದಲಾಗಲಿಲ್ಲ. "ಅಪ್ಪಾಜೀ, ನಾನು ಅಲ್ಲೇ ಇರಬೇಕು ಎಂದು ಈಗಲೂ ಆಶಿಸುವೆ. ನನ್ನಿಂದ ಆ ಸುಂದರ ಗ್ರಹದ ಪರಿಸರಕ್ಕೆ ಕಿಂಚಿತ್ತೂ ಧಕ್ಕೆಯಾಗುವುದಿಲ್ಲ. ನಾನು ಹೆತ್ತಮ್ಮನಂತೆ ಅದನ್ನು ಕಾಪಾಡಬೇಕೆಂದಿರುವೆ. ನನ್ನ ಪ್ರಖರತೆಯನ್ನು ತಗ್ಗಿಸಿ ತಾಯ್ತನದ ತಂಪನ್ನು ಕರುಣಿಸು. ನನಗೆ ಬೇರಾವ ವರವೂ ಬೇಡ" ಎಂದು ಪ್ರಾರ್ಥಿಸಿದಳು.



"ಹಾಗೇ ಆಗಲಮ್ಮಾ. ಆ ಗ್ರಹಕ್ಕೆ ತಾಯಿಯೇ ಆಗು. ನೀನು ಈ ಅತಿಶಯ ಪ್ರಖರತೆ ಕಳೆದು ಕೊಳ್ಳುವುದರಿಂದ ನನ್ನನ್ನು ನೇರವಾಗಿ ನೋಡಲಾರೆ. ಎಲ್ಲವೂ ಒಳ್ಳೆಯದಾಗಲಿ" ಎಂದು ನೋವಿನಿಂದ ವಿದಾಯ ಹೇಳಿದನು.

ಆ ಸುರಸುಂದರಿ ತನ್ನ ಉಂಗುರಗಳು, ಕಡಗಗಳು, ಹಾರಗಳು, ಧೂಮಕೇತುಗಳನ್ನು ಕಳಚಿ ತಂದೆಗೆ ಒಪ್ಪಿಸಿದಳು. ಅವೆಲ್ಲವೂ ಸೂರ್ಯನ ಸುತ್ತಲೂ ಹಾಲುಹಾದಿ(ಮಿಲ್ಕಿವೇ)ಯಲ್ಲಿ ಹರಡಿಕೊಂಡವು. ಸೂರ್ಯಪುತ್ರಿಕೆಯು ಕೊಡಲಿ, ಚಾಪೆ, ದುಪ್ಪಟ, ಬಿಂದಿಗೆ ಇತ್ಯಾದಿ ಸರಳವಸ್ತುಗಳೊಂದಿಗೆ ವಿಶ್ವಾಂತರಾಳದಲ್ಲಿ ತೇಲುತ್ತಾ ತಾನು ಮೆಚ್ಚಿದ ಗ್ರಹವನ್ನು ತಲುಪಿದಳು.

ಆ ಗ್ರಹದಲ್ಲೆಲ್ಲಿ ನೋಡಿದರೂ ಸೂರ್ಯರಶ್ಮಿಗೂ ಪ್ರವೇಶ ಸಿಗದಂತಹಾ ಗಗನಚುಂಬೀ ವೃಕ್ಷಗಳಿದ್ದು ನಡುನಡುವೆ ನೀಲಾಕಾಶ ತೇಪೆ ಹಾಕಿದಂತೆ ಕಾಣುತ್ತಿದೆ. ಹಚ್ಚಗಿನ ಮೈದಾನದ ತುಂಬಾ ದಟ್ಟವಾದ ಪೊದೆಗಳು, ಅವಳು ಕನಸಿನಲ್ಲೂ ಕಂಡು ಕೇಳರಿಯದ ಗಿಡಗಳು, ವರ್ಣರಂಜಿತ ಹೂಗಳು... ಅವಳಿಗೆ ಆನಂದವನ್ನು ಭರಿಸುವುದೇ ಅಸಾಧ್ಯವಾಯಿತು. "ಇಷ್ಟೊಂದು ಸಂತೋಷವನ್ನು ನಾನು ಒಂಟಿಯಾಗಿ ಭರಿಸಲಾರೆ. ನನಗೆ ಮಕ್ಕಳು ಬೇಕು. ತುಂಬ ತುಂಬ ಮಕ್ಕಳು ಬೇಕು. ಈ ಪಚ್ಚೆ ಸಂಪತ್ತನ್ನು ನಾನವರೊಂದಿಗೆ ಹಂಚಿಕೊಳ್ಳುವೆ. ಅವರನ್ನು ಸಲಹುವ ಪೋಷಿಸುವ ಸಾಮರ್ಥ್ಯ ನನ್ನಲ್ಲಿದೆ" ಎಂದು ದೇವರಲ್ಲಿ ಮೊರೆ ಇಟ್ಟಳೋ ಇಲ್ಲವೋ ಇರುವೆಗಳು ಗೂಡಿನಿಂದ ಎದ್ದಂತೆ ನೆಲದಿಂದ ಎದ್ದು ಬಂದರು ನೂರಾರು ಸಾವಿರಾರು ಮಕ್ಕಳು. ಮುದ್ದುಮುದ್ದಾದ ಆರೋಗ್ಯಶಾಲಿ ಮಕ್ಕಳು. ಅವರೆಲ್ಲರಿಗೂ ಸೂರ್ಯಪುತ್ರಿಕೆಯೇ ಒಂಟಿ ಪೋಷಕಿಯಾದಳು. ಅವಳೀಗ ಶೀತಲ ಪ್ರೇಮದ ಸಾಕಾರವಾಗಿರುವಳು.

ಸೂರ್ಯ ಭಗವಾನನು ಆಗಾಗ ವೃಕ್ಷಗಳ ಮಧ್ಯದಿಂದ ಕಳುಹಿಸಿಕೊಟ್ಟ ಬಿಸಿಲಿನಿಂದ ಆಕೆ ಮಕ್ಕಳನ್ನು ಚಳಿಯಿಂದ ಬೆಚ್ಚಗಿರಿಸುವಳು. ತಾನು ತಂದಿದ್ದ ಬಿಂದಿಗೆಯಿಂದ ನೀರು ಸುರಿದು ಕೆರೆ ನದಿ ಸಮುದ್ರಗಳನ್ನು ನಿರ್ಮಿಸಿದಳು. ಆವಿಯಾಗಿ ಮೇಲೇರಿದ್ದ ನೀರನ್ನು ಸೂರ್ಯ ಸಮೃದ್ಧವಾಗಿ ಮಕ್ಕಳು ಮೊಮ್ಮಕ್ಕಳ ನೆಲೆಯಾಗಿದ್ದ ಗ್ರಹದ ಮೇಲೆ ಮಳೆಗರೆದನು. ತಾಯಿ ಬೆವರು ರಕ್ತಹರಿಸಿ ಧಾನ್ಯಗಳು, ತರಕಾರಿ, ಹಣ್ಣುಗಳನ್ನು ಬೆಳೆದು ಮಕ್ಕಳಿಗೆ ಉಣಿಸಿದಳು. ಸ್ವಚ್ಛ ಗಾಳಿಯಿಂದ, ಸುಖೋಷ್ಣ ದೇಹಕಾಂತಿಯಿಂದ ಮಕ್ಕಳನ್ನು ದಷ್ಟಪುಷ್ಟಗೊಳಿಸಿದಳು. ಮಕ್ಕಳೊಂದಿಗೆ ಆಡಿಕೊಳ್ಳಲು ಪ್ರಾಣಿಪಕ್ಷಿಗಳನ್ನು ಸೃಜಿಸಿದಳು.

ಮಕ್ಕಳ ದೇಹಗಳು ಬಲಿತವು. ತಾಯಿ ಎಲ್ಲ ಮಕ್ಕಳಿಗೂ ಒಂದೇ ಆರೈಕೆ, ಪೋಷಣೆಗಳನ್ನು ಒದಗಿಸುತ್ತಿರುವಳಾದರೂ, ಅವರೆಲ್ಲಾ ಒಂದೇ ರೀತಿ ಬೆಳೆಯಲಿಲ್ಲ. ಕೆಲವರು ಎಷ್ಟಿದ್ದರೂ ಇನ್ನಷ್ಟು ಬೇಕೆನ್ನುವ ಲೋಭಿಗಳಾದರು. ಮತ್ತೆ ಕೆಲವರು ಲೋಭ, ಸ್ವಾರ್ಥಗಳಿಂದ ಇತರರ ಪ್ರಾಣ ತೆಗೆಯುವುದಕ್ಕೂ ಮುಂದಾದರು. ಕೆಲವರು ತಮಗೆ ಗೊತ್ತಿಲ್ಲದ್ದು ಏನೂ ಇಲ್ಲವೆಂಬಂತೆ ಬೌದ್ಧಿಕ ಯಜಮಾನಿಕೆಗೆ ಮುಂದಾದರು. ಇಂಥವರ ಮಧ್ಯೆ ಅಂದಂದಿನ ಅಗತ್ಯಗಳು ಪೂರ್ತಿಯಾದರೆ ಸಾಕೆನ್ನುವವರು, ಏನೂ ಅರಿಯದ ಮುಗ್ಧರು, ಇತರರ ತಪ್ಪುಗಳನ್ನು ತಮ್ಮ ಮೇಲೆಳೆದುಕೊಳ್ಳುವವರೂ ಇದ್ದರು. ಇವರೆಲ್ಲಾ ಲೋಭಿಗಳಿಂದ, ಮುಠ್ಠಾಳರಿಂದ, ಕ್ರೂರಿಗಳಿಂದ ತಮ್ಮನ್ನು ತಾವು ಕಾಪಾಡಿಕೊಳ್ಳುವುದಕ್ಕೆ ಹೆಣಗಾಡತೊಡಗಿದರು.

ತಾಯಿಯತ್ತ ಲಕ್ಷ್ಯ ಕೊಡುವುದಕ್ಕೆ ಅವರಿಗೆ ಮನಸ್ಸು ಇಲ್ಲ, ಸಮಯವೂ ಇಲ್ಲ. ಅವರಿಗೆ ಕಾಯಿಲೆಯಾದರೆ, ಗಾಯಗಳಾದರೆ ತಾಯ ಮಡಿಲಿನಲ್ಲೇ ಸಂಜೀವಿನಿಯ ಭಂಡಾರವಿದೆ. ನೆಲಹಾಳ ಜಲಹಾಳ ಮಕ್ಕಳಿಗೆ ಬೇಕಾಗಿರುವುದು ಇವೆಲ್ಲಾ ಅಲ್ಲ. ಆ ಚಂಡಾಲರು ಖನಿಜಗಳಿಗಾಗಿ, ಲೋಹಗಳಿಗಾಗಿ ತಾಯಿಯ ಶರೀರವನ್ನು ಗೀರಿದರು, ಕೆತ್ತಿದರು. ಕಬ್ಬಿಣದ ಹಾರೆಯಿಂದ ತಮಗೆ ಹಾಲುಣಿಸಿದ ಎದೆಯನ್ನು ಮೀಟಿದರು. ತಾಯೆದೆಯಿಂದ ಚಿಮ್ಮಿದ ಬಿಸಿನೆತ್ತರ ಪ್ರವಾಹದಲ್ಲಿ ಸಿಲುಕಿದ ವೃಕ್ಷ ರಾಜಿಗಳು ಕರಟಿ ಹೋದವು.

ಸೂರ್ಯ ಮಗಳ ದುರವಸ್ಥೆ ಕಂಡು ಉರಿದುಹೋದನು. ಅವಳು ಅಕ್ಷಯವಾಗಿಸಿದ್ದ ಜಲನಿಧಿಗಳು ಕ್ಷಯಿಸಿಕೊಂಡು ಹೋದವು. ದುಷ್ಟಮಕ್ಕಳು ತಾಯ ಪಚ್ಚೆಯುಡುಗೆ ಬಿಚ್ಚಿದರು. ಹಸಿರು ಕೇಶಗಳನ್ನು ಬೋಳಿಸಿದರು. ಕೊನೆಗೆ ಅವಳ ಗರ್ಭವನ್ನೇ ಸೀಳಿ ರತ್ನಗಳ ಸಂಗ್ರಹಕ್ಕಿಳಿದರು.

ತಾಯಿಯ ಸಹನೆ ಎಲ್ಲ ಸರಹದ್ದುಗಳನ್ನು ದಾಟಿಹೋಯಿತು. ಮಕ್ಕಳು ತಮ್ಮ ಸಹಚರರಾಗಿದ್ದ ಪ್ರಾಣಿ–ಪಕ್ಷಿ–ಕ್ರಿಮಿ–ಕೀಟಾದಿಗಳನ್ನೆಲ್ಲಾ ಆಪೋಶನ ತೆಗೆದುಕೊಂಡರು. ತಾಯಿ ದೀರ್ಘವಾಗಿ ನಿಟ್ಟುಸಿರು ಬಿಟ್ಟಳು. ಅದು ಬಿರುಗಾಳಿಯಾಗಿ ಅಳಿದುಳಿದ ಮರಗಳನ್ನು ಕಿತ್ತು ಮಕ್ಕಳ ಮೇಲೆ ಎಸೆಯಿತು. ಬತ್ತಿದ್ದ ಜಲಧಿ ಅವಳ ಕಣ್ಣೀರಿನಿಂದ ತುಂಬಿ ಭೋರ್ಗರೆದು ನಿಟ್ಟುಸಿರಿನ ಪ್ರಚಂಡ ಬಿರುಗಾಳಿಗೆ ಸಿಲುಕಿ ಅಬ್ಬರಿಸುತ್ತಾ ಮಕ್ಕಳ ಮೇಲೆ ನುಗ್ಗಿತು. ತನ್ನ ಆವೇಶದಿಂದ ಇಂಥ ಪ್ರಮಾದಗಳಾದವಲ್ಲಾ ಎಂದು ತಾಯಿ ಭೀತಿಯಿಂದ ಕಂಪಿಸುತ್ತಲೇ ಅವಳ ಒಡಲಿನ ಆಸರೆ ತಪ್ಪಿ ಮಕ್ಕಳು ತರಗೆಲೆಗಳಂತೆ ಉದುರಿಹೋದರು.

ಇಷ್ಟೆಲ್ಲಾ ದಾರುಣಗಳ ಮಧ್ಯೆ ತಾಯಿ ಒಬ್ಬಳು ಮಗಳನ್ನು ಮಾತ್ರವೇ ನಂಬಬಲ್ಲವಳಾಗಿದ್ದಳು. ತಾಯಿಗೆ ನೀರು, ಆಹಾರ ನೀಡಿ ಕಾಪಾಡುತ್ತಿದ್ದವಳು ಅವಳು ಮಾತ್ರವೇ. ಅವಳಾದರೂ ಉತ್ತಮ ಸಂತತಿಯನ್ನು ಮುಂದುವರಿಸಲಿ ಎಂದು ಹಾರೈಸುತ್ತಾ ತಾಯಿ ಮಕ್ಕಳ ಪಾಲಿಗೆ ಇನ್ನಿಲ್ಲವಾದಳು. ಅಷ್ಟಾಗಿಯೂ ತನ್ನ ವ್ಯಾಮೋಹವನ್ನು ತೊರೆಯಲಾರದೇ ಒಂದು ಕಪ್ಪು ಬಟ್ಟೆಯಲ್ಲಿ ತನ್ನ ಅವಶೇಷ ಗಳನ್ನು ಕಟ್ಟಿಕೊಂಡು ಆಗಾಗ ಬಂದು ಬರಡಾದ ತನ್ನ ನೆಚ್ಚಿನ ಗ್ರಹದಲ್ಲಿ ಪಚ್ಚೆ ನೀಲಿ ರಂಗುಗಳನ್ನು ಅರಸಿ ನೊಂದಳು. ಅವಳ ರೋದನ, ಭೀತಿ ಆಗಾಗ ಬಿರುಗಾಳಿಯಾಗಿ, ಭೂಕಂಪವಾಗಿ ಮಕ್ಕಳ ಅರಿವಿಗೆ ಬರುತ್ತದೆ. ಅವರು ಮಾತ್ರ ಪೀಳಿಗೆಯಿಂದ ಪೀಳಿಗೆಗೆ ದುಷ್ಟರಾಗುತ್ತಲೇ ಹೋಗುತ್ತಿದ್ದಾರೆ.

ತಾಯಿ ಅಂಥ ಒಂದು ತೂಫಾನ್ ಮೂಲಕ ಆಕಾಶಕ್ಕೆ ಹಾರಿಹೋದಳು. ತಂದೆಯ ತೇಜ ಅವಳಲ್ಲಿ ಪುನಃ ಸೌಂದರ್ಯ, ಜೀವಂತಿಕೆಗಳಿಂದ ತುಂಬಿ ತುಳುಕುವಂತೆ ಮಾಡಿತು. ಇಂದಿಗೂ ಆ ತಾಯಿ ಚಂದ್ರಮನಾಗಿ ಪ್ರೇಮದ ಬೆಳದಿಂಗಳನ್ನು ಈ ಮಕ್ಕಳ ಮೇಲೆ ಸುರಿಸುತ್ತಲೇ ಇರುವಳು. ಅದನ್ನು ಆಸ್ವಾದಿಸುವ ಅರ್ಹತೆ ಇಲ್ಲದ ಆ ನತದೃಷ್ಟ ಮಕ್ಕಳು ಕೃತಕ ಗಾಳಿ ಬೆಳಕಿನಲ್ಲಿ ಕಾಗದದ ಕಂತೆಗಳ ಮೇಲೆ ಉರುಳಾಡುತ್ತಾ ಬರಡು ನೆಲದಲ್ಲಿ, ಬಣ್ಣ ಹಚ್ಚಿದ ಆಹಾರಗಳನ್ನು ಸೇವಿಸುತ್ತಾ ರಾಸಾಯನಿಕ ಔಷಧಗಳಲ್ಲಿ ಸತ್ತ ಕೀಟಗಳಂತೆ ತೇಲುತ್ತಿದ್ದಾರೆ. ಆ ದೃಶ್ಯಗಳನ್ನು ಕಂಡ ಚಂದ್ರಮಾತೃಕೆ ಪುನಃ ಕೊರಗಿನಲ್ಲಿ ಕ್ಷೀಣಿಸುತ್ತಿದ್ದಾಳೆ. ಮತ್ತೆ ಭರವಸೆಯಿಂದ ಮೈದುಂಬಿಕೊಳ್ಳುತ್ತಾಳೆ.

ಅವಳು ಪ್ರತಿನಿಧಿಯಾಗಿ ಬಿಟ್ಟುಹೋಗಿರುವ ತಾಯಂದಿರಿಗೆ ಮತ್ತೆ ಪಚ್ಚೆಯುಡಿಸಿ, ಪುಷ್ಪಾಭರಣ ತೊಡಿಸಿ, ಪಶ್ಚಾತ್ತಾಪದ ಕಣ್ಣೀರಿನಿಂದ ತೋಯಿಸಿದರೆ ಮತ್ತೆ ಸಂಜೀವಿನಿಯಿಂದ ಚೈತನ್ಯಭರಿತರಾಗಿರುವಂಥ ಅವಕಾಶ ಭೂತಾಯಿ ಮಕ್ಕಳಿಗೆ ಉಳಿದಿದೆ. ಅವಕಾಶದ ಪರಿಧಿ ಕಿರಿದಾಗುತ್ತಾ ಹೋಗುತ್ತಿದೆ. ರೋಗಿಯ ಕಣ್‌ದೃಷ್ಟಿಯಂತೆ. ಅರಿವಿನ ಬೆಳಕು ಮಾತ್ರವೇ ಆ ದೃಷ್ಟಿಯನ್ನು ಸರಿಪಡಿಸಬಲ್ಲದು. ಆಶಾವಾದವಿರಲಿ.

(ಆಫ್ರಿಕನ್ ಟೇಲ್ಸ್ ಕತೆಯೊಂದರ ಸಾರ ಸಂಗ್ರಹ)

**ಕಸ್ತೂರಿ**
ಸಿದ್ಧೇಶ್ವರ ಮೆಸ್ ಎದುರು, ಪಿ–೨೬, ತೋಟಗಾರಿಕೆ ಇಲಾಖೆ ರಸ್ತೆ ಎಸ್. ಎಸ್. ಪುರಂ
ತುಮಕೂರು – ೫೭೨ ೧೦೨

## ಗಜ಼ಲ್

ಗಾಯಗೊಂಡಿದೆ ಮನವು ನಿನ್ನ ಮಧುರ ನುಡಿಗಳಿಲ್ಲದೆ
ಸೋತುಹೋಗಿದೆ ತನುವು ನಿನ್ನ ಒಲವಿನ ಉಸಿರಿಲ್ಲದೆ

ಕೋಗಿಲೆಯ ಕೂಜನವೂ ದಿಕ್ಕುಗಾಣದಂತಾಗಿದೆ
ಒಲವಿನೊರತೆಯೂ ಬತ್ತಿದೆ ನಿನ್ನ ತುಟಿಯ ಬಿಸುಪಿಲ್ಲದೆ

ನೀನಿಲ್ಲದೇ ಕಾಲ್ಗೆಜ್ಜೆಗಳೆಲ್ಲ ಮೌನವಾಗಿವೆ
ವಾದ್ಯಗಳೆಲ್ಲ ಮುಸುಕೆಳೆದು ಮಲಗಿವೆ ನಾದವಿಲ್ಲದೆ

ಸಾಕಿ ತಂದಿರುವ ಮಧುವೂ ಮತ್ತೇರದಂತಾಗಿದೆ
ಬರಡಾದ ಇರುಳುಗಳು ಹುಯ್ಯಲಿಡುತಿವೆ ಒಡತಿಯಿಲ್ಲದೆ

ಮಧುಚಂದ್ರದ ಮಧುರ ನೆನಪಿನಲೇ ಸುಡುತಿಹನು ಸಿದ್ಧ
ಬೆಳದಿಂಗಳೂ ಬೇಸಗೆ ಬಿಸಿಲಾಗಿದೆ ಪ್ರೀತಿಯಿಲ್ಲದೆ

**ಸಿದ್ಧರಾಮ ಹಿರೇಮಠ**
ಬಾಪೂಜಿನಗರ, ಕೂಡ್ಲಿಗಿ – ೫೮೩ ೧೩೫, ಬಳ್ಳಾರಿ ಜಿಲ್ಲೆ

# ಗ್ರಹಗಳಿಲ್ಲದ ನಕ್ಷತ್ರಲೋಕ



**ಸಾ**ಮಾನ್ಯವಾಗಿ ಡಿಸೆಂಬರ್ ಎಂದರೆ ಶುಭ್ರ ಆಕಾಶ ದೊರಕುವುದು ಖಚಿತ. ಮೊದಲ ಕೆಲವು ದಿನಗಳಲ್ಲಿ ಚಂಡಮಾರುತವೋ ವಾಯುಭಾರ ಕುಸಿತವೋ ಆಗಿ ಮೋಡ ಮುಸುಕಿದ್ದರೂ ತಿಂಗಳ ಕೊನೆಗೆ ನೀಲಿ ಆಕಾಶ ಅನಾವರಣವಾಗುವುದು. ನಕ್ಷತ್ರಲೋಕದ ಪರಿಚಯಕ್ಕೆ ಇದು ಸುಸಮಯ. ಈ ಬಾರಿ ಸಂಜೆಗೆ ಯಾವುದೇ ಗ್ರಹವೂ ಇಲ್ಲ. ಆದ್ದರಿಂದ ನಕ್ಷೆಯನ್ನು ಬಳಸಿ ಎಲ್ಲ ನಕ್ಷತ್ರಪುಂಜಗಳನ್ನು ಪರಿಚಯ ಮಾಡಿಕೊಳ್ಳಬಹುದು. ಮೊದಲು ರಾಶಿಚಕ್ರದ ಪುಂಜಗಳ ಪರಿಚಯ ಮಾಡಿಕೊಳ್ಳೋಣ.

ನೆತ್ತಿಯ ಮೇಲೆ ಕಾಣುವ ಚೌಕವೇ ನಕುಲ (ಪೆಗಸಸ್). ಇದರ ಪಕ್ಕಗಳಲ್ಲಿ ಕಾಣುವ ಎರಡು ಪಂಚಕೋನಾ ಕೃತಿಗಳ ಕ್ಷೀಣ ನಕ್ಷತ್ರಗಳು ಮೀನ ರಾಶಿಯ ಮೀನುಗಳು. ಇದರ ಪೂರ್ವಕ್ಕೆ ಕಾಣುವ ಕ್ಷೀಣ ತ್ರಿಕೋಣ ಮೇಷ ರಾಶಿ. ಇದರ ಪಕ್ಕದಲ್ಲಿಯೇ ಇನ್ನೊಂದು ತ್ರಿಕೋನವೂ ಇದೆ. ಅದು ಮೇಷ ರಾಶಿಗೆ ಸೇರಿದ್ದಲ್ಲ. ಅದಕ್ಕಿಂತ ಪೂರ್ವಕ್ಕೆ ವೃಷಭ ರಾಶಿಯ ರೋಹಿಣಿಯನ್ನು ಒಳಗೊಂಡ ಇಂಗ್ಲಿಷ್ 'ವಿ' ಆಕಾರದ ಗುಚ್ಛ. ಇದಕ್ಕೆ ಹಯಡೆಸ್ ಎಂಬ ಹೆಸರಿದೆ. ಚಂದ್ರ ಈ 'ವಿ' ಆಕಾರದೊಳಗೆ ಕಾಣುವುದು ಅಪರೂಪ. ಇದನ್ನು ಭಾರತೀಯ ಪಠ್ಯಗಳಲ್ಲಿ ಶಕಟ ಅಂದರೆ ಗಾಡಿ ಎಂದು ಕರೆದಿದ್ದಾರೆ. ಚಂದ್ರ ಈ ಶಕಟದಲ್ಲಿ ಕಾಣುವ ಘಟನೆ ಯನ್ನು ಮುಂಚಿತವಾಗಿ ಲೆಕ್ಕ ಹಾಕಲು ಪಠ್ಯಗಳಲ್ಲಿ ಒಂದು ಪರಿಚ್ಛೇದವೇ ಇರುತ್ತದೆ. ೩ ಮತ್ತು ೩೧ರಂದು ಚಂದ್ರನ ಸ್ಥಾನವನ್ನು ಗಮನಿಸಿ. ಅದು ರೋಹಿಣಿಯ ಪಕ್ಕದಲ್ಲಿಯೇ ಇದ್ದರೂ "ಗಾಡಿ"ಯ ಒಳಗಿರುವುದಿಲ್ಲ. ವೃಷಭಕ್ಕೆ ಸೇರಿದ ಇನ್ನೊಂದು ನಕ್ಷತ್ರಗುಚ್ಛ ಕೃತ್ತಿಕಾ. ಇದಕ್ಕೆ ಪ್ಲೆಯಡಿಸ್ ಎಂಬ ಹೆಸರಿದೆ. ಈ ಎರಡೂ ಗುಚ್ಛಗಳಲ್ಲಿ ನಕ್ಷತ್ರಗಳ ಹಂಚಿಕೆಯನ್ನು ಗಮನಿಸಿ. ಹಯಡೆಸ್ ಹತ್ತಿರದಲ್ಲಿದೆ; ಆದ್ದರಿಂದ ನಕ್ಷತ್ರಗಳನ್ನು ಬಿಡಿಬಿಡಿಯಾಗಿ ಬರಿಗಣ್ಣಿನಿಂದಲೇ ಗುರುತಿಸಬಹುದು. ಆದರೆ ಕೃತ್ತಿಕಾ ದೂರದಲ್ಲಿರುವುದರಿಂದ ದೂರದರ್ಶಕದಿಂದ ಮಾತ್ರ ಬಿಡಿಬಿಡಿಯಾಗಿ ನಕ್ಷತ್ರಗಳನ್ನು ಕಾಣಬಹುದು.

ವೃಷಭದಿಂದ ಪೂರ್ವಕ್ಕೆ ಮಿಥುನ. ಆಕಾಶದ ಈ ಭಾಗದಲ್ಲಿ ಮಿಥುನ, ಮಹಾವ್ಯಾಧ ಜೊತೆಗೆ ವಿಜಯಸಾರಥಿ ಇವೂ ಸೇರಿ ನಕ್ಷತ್ರಗಳಿಂದ ತುಂಬಿದಂತೆ ಕಾಣುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಪಶ್ಚಿಮದಲ್ಲಿ ನಕ್ಷತ್ರಗಳ ಕೊರತೆಯಿದೆ ಎನ್ನಿಸುತ್ತದೆ. ನೆತ್ತಿಯ ಮೀನ ರಾಶಿಯ ಪಶ್ಚಿಮಕ್ಕೆ ಕುಂಭ, ಅದರ ಪಶ್ಚಿಮಕ್ಕೆ ಮಕರ ಇವುಗಳಲ್ಲಿ ಪ್ರಖರ ನಕ್ಷತ್ರಗಳು ಹೆಚ್ಚಾಗಿಲ್ಲ. ನಕ್ಷೆಯನ್ನು ಬಳಸಿ ಈ ಆಕಾರಗಳನ್ನು ಗುರುತಿಸಬೇಕು.




ಉತ್ತರದಲ್ಲಿ ಕುಂತಿ (ಕೆಸಿಯೋಪಿಯ), ದ್ರೌಪದಿ (ಆಂಡ್ರೋಮಿಡಾ) ಮತ್ತು ಪಾರ್ಥ (ಪರ್ಸಿಯಸ್) ಇವು ಕಾಣುತ್ತವೆ. ಆಕಾಶ ಶುಭ್ರವಾಗಿ ಇರುವುದರಿಂದ ದ್ರೌಪದಿ ಪುಂಜದಲ್ಲಿ ಆಂಡ್ರೋಮಿಡಾ ಗೆಲಾಕ್ಸಿಯನ್ನೂ ನೋಡಬಹುದು. ಇದು ಬರಿಗಣ್ಣಿಗೆ ಹತ್ತಿಯ ಪದರದಂತೆ ಕಾಣುತ್ತದೆ. ಅದು ನಕ್ಷತ್ರದಂತೆ ಕಾಣುವುದಿಲ್ಲ. ದುರ್ಬೀನು ಅಥವಾ ದೂರದರ್ಶಕದಿಂದ ನೋಡಿದಾಗ ಚಿಕ್ಕ ಮೋಡದಂತೆ ಕಾಣುತ್ತದೆ. ಇದೇ ರೀತಿಯ ಮೋಡಗಳು ಪಾರ್ಥ ಪುಂಜದಲ್ಲಿಯೂ ಕಾಣುತ್ತವೆ. ಆದರೆ ಅವು ನಕ್ಷತ್ರ ಗುಚ್ಛಗಳು; ನಮ್ಮ ಗೆಲಾಕ್ಸಿಗೇ ಸೇರಿದವು. ಮಹಾವ್ಯಾಧ ಪುಂಜದಲ್ಲಿ ಕಾಣುವ ಹತ್ತಿಯ ಪದರದಂತೆ ಕಾಣುವ ಕಾಯಕ್ಕೆ ಒರೈಯನ್ ನೆಬ್ಯುಲಾ ಎಂದು ಹೆಸರು. ಇದು ಅನಿಲದ ಮೋಡ; ಇಲ್ಲಿ ಹೊಸ ಹೊಸ ನಕ್ಷತ್ರಗಳು ಜನ್ಮ ತಳೆಯುತ್ತಿವೆ. ಹೀಗೆ ಮೂರೂ ಹತ್ತಿಯ ಪದರಗಳ ಹಾಗೆಯೇ ಕಂಡರೂ ಅವುಗಳ ಮೂಲ ಬಹಳ ಭಿನ್ನವಾಗಿವೆ. ಈ ಬಗೆಯ ತಿಳಿವಳಿಕೆಗೆ ಭೌತ ವಿಜ್ಞಾನ ಬೇಕಾಯಿತು. ಅದಕ್ಕೆ ಮುಂಚೆ ಹೀಗೆ ಮೋಡದ ಹಾಗೆ ಕಾಣುವ ಎಲ್ಲ ಕಾಯಗಳನ್ನೂ ನೆಬ್ಯುಲಾ ಎಂದು ಕರೆದರು. ಇದನ್ನು ನೀಹಾರಿಕಾ ಎಂದು ಅನುವಾದಿಸಲಾಯಿತು. ಈಗಲೂ ಕೆಲವು ಹಳೆಯ ಪುಸ್ತಕಗಳಲ್ಲಿ ಈ ಪದಗಳನ್ನೇ ಬಳಸಿರುವುದರಿಂದ ಆಗಾಗ್ಗೆ ಗೊಂದಲ ಉಂಟಾಗುತ್ತದೆ.

ಸೂರ್ಯಾಸ್ತವಾದ ಕೂಡಲೇ ದಕ್ಷಿಣದಲ್ಲಿ ಎರಡು ಪ್ರಖರ ನಕ್ಷತ್ರಗಳು ಕಾಣುತ್ತವೆ. ಇವು ಬಕ (ಗ್ರುಸ್) ಎಂಬ ಪುಂಜಕ್ಕೆ ಸೇರಿದವು. ಕುಂಭ ರಾಶಿಗಿಂತ ಸ್ವಲ್ಪ ದಕ್ಷಿಣಕ್ಕಿದೆ. ಆದ್ದರಿಂದ ಕ್ಷೀಣ ಕುಂಭರಾಶಿಯನ್ನು ಗುರುತಿಸಲು ಈ ಎರಡು ನಕ್ಷತ್ರಗಳನ್ನು ಬಳಸಿಕೊಳ್ಳಬಹುದು. ದಕ್ಷಿಣ ಮೀನ ಪುಂಜದ ನಕ್ಷತ್ರ ಮತ್ತು ವೈತರಣೀ ಪುಂಜದ ನಕ್ಷತ್ರಗಳು ಪ್ರಕಾಶಮಾನವಾಗಿವೆ.

ಸಂಜೆಯ ಆಕಾಶದಲ್ಲಿ ಗ್ರಹಗಳಿಲ್ಲವಾದರೂ ಅವೆಲ್ಲ ಮುಂಜಾವಿನಲ್ಲಿ ಅದ್ಭುತ ಪ್ರದರ್ಶನ ನೀಡಲು ಸಜ್ಜಾಗಿವೆ. ಮಂಗಳ ಸುಮಾರು ೪ಗಂಟೆಗೆ ಉದಯಿಸುತ್ತದೆ; ಆಮೇಲೆ ಗುರು; ಆಮೇಲೆ ಶುಕ್ರ. ದಿನೇ ದಿನೇ ದಿಗಂತದ ಕಡೆಗೆ ಚಲಿಸುವ ಶುಕ್ರ ತಿಂಗಳ ಕೊನೆಗೆ ಕಾಣದಂತಾಗುತ್ತದೆ. ಶನಿ ಮತ್ತು ಬುಧ ಸಂಜೆಯಲ್ಲಿ ದಿಗಂತದ ಅಂಚಿಗೆ ಇರುತ್ತವೆ; ಆದ್ದರಿಂದ ಕಾಣುವುದಿಲ್ಲ. ತಿಂಗಳ ಕೊನೆಗೆ ಎರಡೂ ಮುಂಜಾವಿಗೆ ಬರುತ್ತವೆ. ಚಳಿಯಲ್ಲಿ ಬೇಗೆದ್ದು ನೋಡಬೇಕಷ್ಟೆ. ೧೪ರ ಮುಂಜಾವಿನಲ್ಲಿ ಚಂದ್ರ

**ಡಾ|| ಬಿ. ಎಸ್. ಶೈಲಜಾ**



೧೪ರ ಮುಂಜಾವಿನಲ್ಲಿ ಚಂದ್ರ ಗುರು ಚಿತ್ರಾ ಮತ್ತು ಮಂಗಳ

ಗುರು ಮತ್ತು ಮಂಗಳ ಮೂರೂ ಪುಟ್ಟಗುಂಪು ಕಟ್ಟುತ್ತವೆ. ಪಕ್ಕದಲ್ಲಿಯೇ ಚಿತ್ರಾ ನಕ್ಷತ್ರವೂ ಇದೆ.

೧೩–೧೪ಕ್ಕೆ ಜೆಮಿನಿಡ್ಸ್ ಉಲ್ಕಾವೃಷ್ಟಿಯೂ ಇದೆ.

ಹಗಲಿನ ಅವಧಿ ಅತ್ಯಂತ ಕಡಿಮೆ ಇರುವ ದಿನ ೨೧; ಚಳಿಗಾಲದ ಗರಿಷ್ಠ. ದಕ್ಷಿಣದ ತನ್ನ ಮಿತಿಯನ್ನು ಮುಟ್ಟಿ ಸೂರ್ಯ ಮತ್ತೆ ಉತ್ತರಕ್ಕೆ ಹೊರಳುವ ದಿನ. ಉತ್ತರಾಯಣವೆಂದರೂ ಇದೇ.

**ಖಗೋಳ ದಿನಚರಿ**

೩ ಚಂದ್ರ ರೋಹಿಣಿ ಜೋಡಿ; ಹುಣ್ಣಿಮೆ ೦೮:೩೦ಕ್ಕೆ
೪ ಭೂಮಿ ಚಂದ್ರ ನಡುವೆ ಕನಿಷ್ಠ ದೂರ
೬ ಬುಧ – ಶನಿ ಜೋಡಿ *
೮ ಚಂದ್ರ – ಮಘ ಜೋಡಿ
೯ ಶುಕ್ರ – ಜ್ಯೇಷ್ಠಾ ಜೋಡಿ *
೧೦ ಚಾಂದ್ರ ಮಾಸದ ಕೊನೆಯ ಪಾದ
೧೩ ಬುಧ ಗ್ರಹದ ಯುತಿ
೧೪ ಚಂದ್ರ – ಗುರು ಜೋಡಿ; ಜೆಮಿನಿಡ್ಸ್ ಉಲ್ಕಾವೃಷ್ಟಿ *
೧೫ ಬುಧ – ಶುಕ್ರ ಜೋಡಿ *
೧೭ ಬುಧ, ಶುಕ್ರ, ಚಂದ್ರ – ಪುಟ್ಟ ಗುಂಪು *
೧೮ ಅಮಾವಾಸ್ಯೆ ೧೧;೩೦ಕ್ಕೆ
೧೯ ಭೂಮಿ ಚಂದ್ರ ನಡುವೆ ಗರಿಷ್ಠ ಅಂತರ
೨೧ ಉತ್ತರಾಯಣ; ಶನಿಗ್ರಹದ ಯುತಿ
೨೫ ಶುಕ್ರ – ಶನಿ ಜೋಡಿ *
೨೬ ಚಾಂದ್ರ ಮಾಸದ ಮೊದಲ ಪಾದ
೩೧ ಚಂದ್ರ ರೋಹಿಣಿ ಜೋಡಿ *

(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಚಿಟ್ಟಾಣಿ; ಕಣ್ಮರೆಯಾದ ಯಕ್ಷರಂಗದ ಮೇರು ಕಲಾವಿದ

**ಕ**ರಾವಳಿ ಪ್ರದೇಶದ ಜನಪ್ರಿಯ ಜಾನಪದ ಕಲೆಗಳಲ್ಲಿ ಯಕ್ಷಗಾನ ಅತ್ಯಂತ ಜನಪ್ರಿಯತೆ ಗಳಿಸಿದೆ. ಯಕ್ಷಗಾನದ ಬೇರು ಕರಾವಳಿ ಪ್ರದೇಶದಲ್ಲಿದ್ದರೂ, ಇಂದು ಯಕ್ಷಗಾನ ಸೀಮೋಲ್ಲಂಘನ ಮಾಡಿ ರಾಜ್ಯಾದ್ಯಂತ ಕಲಾರಸಿಕರನ್ನು ಆಕರ್ಷಿಸುತ್ತಿದೆ. ವಿದೇಶಗಳಲ್ಲೂ ಯಕ್ಷಗಾನ ಪ್ರದರ್ಶನಗಳು ನಡೆದಿವೆ. ಸಾಮಾನ್ಯವಾಗಿ, ಪೌರಾಣಿಕ ಪ್ರಸಂಗಗಳೇ ಹೆಚ್ಚಾಗಿರುವ ಯಕ್ಷಗಾನದಲ್ಲಿ, ಎರಡು ಪ್ರಮುಖ ಪ್ರಭೇದಗಳಿವೆ. ಅವೆಂದರೆ, 'ತೆಂಕುತಿಟ್ಟು' ಮತ್ತು 'ಬಡಗುತಿಟ್ಟು' ಶೈಲಿಯ ಯಕ್ಷಗಾನ.

ಇತ್ತೀಚೆಗೆ ನಿಧನರಾದ ಶ್ರೀಯುತ ಚಿಟ್ಟಾಣಿ ರಾಮಚಂದ್ರ ಹೆಗ್ಗಡೆಯವರು, ದಿನಾಂಕ ೧೪.೯.೧೯೩೨ರಂದು, ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನ ಚಿಟ್ಟಾಣಿ ಎಂಬ ಸಣ್ಣ ಹಳ್ಳಿಯಲ್ಲಿ ಜನಿಸಿದರು. ತಮ್ಮ ಬಾಲ್ಯದಲ್ಲಿಯೇ, ಯಕ್ಷಗಾನದತ್ತ ಆಕರ್ಷಿತರಾದ ಚಿಟ್ಟಾಣಿಯವರು ಕೊಂಡದಕುಳಿ ಲಕ್ಷ್ಮಣ ಹೆಗ್ಗಡೆಯವರಿಂದ ಪ್ರಾಥಮಿಕ ತರಬೇತಿ ಪಡೆದು ತಮ್ಮ ೧೫ನೇ ವಯಸ್ಸಿನಲ್ಲಿ ಯಕ್ಷಗಾನ ವೇದಿಕೆಗೆ ಪಾದಾರ್ಪಣೆ ಮಾಡಿದರು. ಪ್ರಾರಂಭದಲ್ಲಿ ಗುಂಡ್ಮಿ ಬಾಳು ಮೇಳದಲ್ಲಿ ಪಾತ್ರ ನಿರ್ವಹಿಸಿದ ಶ್ರೀಯುತರು, ಅಮೃತೇಶ್ವರಿ ಮೇಳ ಮತ್ತು ಸಾಲಿಗ್ರಾಮ ಮೇಳದಲ್ಲೂ ಅನೇಕ ಪಾತ್ರಗಳನ್ನು ನಿರ್ವಹಿಸಿದ್ದರು. ಅವರು ಅದ್ಭುತ ಕಲಾಪ್ರೌಢಿಮೆಯನ್ನು ಅನೇಕ ಪಾತ್ರಗಳ ನಿರ್ವಹಣೆಯಲ್ಲಿ ಪ್ರದರ್ಶಿಸಿದರು. ಅವರ ಕೀಚಕ, 'ಚಂದ್ರಹಾಸ ಚರಿತೆ'ಯ ದುಷ್ಟ ಬುದ್ಧಿ, ಕೌರವ, ದ್ರುಪದ, ವಾಲಿ, ಭಸ್ಮಾಸುರ, ಕಂಸ ಮತ್ತು 'ಕಾಳಿದಾಸ ಚರಿತೆ'ಯ ಕಳಾಧರ ಪಾತ್ರಗಳು ಅತ್ಯಂತ ಜನಮನ್ನಣೆ ಗಳಿಸಿದವು. ಅವರ ಕಳಾಧರನ ಪಾತ್ರ ಯಕ್ಷ ಪ್ರೇಮಿಗಳನ್ನು ಮೋಡಿ ಮಾಡಿತು. ಅವರ ಅಭಿಮಾನಿಗಳು ಅವರನ್ನು ಪ್ರೀತಿಯಿಂದ 'ಕಳಾಧರ ಹೆಗ್ಗಡೆ' ಎಂದು ಕರೆದರು.

ಕುಣಿತ ಯಕ್ಷಗಾನದ ಪ್ರಮುಖ ಅಂಗ. ಚಿಟ್ಟಾಣಿಯವರು ಲಯಬದ್ಧ ಕುಣಿತವನ್ನು ತಮ್ಮ ವಶಕ್ಕೆ ಪಡೆದಿದ್ದರು. ಕುಣಿತದೊಂದಿಗೆ, ಕಣ್ಣುಗಳ ಚಲನೆ ಅವರ ಅಭಿನಯದ ಅತ್ಯಂತ ಆಕರ್ಷಣೀಯ ಅಂಶವಾಗಿತ್ತು. ಅನೇಕ ಯಕ್ಷಗಾನ ತಜ್ಞರ ಪ್ರಕಾರ, ಇಂದಿಗೂ ಯಕ್ಷಗಾನ ಕುಣಿತದಲ್ಲಿ ಅವರನ್ನು ಮೀರಿಸುವ ಕಲಾವಿದ ಇಲ್ಲ. ನಾನು, ಅವರ 'ಕೌರವ' ಮತ್ತು 'ಕಳಾಧರ' ಪಾತ್ರಾಭಿನಯವನ್ನು ಕಂಡು ಬೆರಗಾಗಿದ್ದೇನೆ. ಕಾರಣ, ಆ ಪಾತ್ರಗಳನ್ನು ನಿರ್ವಹಿಸಿದಾಗ, ಅವರಿಗೆ ಬಹುಶಃ ೭೫ ವರ್ಷ ವಯಸ್ಸಾಗಿದ್ದಿರ ಬಹುದು. ರಂಗದ ಮೇಲೆ ಸ್ವಲ್ಪವೂ ದಣಿವು, ಆಯಾಸವನ್ನು ತೋರ್ಪಡಿಸದೆ, ಅದ್ಭುತವಾಗಿ ಅಭಿನಯಿಸಿದಾಗ, ಅವರ ಸಾಮರ್ಥ್ಯ ನೆರೆದ ಪ್ರೇಕ್ಷಕರಲ್ಲಿ ಅಚ್ಚರಿ ಮೂಡಿಸಿತು. ಅವರು ತಮ್ಮ ೮೩ನೇ ವಯಸ್ಸಿನಲ್ಲಿ, ವೇದಿಕೆಯನ್ನೇರಿ, ಯಕ್ಷಗಾನದ ಪಾತ್ರ ನಿರ್ವಹಿಸಿದರೆಂದರೆ, ನಂಬಲಾಗ ದಿದ್ದರೂ, ಅದು ಸತ್ಯ.

ಯಕ್ಷಗಾನ ಕ್ಷೇತ್ರಕ್ಕೆ ಅವರ ಕೊಡುಗೆಯನ್ನು ಗಮನಿಸಿ, ಕೇಂದ್ರ ಸರ್ಕಾರ ಅವರಿಗೆ 'ಪದ್ಮಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಅನೇಕ ಸಂಘ, ಸಂಸ್ಥೆಗಳು ಅವರನ್ನು ಸನ್ಮಾನಿಸಿವೆ. ಅವರು ನಿಧನರಾದಾಗ, ಅವರಿಗೆ ೮೫ ವರ್ಷ ವಯಸ್ಸಾಗಿತ್ತು. ಅವರ ನೆನಪು ಯಕ್ಷಗಾನ ಕಲಾ ರಸಿಕರಲ್ಲಿ ಅನೇಕ ವರ್ಷಗಳು ಉಳಿಯುವುದರಲ್ಲಿ ಸಂಶಯವಿಲ್ಲ. ಯಕ್ಷಗಾನ ಕಲಾವಿದರಲ್ಲಿ 'ತಾರಾ' ಪಟ್ಟಕ್ಕೆ ಏರಿದ ಕೆಲವು ಕಲಾವಿದರಲ್ಲಿ ಚಿಟ್ಟಾಣಿಯವರೂ ಒಬ್ಬರು. ಸುಮಾರು ಆರು ದಶಕಗಳ ಕಾಲ ಅನೇಕ ಪ್ರಮುಖ ಪಾತ್ರಗಳಲ್ಲಿ, ಭವ್ಯ, ಅವಿಸ್ಮರಣೀಯ ಯಕ್ಷಗಾನ ಪ್ರದರ್ಶನ ನೀಡಿದ ಚಿಟ್ಟಾಣಿಯವರಿಗೆ ನನ್ನ ನಮನಗಳು.



**ಶಂಕರನಾರಾಯಣ**
ನಂ. ೫೪/೧೧೪, ೧ನೇ ಅಡ್ಡರಸ್ತೆ,
ಕೃಷ್ಣಾನಗರ, ಬೆಂಗಳೂರು – ೫೬೦ ೦೬೧

# ಯುವ ಜನತೆಯಿಂದ ಭಾರತ ನಿರೀಕ್ಷಿಸಿರುವ ಅವಕಾಶ ಮತ್ತು ಸವಾಲುಗಳು

ಡಾ|| ಸುರೇಶ ಕೆ. ಪಿ.

ಜನಗಣತಿಯ ಪ್ರಕಾರ ೨೦೧೧ರಲ್ಲಿ ಭಾರತದ ಒಟ್ಟು ಜನಸಂಖ್ಯೆ ೧೨೧ ಕೋಟಿ, ಕಳೆದ ಹತ್ತು ವರ್ಷಗಳಲ್ಲಿ (೨೦೦೧-೨೦೧೧) ಹೆಚ್ಚಳವಾಗಿರುವ ಒಟ್ಟು ಜನಸಂಖ್ಯೆ ಸುಮಾರು ೧೦ ಕೋಟಿ, ಭಾರತದ ಜನಸಂಖ್ಯೆ ಇತ್ತೀಚಿನ ದಶಕಗಳಲ್ಲಿ ಹೆಚ್ಚಳವಾಗುತ್ತಿದ್ದರೂ ಬೆಳವಣಿಗೆಯ ಪ್ರಮಾಣದಲ್ಲಿ ಹತೋಟಿ ಹೊಂದಿದ್ದು, ೧೯೯೧-೨೦೦೧ರ ದಶಕದಲ್ಲಿ ಶೇಕಡ ೨೧ರಷ್ಟಿದ್ದ ಜನಸಂಖ್ಯೆ ಬೆಳವಣಿಗೆಯ ದರ ಇತ್ತೀಚಿನ ದಶಕಗಳಲ್ಲಿ ೨೦೦೧-೨೦೧೧ರ ಅವಧಿಗೆ ಇದು ಶೇಕಡ ೧೭ಕ್ಕೆ ಇಳಿದಿದೆ. ಭಾರತ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಕೈಗೊಂಡ ಜನಸಂಖ್ಯಾ ನೀತಿ, ಸಾಮಾಜಿಕ ಮತ್ತು ಆರ್ಥಿಕ ಪ್ರಗತಿ, ಆರೋಗ್ಯ ಸೇವೆಗಳು ಜನಸಂಖ್ಯಾ ಬೆಳವಣಿಗೆಯ ಮೇಲೆ ಪ್ರತ್ಯಕ್ಷವಾಗಿ ಪ್ರಭಾವ ಬೀರಿದ್ದು ಭಾರತದಲ್ಲಿ ಪ್ರತಿ ವಿವಾಹಿತ ಮಹಿಳೆ ತನ್ನ ಪ್ರಜನನ ಅವಧಿಯಲ್ಲಿ ಪಡೆಯುವ ಮಕ್ಕಳ ಸಂಖ್ಯೆ ೧೯೯೧ರಲ್ಲಿ ಸರಾಸರಿ ೪ರಿಂದ ೫ರಷ್ಟಿದ್ದು ಈ ಪ್ರಮಾಣ ಇತ್ತೀಚಿಗೆ (೨೦೧೧) ಬಹುತೇಕ ೨ಕ್ಕೆ ಇಳಿದಿರುವುದು ಜನಸಂಖ್ಯೆ ಬೆಳವಣಿಗೆಯ ಪ್ರಮಾಣದಲ್ಲಿ ಭಾರಿ ಕುಸಿತ ಕಾಣಲು ಕಾರಣವಾಗಿದೆ.

ಈ ಗುರುತರವಾದ ಅಂಶ ವಯೋಮಾನ ಜನಸಂಖ್ಯೆ ಹಂಚಿಕೆಯ ಮೇಲೆ ಪ್ರಭಾವ ಬೀರಿ ಇತ್ತೀಚಿನ ದಶಕಗಳಲ್ಲಿ ಒಟ್ಟು ಜನಸಂಖ್ಯೆಯಲ್ಲಿ, ಮಕ್ಕಳ ಸಂಖ್ಯೆಯಲ್ಲಿ, (ವಯೋಮಾನ ೦-೬) ಕುಸಿತ ಕಾಣುತ್ತಿದ್ದು, ಇನ್ನೊಂದೆಡೆ ಯುವಜನತೆ ಮತ್ತು ಕೆಲಸಗಾರರ ಹಾಗೂ ವಯಸ್ಕರ ಜನಸಂಖ್ಯೆಯಲ್ಲಿ ಭಾರಿ ಹೆಚ್ಚಳ ಕಂಡಿದೆ. ಇದನ್ನು ಡೆಮೊಗ್ರಫಿಕ್ ಡಿವಿಡೆಂಟ್, ಏಕೊನೊಮಿಕ್ ಡೆವಲಪ್‌ಮೆಂಟ್ ಎಂದು ವಿಶ್ಲೇಷಿಸಲಾಗುತ್ತಿದೆ. ಭಾರತದ ಮಟ್ಟಿಗೆ ಇದೊಂದು ವರದಾನವಾಗಿದ್ದು, ವಿಶ್ವದ ರಾಷ್ಟ್ರಗಳ ಪೈಕಿ ಅತಿ ಹೆಚ್ಚು ಜನಸಂಖ್ಯಾ ಗಾತ್ರವನ್ನು ಹೊಂದಿರುವ ನೆರೆರಾಷ್ಟ್ರ ಚೀನಾದ ನಂತರ ಭಾರತ ೨ನೇ ಸ್ಥಾನದಲ್ಲಿದೆ. ಆದರೆ ಒಂದು ಅಂದಾಜಿನ ಪ್ರಕಾರ ೨೦೨೫ರ ವೇಳೆಗೆ ಭಾರತದ ಜನಸಂಖ್ಯೆ ಚೀನಾ ದೇಶದ ಜನಸಂಖ್ಯೆಗಿಂತಲೂ ಹೆಚ್ಚಳವಾಗಿ, ಚೀನಾ ರಾಷ್ಟ್ರವನ್ನು ಭಾರತ ಹಿಂದಿಕ್ಕುವುದರಲ್ಲಿ ಅಚ್ಚರಿಯೇನಿಲ್ಲ!

ಈ ಸಂದರ್ಭದಲ್ಲಿ ಭಾರತ ಜನಸಂಖ್ಯೆಯಲ್ಲಿ ಹೆಚ್ಚಳ ಕಂಡರೂ, ವಯೋಮಾನ ಜನಸಂಖ್ಯೆಯ ರಚನೆ ಆ ರಾಷ್ಟ್ರದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ದೃಷ್ಟಿಯಲ್ಲಿ ಮುಖ್ಯವಾದದ್ದು ಯಾವುದೇ ಪ್ರದೇಶದಲ್ಲಿ ಮಕ್ಕಳ ಹಾಗೂ ವಯಸ್ಕರ ಪ್ರಮಾಣ ಹೆಚ್ಚಳವಾಗಿದ್ದರೆ ಈ ಅಂಶ ಅಲ್ಲಿನ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ಮೇಲೆ ಪರಿಣಾಮ ಬೀರುತ್ತದೆ. ಏಕೆಂದರೆ ಅಲ್ಲಿನ ಸರ್ಕಾರಗಳು, ಮಕ್ಕಳ ವಿದ್ಯಾಭ್ಯಾಸಕ್ಕೆ ಹಾಗೂ ಮಹಿಳಾ ಮತ್ತು ಮಕ್ಕಳ ಆರೋಗ್ಯ ಕಲ್ಯಾಣಕ್ಕಾಗಿ ಹೆಚ್ಚು ಹಣವನ್ನು ವೆಚ್ಚ ಮಾಡಬೇಕಾಗುತ್ತದೆ. ಇನ್ನೊಂದೆಡೆ ಒಟ್ಟು ಜನಸಂಖ್ಯೆಯಲ್ಲಿ ಯುವಕರ / ಕೆಲಸಗಾರರ ಸಂಖ್ಯೆ ಹೆಚ್ಚಳವಿದ್ದರೆ, ಈ ಅಂಶ ಆರ್ಥಿಕ ಮತ್ತು ಸಾಮಾಜಿಕ ಅಂಶಗಳ ಮೇಲೆ ಸಕಾರಾತ್ಮಕ ಹಾಗೂ ಗುಣಾತ್ಮಕ ಪರಿಣಾಮವನ್ನು ಬೀರಿ ಆರ್ಥಿಕ ಅಭಿವೃದ್ಧಿಗೆ ಸಹಕಾರಿಯಾಗುತ್ತದೆ. ಈಗ ಭಾರತದ ಸಂಖ್ಯಾ ಸ್ಥಿತ್ಯಂತರತೆಯಿಂದ ಒಟ್ಟು ಜನಸಂಖ್ಯೆಯಲ್ಲಿ ಯುವಕರ ಹಾಗೂ ಕೆಲಸಗಾರರ ಸಂಖ್ಯೆ ಹೆಚ್ಚಳವಾಗುತ್ತಿದೆ. ಈ ಅಂಶವನ್ನು ಸರ್ಕಾರ ಸಕಾರಾತ್ಮಕವಾಗಿ ಪರಿಗಣಿಸಿ ಇದರ ಉಪಯೋಗವನ್ನು ಸದ್ಬಳಕೆ ಮಾಡಿಕೊಳ್ಳುವ ಅವಶ್ಯಕತೆ ಭಾರತಕ್ಕಿದೆ. ಇಂತಹುದೆ ಅನುಭವವನ್ನು ಪ್ರಗತಿಶೀಲ ರಾಜ್ಯ ಕರ್ನಾಟಕದಲ್ಲಿ ಇತ್ತೀಚಿನ ದಶಕಗಳಲ್ಲಿ ಮನಗಾಣಬಹುದಾಗಿದೆ. ಪ್ರಸ್ತುತ ಲೇಖನ ಭಾರತದ ಹಾಗೂ ನಿರ್ದಿಷ್ಟವಾಗಿ ಕರ್ನಾಟಕದ ಯುವಜನತೆಯ ಬೆಳವಣಿಗೆ ಹಾಗೂ ಪ್ರಮಾಣವನ್ನು ಅಳೆಯುವುದರ ಮೂಲಕ ಕೌಶಲ್ಯ ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿ ಯುವಜನತೆಯಿಂದ ಮತ್ತು ದುಡಿಯುವ ವರ್ಗದ ಜನಸಂಖ್ಯೆಯಿಂದ ಭಾರತಕ್ಕೆ ಸಿಗುವ ಲಾಭವನ್ನು ಹಾಗೂ ಇದರ ಅವಕಾಶಗಳನ್ನು ವಿಶ್ಲೇಷಿಸುವ ಮೂಲಕ ಮುಂದಿನ ಸವಾಲುಗಳನ್ನು ಕೂಡ ಗಮನಕ್ಕೆ ತರಲಾಗಿದೆ. ಭಾರತದ ಒಟ್ಟು ೧೨೧ ಕೋಟಿ ಜನಸಂಖ್ಯೆಯಲ್ಲಿ ಸುಮಾರು ೮೦ ಕೋಟಿ ಜನರು ಕೆಲಸಗಾರರಿದ್ದಾರೆ. ಇದು ನಿಜಕ್ಕೂ ದೇಶದ ಸಮಗ್ರ ಆರ್ಥಿಕ ಅಭಿವೃದ್ಧಿಗೆ ಪೂರಕವಾಗಿದ್ದು, ಈ ಸಂದರ್ಭದಲ್ಲಿ ಈ ವರ್ಗದ ಜನ ಯಾವ ತರಹದ ಕೌಶಲ್ಯತೆಯನ್ನು ಹೊಂದಿದ್ದಾರೆ ಎಂಬುದನ್ನು ತಿಳಿಯುವುದು ಇಲ್ಲಿ ಬಹು ಮುಖ್ಯವಾದ ಅಂಶ. ಭಾರತದ ಒಟ್ಟು ಕೆಲಸಗಾರರ ಪೈಕಿ ಶೇಕಡ ೯೨ರಷ್ಟು ಕೆಲಸಗಾರರು ಅಸಂಘಟಿತ ವಲಯದಲ್ಲಿ ಉದ್ಯೋಗಿಗಳಾಗಿದ್ದು, ಇವರಲ್ಲಿ ಕೌಶಲ್ಯ ಮತ್ತು ಪರಿಣತಿಯನ್ನು ಹೊಂದಿರುವ ಕೆಲಸಗಾರರು ಸುಮಾರು ಶೇಕಡ ೨೦ರಷ್ಟು ಎಂಬುದು ಅಂದಾಜಿಸಬಹುದು.

ಈ ಸಂಬಂಧ ಭಾರತ ೨೦೦೮ರಲ್ಲಿ ಅಂದಿನ ಪ್ರಧಾನ ಮಂತ್ರಿಯವರಿಂದ ರಾಷ್ಟ್ರೀಯ ಕೌಶಲ್ಯ ಅಭಿವೃದ್ಧಿ ಸಹಕಾರ ಮಂಡಳಿಯನ್ನು (ಎ ನ್ಯಾಷನಲ್ ಸ್ಕಿಲ್ ಡೆವಲಪ್‌ಮೆಂಟ್ ಕೋ-ಆರ್ಡಿನೇಷನ್ ಬೋರ್ಡ್ - ಎನ್.ಎಸ್.ಡಿ.ಸಿ.ಬಿ.)) ಸ್ಥಾಪಿಸುವ ಮೂಲಕ ೨೦೨೨ರ ವೇಳೆಗೆ ಸರಿಸುಮಾರು ೭೦೦ ದಶ ಲಕ್ಷ ಜನರು ಕೌಶಲ್ಯ ಪರಿಣತಿಯನ್ನು ಸಾಧಿಸುವ ಗುರಿ ಹೊಂದಲಾಗಿದೆ. ದೇಶದಲ್ಲಿ ಸಂಬಂಧಪಟ್ಟ ರಾಜ್ಯಗಳು ಈ ಬಗ್ಗೆ ಕೈ ಜೋಡಿಸಿ ಇದರ ಗುರಿ ಮುಟ್ಟಲು ಪ್ರಯತ್ನವನ್ನು ನಡೆಸಬೇಕು.

**ಯುವಜನ ಸಂಖ್ಯೆಯಲ್ಲಿ ಬದಲಾವಣೆ : ಒಂದು ನೋಟ**

ಕೋಷ್ಟಕ ೧ರಲ್ಲಿ ನೀಡಲಾಗಿರುವ ವಯೋಮಾನ ಜನಸಂಖ್ಯೆ ವಿವರಗಳನ್ನು

**ಪಟ್ಟಿ ೧ : ವಯೋವಾರು ಜನಸಂಖ್ಯೆ (ಭಾರತ ೧೯೯೧-೨೦೦೧ ಮತ್ತು ೨೦೧೧)**

| | ಭಾರತ ೧೯೯೧ | | | ಭಾರತ ೨೦೦೧ | | | ಭಾರತ ೨೦೧೧ | | |
|---|---|---|---|---|---|---|---|---|---|
| | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ವಯೋ ಗುಂಪು | ೮೩೮೫೬೭೯೩೬ | ೪೩೫೨೦೮೧೫೮ | ೪೦೩೩೫೯೭೭೮ | ೧೦೨೮೬೧೦೩೨೮ | ೫೩೨೧೫೬೭೭೨ | ೪೯೬೪೫೩೫೫೬ | ೧೧೯೨೫೦೭೦೦೦ | ೬೧೭೩೧೭೦೦೦ | ೫೭೫೧೯೦೦೦೦ |
| ೦-೧೪ | ೩೧೨೩೬೪೬೬೨ | ೧೬೧೭೨೭೪೪೬ | ೧೫೦೬೩೭೨೧೬ | ೩೬೩೬೧೦೮೧೨ | ೧೮೯೪೮೭೩೨೨ | ೧೭೪೧೨೩೪೯೦ | ೩೪೬೯೪೨೦೦೦ | ೧೮೨೧೫೫೦೦೦ | ೧೬೪೭೮೬೦೦೦ |
| ೧೫-೨೯ | ೨೨೨೭೪೬೮೯೧ | ೧೧೪೨೯೧೮೮೪ | ೧೦೮೪೫೫೦೦೭ | ೨೭೩೪೦೨೪೧೫ | ೧೪೧೮೧೮೬೮೭ | ೧೩೧೫೮೩೭೨೮ | ೩೪೧೭೨೦೦೦೦ | ೧೭೯೮೩೯೦೦೦ | ೧೬೧೮೮೨೦೦೦ |
| ೩೦-೪೪ | ೧೫೩೩೫೯೬೯೩ | ೮೦೩೧೮೩೧೦ | ೭೩೦೪೧೩೮೩ | ೨೦೦೫೮೬೪೨೬ | ೧೦೩೨೭೯೩೫೮ | ೯೭೩೦೭೦೬೮ | ೨೪೩೧೨೯೦೦೦ | ೧೨೩೪೧೮೦೦೦ | ೧೧೯೧೭೧೦೦೦ |
| ೪೫-೫೯ | ೮೮೭೧೯೮೯೨ | ೪೬೮೦೧೧೯೮ | ೪೧೯೧೮೬೯೪ | ೧೧೧೬೪೯೮೮೨ | ೫೮೩೦೨೫೧೬ | ೫೩೩೪೭೩೬೬ | ೧೬೨೨೪೪೦೦೦ | ೮೩೭೬೫೦೦ | ೭೮೪೭೮೦೦೦ |
| ೬೦-ಮೇಲ್ಪಟ್ಟು | ೫೬೬೮೧೬೪೦ | ೨೯೩೬೩೭೨೫ | ೨೭೩೧೭೯೧೫ | ೭೬೬೨೨೩೨೧ | ೩೭೭೬೮೩೨೭ | ೩೮೮೫೩೯೯೪ | ೯೮೪೭೨೦೦೦ | ೪೮೧೪೦೦೦೦ | ೫೦೩೩೪೦೦೦ |

**ಮೂಲ : ಜನಗಣತಿ ಹಾಗೂ ಜನಸಂಖ್ಯಾ ಕುರಿತ ರಾಷ್ಟ್ರೀಯ ಆಯೋಗ ವರದಿಗಳು**

| ಪಟ್ಟಿ ೨ : ವಯೋವಾರು ಶೇಕಡ ಜನಸಂಖ್ಯೆ (ಭಾರತ ೧೯೯೧–೨೦೦೧ ಮತ್ತು ೨೦೧೧) | | | | | | | | | |
|---|---|---|---|---|---|---|---|---|---|
| | ಭಾರತ ೧೯೯೧ | | | ಭಾರತ ೨೦೦೧ | | | ಭಾರತ ೨೦೧೧ | | |
| | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ವಯೋ ಗುಂಪು | – | – | – | – | – | – | – | – | – |
| ೦–೧೪ | ೩೭.೨೪ | ೩೭.೧೬ | ೩೭.೩೪ | ೩೫.೩೪ | ೩೫.೬ | ೩೫.೦೭ | ೨೯.೦೯ | ೨೯.೫ | ೨೮.೬೪ |
| ೧೫–೨೯ | ೨೬.೫೬ | ೨೬.೨೬ | ೨೬.೮೮ | ೬.೫೭ | ೨೬.೬೪ | ೨೬.೫ | ೨೮.೬೫ | ೨೯.೧೩ | ೨೮.೧೪ |
| ೩೦–೪೪ | ೧೮.೨೮ | ೧೮.೪೫ | ೧೮.೧ | ೧೯.೫ | ೧೯.೪ | ೧೯.೬ | ೨೦.೩೮ | ೧೯.೯೯ | ೨೦.೮೧ |
| ೪೫–೫೯ | ೧೦.೫೭ | ೧೦.೭೫ | ೧೦.೩೯ | ೧೦.೮೫ | ೧೦.೯೫ | ೧೦.೭೪ | ೧೩.೬ | ೧೩.೫೬ | ೧೩.೬೪ |
| ೬೦–ಮೇಲ್ಪಟ್ಟು | ೬.೭೫ | ೬.೭೪ | ೬.೭೭ | ೭.೪೪ | ೭.೦೯ | ೭.೮೨ | ೮.೨೫ | ೭.೭೯ | ೮.೭೫ |
| ಮೂಲ : ಜನಗಣತಿ ಹಾಗೂ ಜನಸಂಖ್ಯಾ ಕುರಿತ ರಾಷ್ಟ್ರೀಯ ಆಯೋಗ ವರದಿಗಳು | | | | | | | | | |

ಪರಿಶೀಲಿಸಿ ನೋಡಿದರೆ, ಭಾರತ ೧೯೯೧ರಲ್ಲಿ ಒಟ್ಟು ೮೩.೮೫ ಕೋಟಿ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ಯುವಜನತೆಯ ಪಾಲು ಶೇಕಡ ೨೬.೫೬ ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಯುವ ಜನಸಂಖ್ಯೆಯ ಗಾತ್ರ ಸುಮಾರು ೨೨.೨೭ ಕೋಟಿ. ೨೦೧೧ರ ವೇಳೆಗೆ ಈ ಜನಸಂಖ್ಯೆಯಲ್ಲಿ ಯುವಜನತೆಯ ಪಾಲು ಶೇಕಡ ೨೮ರಷ್ಟು. ಇನ್ನೊಂದೆಡೆ ಕೆಲಸಗಾರರ ದೃಷ್ಟಿಯಲ್ಲಿ ಭಾರತದ ಯುವಜನತೆ ಮತ್ತು ಕೆಲಸಗಾರರ ಜನಸಂಖ್ಯೆಯಲ್ಲಿ ಒಟ್ಟಾಗಿ ಕ್ರೋಢೀಕರಿಸಿ ನೋಡಿದರೆ ೧೯೯೧ರಲ್ಲಿ ಶೇಕಡ ೪೫ರಷ್ಟಿದ್ದ ಈ ಪ್ರಮಾಣ ೨೦೧೧ರಲ್ಲಿ ಶೇಕಡ ೫೦ರಷ್ಟಿದೆ. ಕೆಲಸಗಾರರ ಪ್ರಮಾಣವನ್ನು ನಿರ್ದಿಷ್ಟವಾಗಿ ತಿಳಿಯುವುದಾದರೆ, ವಯೋಮಾನ ಜನಸಂಖ್ಯಾ ೧೫–೨೯, ೩೦–೪೪ ಮತ್ತು ೪೫–೫೯ ವರ್ಷದ ವಯೋಮಾನ ಜನಸಂಖ್ಯೆಯನ್ನು ಒಟ್ಟಾಗಿ ಕ್ರೋಢೀಕರಿಸಿ ನೋಡಿದರೆ ೧೯೯೧ರಲ್ಲಿ ಶೇಕಡ ೫೬ರಷ್ಟಿದ್ದ ಈ ಪ್ರಮಾಣ ೨೦೧೧ರ ಅವಧಿಯಲ್ಲಿ ಶೇಕಡ ೬೩.೬೪ರಷ್ಟು. ಈ ಕಾರಣದಿಂದಾಗಿಯೇ ಇತ್ತೀಚೆಗೆ ಭಾರತವನ್ನು ಯುವಭಾರತ ಎಂದು ಬಿಂಬಿಸಲಾಗುತ್ತಿದೆ.

ಈ ನಿರ್ದಿಷ್ಟ ವಿಷಯದ ಅಂಕಿ ಅಂಶಗಳನ್ನು ಕರ್ನಾಟಕದ ಬಗ್ಗೆ ಕೋಷ್ಟಕ ೨ರಲ್ಲಿ ನೀಡಲಾಗಿದೆ. ದೇಶದ ದಕ್ಷಿಣ ಭಾರತದ ರಾಜ್ಯಗಳ ಪೈಕಿ ಪ್ರಗತಿಪರ ರಾಜ್ಯವೆಂದು ಪರಿಗಣಿಸಿರುವ ಕರ್ನಾಟಕ ಸಾಮಾಜಿಕ ಮತ್ತು ಆರ್ಥಿಕ ಅಂಶಗಳ ಪ್ರಗತಿಯಲ್ಲಿ ದೇಶದ ಸರಾಸರಿಗಿಂತ ಮುಂದಿರುವುದು ರುಜುವಾತಾಗಿದೆ. ಹಾಗೆಯೇ ಯುವ ಜನಸಂಖ್ಯೆಯ ಪಾಲಿನಲ್ಲೂ ಇದನ್ನು ಗಮನಿಸಬಹುದು. ಉದಾಹರಣೆಗೆ ೧೯೯೧ನೇ ಸಾಲಿನ ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಯುವಜನರ ಪಾಲು ಶೇಕಡ ೨೭.೩೩ರಷ್ಟು. ಈ ಪ್ರಮಾಣ ೨೦೧೧ರಲ್ಲಿ ಶೇಕಡ ೨೭.೭೮ರಷ್ಟು. ನಿರ್ದಿಷ್ಟವಾಗಿ ವಯೋಮಾನ ಜನಸಂಖ್ಯೆ ೧೫–೨೯, ೩೦–೪೪ ಮತ್ತು ೪೫–೫೯, ಇವುಗಳನ್ನು ಕ್ರೋಢೀಕರಿಸಿ ನೋಡಿದರೆ ಈ ಜನಸಂಖ್ಯೆಯ ಪ್ರಮಾಣ ಶೇಕಡ ೬೫ರಷ್ಟು. ಅಂದರೆ ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿರುವ ಕೆಲಸಗಾರರಿಗಿಂತ (ಶೇಕಡ ೬೩.೬೪) ಹೆಚ್ಚಳವನ್ನು ಹೊಂದಿದೆ (ಶೇಕಡ ೬೫) ದಕ್ಷಿಣ ಭಾರತದಲ್ಲಿ ಕೇರಳ, ತಮಿಳುನಾಡು ರಾಜ್ಯಗಳ ನಂತರ ಪ್ರಗತಿ ಕಾಣುತ್ತಿರುವ ರಾಜ್ಯಗಳಲ್ಲಿ ಕರ್ನಾಟಕ ಮುಂಚೂಣಿಯಲ್ಲಿದೆ.

ಚಿತ್ರ ೧ರಲ್ಲಿ ಕರ್ನಾಟಕದ ವಿವಿಧ ವಯೋಮಾನ ಜನಸಂಖ್ಯೆಯ ರಚನೆಯನ್ನು ಶೇಕಡ ಪ್ರಮಾಣದಲ್ಲಿ ದಕ್ಷಿಣ ಭಾರತದ ಇತರೆ ರಾಜ್ಯಗಳೊಂದಿಗೆ ಹೋಲಿಕೆ ಮಾಡಲಾಗಿದೆ. ಕಳೆದ ಎರಡು ದಶಕಗಳಲ್ಲಿ ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಹೆಚ್ಚಳವಾಗಿರುವ ಯುವಜನರ ಸಂಖ್ಯೆ ಶೇಕಡಾ ಪ್ರಮಾಣ ೧ರಷ್ಟಿದ್ದರೆ, ಈ ಪ್ರಮಾಣ ನೆರೆಯ ರಾಜ್ಯ ಆಂಧ್ರಪ್ರದೇಶದಲ್ಲಿ ಶೇಕಡ ೨.೧ರಷ್ಟು. ಇದಕ್ಕೆ ವ್ಯತಿರಿಕ್ತವಾಗಿ ತಮಿಳುನಾಡು ಮತ್ತು ಕೇರಳ ರಾಜ್ಯಗಳು ಯುವಜನತೆಯ ಪಾಲಿನಲ್ಲಿ ನಕಾರಾತ್ಮಕ ಪ್ರಮಾಣವನ್ನು ಹೊಂದಿದ್ದು, ಇದಕ್ಕೆ ಮುಖ್ಯ ಕಾರಣ ಈ ರಾಜ್ಯಗಳು ಕುಟುಂಬ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನದೊಂದಿಗೆ ಜನಸಂಖ್ಯಾ ಬೆಳವಣಿಗೆಯಲ್ಲಿ ಹತೋಟಿ ಹೊಂದಿದ್ದು ಗಮನಾರ್ಹ. ಉದಾಹರಣೆಗೆ ಪ್ರತಿ ವಿವಾಹಿತ ಮಹಿಳೆ ಪಡೆಯುವ ಮಕ್ಕಳ ಸಂಖ್ಯೆ ೨ಕ್ಕೆ ಸೀಮಿತಗೊಂಡಿದ್ದು (ರಿಪ್ಲೇಸ್‌ಮೆಂಟ್ ಫೆರ್ಟಲಿಟಿ) ಕೇರಳ ರಾಜ್ಯ ದೇಶದಲ್ಲೇ ಮೊದಲು (೧೯೮೦) ನಂತರದ ಸ್ಥಾನದಲ್ಲಿ ತಮಿಳುನಾಡು (೨೦೦೦), ಆಂಧ್ರ ಪ್ರದೇಶ (೨೦೦೨) ಕರ್ನಾಟಕ (೨೦೦೬) ಈ ಸಾಲಿನಲ್ಲಿ ಸೇರುತ್ತವೆ.

ಒಟ್ಟಾರೆ ದೇಶದ ಅಭಿವೃದ್ಧಿಯಲ್ಲಿ ಯುವಜನತೆಯ ಪಾತ್ರ ಬಹುಮುಖ್ಯವಾಗಿದ್ದು, ಇದನ್ನು ರಾಷ್ಟ್ರದ ಬೆಳವಣಿಗೆಗೆ ಸದುಪಯೋಗಪಡಿಸಿಕೊಳ್ಳಬೇಕಾಗಿದೆ. ಒಂದು ಅಂದಾಜಿನ ಪ್ರಕಾರ ೨೦೪೫ಕ್ಕೆ ವಿಶ್ವದ ಒಟ್ಟು ಕೆಲಸಗಾರರ ಪೈಕಿ ಶೇಕಡ ೨೫ರಷ್ಟು ಕೆಲಸಗಾರರು ಭಾರತದಲ್ಲಿ ನೆಲೆಯೂರಲಿದ್ದಾರೆ. ಇದು ಭಾರತದ ಮಟ್ಟಿಗೆ ಒಳ್ಳೆಯ ಬೆಳವಣಿಗೆ ಆದರೂ ಇನ್ನೊಂದೆಡೆ ಯುವ ಭಾರತ ನಿರ್ಮಾಣದೊಂದಿಗೆ, ವಯಸ್ಕರ ಭಾರತವೂ

| ಪಟ್ಟಿ ೨ : ವಯೋವಾರು ಜನಸಂಖ್ಯೆ (ಕರ್ನಾಟಕ ೧೯೯೧–೨೦೦೧ ಮತ್ತು ೨೦೧೧) | | | | | | | | | |
|---|---|---|---|---|---|---|---|---|---|
| | ಕರ್ನಾಟಕ ೧೯೯೧ | | | ಕರ್ನಾಟಕ ೨೦೦೧ | | | ಕರ್ನಾಟಕ ೨೦೧೧ | | |
| | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ವಯೋ ಗುಂಪು | ೪೪೯೭೭೨೦೧ | ೨೨೯೫೧೯೧೭ | ೨೨೦೨೫೨೮೪ | ೫೨೮೫೦೫೬೨ | ೨೬೮೯೮೯೧೮ | ೨೫೯೫೧೬೪೪ | ೫೯೪೧೯೦೦೦ | ೩೦೧೪೦೦೦೦ | ೨೯೨೭೮೦೦೦ |
| ೦–೧೪ | ೧೬೧೯೮೯೪೩ | ೮೨೦೯೦೪೭ | ೭೯೮೯೮೯೬ | ೧೬೮೪೫೬೦೧ | ೮೬೨೦೧೮೬ | ೮೨೨೫೪೧೫ | ೧೫೦೮೪೦೦೦ | ೭೭೪೫೦೦೦ | ೭೩೩೮೦೦೦ |
| ೧೫–೨೯ | ೧೨೨೯೩೯೮೯ | ೬೨೦೧೯೧೩ | ೬೦೯೨೦೭೬ | ೧೪೮೪೬೧೧೬ | ೭೫೯೮೫೬೬ | ೭೨೪೭೫೫೦ | ೧೬೮೧೧೦೦೦ | ೮೬೯೪೦೦೦ | ೮೧೧೭೦೦೦ |
| ೩೦–೪೪ | ೮೩೫೨೩೭೬ | ೪೩೨೭೪೫೧ | ೪೦೨೪೯೨೫ | ೧೦೭೯೭೭೪೦ | ೫೪೮೧೨೨೦ | ೫೩೧೬೫೨೦ | ೧೩೧೧೭೦೦೦ | ೬೫೬೮೦೦೦ | ೬೫೪೮೦೦೦ |
| ೪೫–೫೯ | ೪೭೪೪೯೯೨ | ೨೫೧೮೦೫೫ | ೨೨೬೯೩೭ | ೬೨೪೭೨೩೯ | ೩೨೪೬೫೧೯ | ೩೦೦೦೭೨೦ | ೯೯೪೪೦೦೦ | ೪೫೩೪೦೦೦ | ೪೪೦೯೦೦೦ |
| ೬೦–ಮೇಲ್ಪಟ್ಟು | ೩೧೪೨೭೦೮ | ೧೫೬೦೭೧ | ೧೫೮೯೩೭ | ೪೦೬೨೦೨೨ | ೧೯೨೩೭೩೦ | ೨೧೩೮೨೯೨ | ೪೪೬೩೦೦೦ | ೨೫೯೯೦೦೦ | ೨೮೬೬೦೦೦ |
| ಮೂಲ : ಜನಗಣತಿ ಹಾಗೂ ಜನಸಂಖ್ಯಾ ಕುರಿತ ರಾಷ್ಟ್ರೀಯ ಆಯೋಗ ವರದಿಗಳು | | | | | | | | | |

| ಪಟ್ಟಿ ೨ (ಅ): ವಯೋವಾರು ಶೇಕಡ ಜನಸಂಖ್ಯೆ (ಕರ್ನಾಟಕ ೧೯೯೧–೨೦೦೧ ಮತ್ತು ೨೦೧೧) | ಕರ್ನಾಟಕ ೧೯೯೧ | | | ಕರ್ನಾಟಕ ೨೦೦೧ | | | ಕರ್ನಾಟಕ ೨೦೧೧ | | |
|---|---|---|---|---|---|---|---|---|---|
| | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ವಯೋ ಗುಂಪು | – | – | – | – | – | – | – | – | – |
| ೦–೧೪ | ೩೬.೦೧ | ೩೫.೭೬ | ೩೬.೨೭ | ೩೧.೮೭ | ೩೨.೦೪ | ೩೧.೬೯ | ೨೫.೩೮ | ೨೫.೬೯ | ೨೫.೦೬ |
| ೧೫–೨೯ | ೨೭.೩೩ | ೨೭.೦೨ | ೨೭.೬೫ | ೨೮.೦೯ | ೨೮.೨೪ | ೨೭.೯೨ | ೨೮.೨೯ | ೨೮.೮೪ | ೨೭.೭೨ |
| ೩೦–೪೪ | ೧೮.೫೭ | ೧೮.೮೫ | ೧೮.೨೭ | ೨೦.೪೩ | ೨೦.೩೭ | ೨೦.೪೮ | ೨೨.೦೭ | ೨೧.೭೯ | ೨೨.೩೬ |
| ೪೫–೫೯ | ೧೦.೫೪ | ೧೦.೯೭ | ೧೦.೧೧ | ೧೧.೮೨ | ೧೨.೦೬ | ೧೧.೫೬ | ೧೬.೭೩ | ೧೫.೦೪ | ೧೫.೦೫ |
| ೬೦–ಮೇಲ್ಪಟ್ಟು | ೬.೯೮ | ೬.೮ | ೭.೧೮ | ೭.೬೮ | ೭.೧೫ | ೮.೨೩ | ೭.೫೧ | ೮.೬೨ | ೯.೭೮ |
| ಮೂಲ : ಜನಗಣತಿ ಹಾಗೂ ಜನಸಂಖ್ಯಾ ಕುರಿತ ರಾಷ್ಟ್ರೀಯ ಆಯೋಗ ವರದಿಗಳು | | | | | | | | | |

ಆಗಲಿದೆ. ಈ ಹಿನ್ನೆಲೆಯಲ್ಲಿ ಇವೆರಡನ್ನೂ ಸರಿದೂಗಿಸಿ ಯುವಜನರಿಂದ ರಾಷ್ಟ್ರಕ್ಕೆ ಆಗಲಿರುವ ಲಾಭವನ್ನು ಮನಗಂಡು ಭಾರತ ಸರಿಯಾದ ರೀತಿಯಲ್ಲಿ, ಯೋಜನೆಯ ಕಾರ್ಯ ರೂಪಗಳನ್ನು ನಿರೂಪಿಸುವ ಜವಾಬ್ದಾರಿ ಸರಕಾರಗಳ ಆದ್ಯ ಕರ್ತವ್ಯವಾಗಿರುತ್ತದೆ.

**ಯುವಜನತೆಯಿಂದ ಭಾರತ ನಿರೀಕ್ಷಿಸಬಹುದಾದ ಅವಕಾಶಗಳು**

ಇತ್ತೀಚಿನ ದಶಕಗಳಲ್ಲಿ ಭಾರತ ಕಂಡ ಜನಸಂಖ್ಯಾ ಸ್ಥಿತ್ಯಂತರ ಹಾಗೂ ಮಾನವ ಅಭಿವೃದ್ಧಿಯಿಂದ ದೇಶದ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಯ ಚಿತ್ರಣ ಬದಲಾಗುತ್ತಿದ್ದು ವಿಶ್ವದ ಭೂಪಟದಲ್ಲಿ ಮುಂದಿನ ಬಲಿಷ್ಠ ರಾಷ್ಟ್ರ ಎಂದು ಬಿಂಬಿತವಾಗಿದೆ. ಜನಸಂಖ್ಯಾ ಗಾತ್ರ ಮತ್ತು ಬೆಳವಣಿಗೆಯಲ್ಲಿ ಹತೋಟಿ ಕಾಯ್ದುಕೊಂಡು ವಯೋಮಾನ ರಚನೆಯಲ್ಲಿ ಬದಲಾವಣೆ ಕಂಡಿದೆ. ರಾಷ್ಟ್ರದ ಬಹುತೇಕ ಯುವಕರು ವಿದ್ಯಾವಂತರಾಗುತ್ತಿದ್ದು, ಗಂಡು ಮಕ್ಕಳ ಮದುವೆಯ ವಯಸ್ಸು ಸರಾಸರಿ ೨೭ರಿಂದ ೩೦ಕ್ಕೆ ಹೆಚ್ಚಳವಾಗಿದೆ. ಹಾಗೆಯೇ ಹೆಣ್ಣುಮಕ್ಕಳ ಮದುವೆಯ ವಯಸ್ಸು ಸರಾಸರಿ ೨೫ರಿಂದ ೩೦ರವರೆಗೆ. ಈ ನಿರ್ದಿಷ್ಟ ಅಂಶ ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಯ ಮೇಲೆ ಪರಿಣಾಮ ಬೀರುವುದರ ಮೂಲಕ, ಹೆಚ್ಚು ಹೆಚ್ಚು ಕುಟುಂಬಗಳು ಮಧ್ಯಮ ವರ್ಗದವರಾಗುತ್ತಿದ್ದಾರೆ. ಬಹುತೇಕ ಕುಟುಂಬದಲ್ಲಿ ಒಂದೋ ಹೆಂಡತಿ ಅಥವಾ ಗಂಡ ಉದ್ಯೋಗ ಪಡೆಯುವ ಮೂಲಕ ವೈವಾಹಿಕ ಜೀವನವನ್ನು ಹೊಂದಲಾಗುತ್ತಿದೆ. ಹೀಗೆ ಬಹುತೇಕ ಮಹಿಳೆಯರು ವೈವಾಹಿಕ ಜೀವನದ ಮೊದಲ ಹಂತದಲ್ಲಿ ಮಕ್ಕಳನ್ನು ಪಡೆಯುವ ಮೂಲಕ, ಪ್ರಜನನ ಅವಧಿಯನ್ನು ಮುಗಿಸಿ ಗಂಡ – ಹೆಂಡತಿ ಇಬ್ಬರೂ ಕೂಡ ದುಡಿಯಲು ಪ್ರಾರಂಭಿಸುತ್ತಾರೆ. ಇದರಿಂದ ಕುಟುಂಬದ ಆದಾಯ ಹೆಚ್ಚಳವಾಗಿ ಉಳಿತಾಯದ ಮನೋಭಾವನೆಯನ್ನು ಹೊಂದುತ್ತಿದ್ದಾರೆ. ಅವಿಭಕ್ತ ಕುಟುಂಬಗಳ ಸಂಖ್ಯೆ



ನಿಧಾನವಾಗಿ ಇಳಿಮುಖವಾಗುತಿದ್ದು ವಿಭಕ್ತ ಕುಟುಂಬಗಳು ಹೆಚ್ಚಳವಾಗುತ್ತಿವೆ. ಮಹಿಳಾ ಸಾಕ್ಷರತೆ, ವಿದ್ಯಾಭ್ಯಾಸದಲ್ಲಿನ ಏರಿಕೆ ಇತ್ಯಾದಿ ಅಂಶಗಳು ಸಣ್ಣ ಕುಟುಂಬಗಳಲ್ಲೂ ಕಂಡುಬಂದಿದ್ದು ಇಂತಹ ಕುಟುಂಬಗಳು ಕೂಡ ಅಂಚೆ ಕಛೇರಿ, ರಾಷ್ಟ್ರೀಯ ಉಳಿತಾಯ ಖಾತೆ, ನಿಗದಿತ ಠೇವಣಿಯ ಮೂಲಕ ಸಣ್ಣ ಉಳಿತಾಯಗಳಲ್ಲಿ ತೊಡಗಿದ್ದಾರೆ. ಇದು ಒಟ್ಟಾರೆ ರಾಷ್ಟ್ರದ ಅಭಿವೃದ್ಧಿಗೆ ಪೂರಕವಾಗಿದೆ.

ಇಂದಿನ ಯುವಜನಾಂಗ ಭಾರಿ ಪ್ರಮಾಣದಲ್ಲಿ ನಿರುದ್ಯೋಗಿಗಳಾಗಿದ್ದು ಜೀವನೋಪಾಯಕ್ಕೆ ಒಂದಲ್ಲ ಒಂದು ಚಟುವಟಿಕೆಯಲ್ಲಿ ನಿರತರಾಗುವ ಮೂಲಕ ದುಡಿಯುವ ಮನೋಭಾವನೆಯನ್ನು ಹೊಂದಿದ್ದಾರೆ. ಹೆಚ್ಚಳವಾಗುತ್ತಿರುವ ನಗರೀಕರಣ ಮತ್ತು ಕೈಗಾರಿಕೀಕರಣಗಳ ಅಭಿವೃದ್ಧಿಯ ಅಡಿಯಲ್ಲಿ ಹೆಚ್ಚು ಹೆಚ್ಚು ಯುವಕರು ಅಸಂಘಟಿತ ವಲಯದಲ್ಲಿ ಕಾರ್ಮಿಕರಾಗಿದ್ದು, ಅದರಲ್ಲಿ ನಗರ, ಪ್ರದೇಶದ ಯುವಕರು ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಎಲೆಕ್ಟ್ರಾನಿಕ್ಸ್ ಉಪಕರಣಗಳು, ಮೋಟಾರು ವಾಹನಗಳು ಮತ್ತು ಗೃಹೋಪಯೋಗಿ ವಸ್ತುಗಳನ್ನು ಖರೀದಿ ಮಾಡುವ ಮೂಲಕ ದೇಶದ/ರಾಜ್ಯದ ಬೊಕ್ಕಸಕ್ಕೆ ತೆರಿಗೆ ಪಾವತಿಸುವ ಮೂಲಕ ದೇಶದ ಆರ್ಥಿಕ ಪ್ರಗತಿಗೆ ಕಾರಣರಾಗಿದ್ದಾರೆ. ಈ ಮೇಲಿನ ಎಲ್ಲ ಅಂಶಗಳು ದೇಶದ ಅಭಿವೃದ್ಧಿಯಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಿವೆ. ಇದರಿಂದ ಯುವಜನಾಂಗವನ್ನು ಈ ದೃಷ್ಟಿಯಲ್ಲಿ ದೇಶದ ಸಂಪತ್ತಾಗಿಸುವಲ್ಲಿ ಎಲ್ಲ ಪ್ರಯತ್ನಗಳನ್ನು ನಡೆಸಬೇಕಿದೆ.

**ಯುವಜನತೆ ಮತ್ತು ಸವಾಲುಗಳು**

೨೦೨೫ರ ಅವಧಿಗೆ ವಿಶ್ವದಲ್ಲಿ ಸುಮಾರು ೩೦೦ ದಶಲಕ್ಷ ಯುವಕರು ಕಾರ್ಮಿಕ ವಲಯದಲ್ಲಿ ಸ್ಥಾನ ಪಡೆಯಲಿದ್ದು, ಇದರಲ್ಲಿ ಭಾರತದ ಯುವಕರ ಪಾಲು ಶೇಕಡ ೨೫ರಷ್ಟು. ವಿಶ್ವದ ಕಾರ್ಮಿಕ ವಲಯದಲ್ಲಿರುವ ಭಾರತದ ಯುವಕರ ಪಾಲು ೧/೪ ಭಾಗ ಎಂಬುದು ಇಲ್ಲಿ ಗಮನಾರ್ಹ. ಕರ್ನಾಟಕದಲ್ಲಿ ಹೆಚ್ಚಳವಾಗುತ್ತಿರುವ ಯುವಕರ ಸಂಖ್ಯೆ ದೇಶದ ಸರಾಸರಿಗಿಂತಲೂ ಹೆಚ್ಚಿದ್ದು, ಇವರನ್ನು ಸಾಮಾನ್ಯ ವಿದ್ಯಾವಂತರನ್ನಾಗಿ ಮಾಡುವುದು ಭಾರತದ ಮುಖ್ಯ ಆದ್ಯತೆ. ಹೆಚ್ಚಾಗುತ್ತಿರುವ ಯುವ ಜನಾಂಗಕ್ಕೆ ಸರಿಸಮವಾಗಿ ಉದ್ಯೋಗಗಳನ್ನು ಸೃಷ್ಟಿಸುವ ಮೂಲಕ ಇವರ ಸದುಪಯೋಗ ಪಡೆದುಕೊಳ್ಳುವ ಅನಿವಾರ್ಯತೆ ಇದೆ. ಸರಿಯಾದ ರೀತಿಯಲ್ಲಿ ಯುವಜನರಿಗೆ ಯೋಜನೆಗಳನ್ನು ರೂಪಿಸಿ, ಕಾರ್ಯಗತ ಮಾಡದೆ ಇದ್ದ ಪಕ್ಷದಲ್ಲಿ ಭಾರಿ ಸಂಖ್ಯೆಯ ಯುವಕರು ಮುಂದಿನ ದಿನಗಳಲ್ಲಿ ಜೀವನೋಪಾಯಕ್ಕೋಸ್ಕರ ಅಪರಾಧ ಕೃತ್ಯಗಳಲ್ಲಿ ಭಾಗಿಯಾಗುವ ಸಂಭವ ಹೆಚ್ಚು. ಇದು ಸಮಾಜದ ಪರಿಸರಕ್ಕೆ ಧಕ್ಕೆ ಬಂದೊದಗಬಹುದು. ಹೆಚ್ಚು ಹೆಚ್ಚು ಶಿಕ್ಷಣ ಸಂಸ್ಥೆಗಳಲ್ಲಿ ತಾಂತ್ರಿಕತೆ, ನೈಪುಣ್ಯತೆ, ಕೌಶಲ್ಯ ಪೂರಿತ ಹಾಗೂ ವಿಷಯಾಧಾರಿತ ಶಿಕ್ಷಣವನ್ನು ನೀಡುವ ಮೂಲಕ ಯುವಕರ ಪಾಲಿಗೆ ಒಳ್ಳೆಯ ಸಮಾಜವನ್ನು ನಿರ್ಮಾಣ ಮಾಡಬೇಕಾದ ಅನಿವಾರ್ಯತೆ ಇದೆ. ಹೆಚ್ಚಳವಾಗುತ್ತಿರುವ ಯುವಕರ ಜನಸಂಖ್ಯೆಗೆ ಅನುಗುಣವಾಗಿ ಶಿಕ್ಷಣ, ಉದ್ಯೋಗ ಮತ್ತು ಭದ್ರತೆಯನ್ನು ಒದಗಿಸಬೇಕಾಗಿದೆ. ಒಂದು ವೇಳೆ ಉದ್ಯೋಗ ಸೃಷ್ಟಿಯಲ್ಲಿ ಈಗಿನ ಪರಿಸ್ಥಿತಿಯೇ

ಮುಂದುವರೆದರೆ ೨೦೪೦ನೇ ಅವಧಿಗೆ ಹೆಚ್ಚಳವಾಗುವ ಶೇಕಡ ೬೫ರಷ್ಟು ಯುವಕರು / ಕಿರಿಯ ವಯಸ್ಕರಿಂದ ಸಮಾಜದ ಮೇಲೆ ಆಗುವ ದುಷ್ಪರಿಣಾಮವನ್ನು ಊಹಿಸಲು ಅಸಾಧ್ಯ! ಈಗಾಗಲೇ ಅಸಹಾಯಕ ಮಹಿಳೆಯರು, ಮಕ್ಕಳು ಮತ್ತು ವೃದ್ಧರ ಮೇಲೆ ಆಗುತ್ತಿರುವ ದೌರ್ಜನ್ಯಗಳು ಭಾರತದಲ್ಲಿ / ಕರ್ನಾಟಕದಲ್ಲಿ ಹೆಚ್ಚಳವಾಗುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಆದುದರಿಂದ ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಯುವಕರನ್ನು ಹೆಚ್ಚು ಹೆಚ್ಚು ವಿದ್ಯಾವಂತರನ್ನಾಗಿಸುವ ಮೂಲಕ ಕೌಶಲ್ಯ ಆಧಾರಿತ ಹಾಗೂ ವಿಷಯಾಧಾರಿತ ಶಿಕ್ಷಣವನ್ನು ನೀಡುವ ಮೂಲಕ ಮುಂದಿನ ಯುವ ಪೀಳಿಗೆಯನ್ನು ಬಲಿಷ್ಠಗೊಳಿಸುವತ್ತ ಸರ್ಕಾರಗಳು ಚಿಂತನೆ ನಡೆಸಬೇಕಾಗಿದೆ. ಪ್ರಜೆಗಳಿಂದ ಪ್ರಜೆಗಳಿಗೋಸ್ಕರ ಇರುವ ಸಂವಿಧಾನ ಬದ್ಧತೆಯನ್ನು ಅರಿತು ಅಭಿವೃದ್ಧಿಯತ್ತ ಗಮನ ಹರಿಸಿ ಮುಂದಿನ ಯುವಕರ ಬಗ್ಗೆ ಆಳವಾದ ಯೋಜನೆಗಳನ್ನು ರೂಪಿಸಬೇಕಿದೆ.

**ಉಪ ಸಂಹಾರ**

ಜನಸಂಖ್ಯಾ ಸ್ಥಿತ್ಯಂತರ ಹಾಗೂ ವಯೋಮಾನ ಜನಸಂಖ್ಯೆಯಲ್ಲಿನ ಬದಲಾವಣೆ ಭಾರತದ ಅರ್ಥವ್ಯವಸ್ಥೆಯ ಮೇಲೆ ಗುರುತರವಾದ ಪ್ರಭಾವವನ್ನು ಬೀರಿದೆ. ಇದು ರಾಷ್ಟ್ರದ ಬೆಳವಣಿಗೆಗೆ ಕಾರಣವಾಗಿದೆ. ಬಹುತೇಕ ಕೃಷಿಯಾಧಾರಿತ ಆರ್ಥಿಕ ವ್ಯವಸ್ಥೆಯಿಂದ ಕೂಡಿದ ಭಾರತದ ಇಂದಿನ ನಗರೀಕರಣ ಹಾಗೂ ಕೈಗಾರಿಕೀಕರಣ ಅಂಶಗಳು ಕೂಡ ಅಭಿವೃದ್ಧಿಯ ಮೂಲಗಳಾಗಿವೆ. ಹೆಚ್ಚಳವಾಗುತ್ತಿರುವ ಯುವಕರನ್ನು ಹೆಚ್ಚು ಪರಿಣಾಮಕಾರಿಯಾಗಿ ಬಳಸಿಕೊಳ್ಳುವ ಮೂಲಕ ಮುಂದಿನ ಪೀಳಿಗೆಯನ್ನು ಸದೃಢರನ್ನಾಗಿಸಿ, ವಿಷಯಾಧಾರಿತ ಮತ್ತು ಕೌಶಲ್ಯಭರಿತ ಭಾರತ ನಿರ್ಮಾಣ ಮಾಡುವಲ್ಲಿ ಸರ್ಕಾರಗಳು ಪ್ರಮುಖಪಾತ್ರ ವಹಿಸಬೇಕಾದ ಪ್ರಸಂಗ ಎದ್ದು ಕಾಣುತ್ತಿದೆ. ದೇಶದ ಯುವಕರಿಗೆ ತಾಯಿನಾಡಿನಲ್ಲೇ ಉದ್ಯೋಗ ಒದಗಿಸಿಕೊಡುವ ಮೂಲಕ ದೇಶದ ಯುವಕರು ದೇಶದ ಏಳಿಗೆಗಾಗಿ ದುಡಿಯುವಂತೆ ಮಾಡುವ ಮಹತ್ತರ ಜವಾಬ್ದಾರಿ ದೇಶದ ಚುಕ್ಕಾಣಿ ಹಿಡಿದಿರುವ ಪ್ರಜಾಪ್ರಭುತ್ವ ವ್ಯವಸ್ಥೆಯ ಮೂಲ ಧ್ಯೇಯವಾಗಬೇಕು.

**ಡಾ॥ ಸುರೇಶ ಕೆ. ಪಿ.**
ಪೋಸ್ಟ್ ಡಾಕ್ಟೋರೋಲ್ ಫೆಲೋ – ಯು.ಜಿ.ಸಿ., ಅರ್ಥಶಾಸ್ತ್ರ ವಿಭಾಗ
ನ್ಯಾಷನಲ್ ಪದವಿ ಕಾಲೇಜು, ಬಸವನಗುಡಿ, ಬೆಂಗಳೂರು – ೫೬೦ ೦೦೪

## ಅಜ್ಞಾನ



ಕೆಂಡಗಳು
ಕಿಡಿ ಕಾರುತ್ತಿದ್ದವು
ಬೂದಿಯಾಗುವ
ಅರಿವಿಲ್ಲದೆ

**ಕೆ. ನಿರ್ಮಲ ಮರಡಿಹಳ್ಳಿ**

# ಮೌನ ಕೊಲೆಗಾರ






ಇದೀಗ ಬಂದ ಸುದ್ದಿ:

ಪಡುವಣದ ಕಡೆಯಿಂದ
ಹಾರಿಬಂತು ತೋಳ
ನಾಯಿ ಬೊಗಳಲೆ ಇಲ್ಲ
ಫಕೀರನೊಬ್ಬ ಕೈ ಕುಲುಕಿ, ಹೂಗುಚ್ಛ ನೀಡಿ
ತೋಳತಬ್ಬಿಕೊಂಡು
ಇಡೀ ದಿನ ಚರ್ಚೆ ಸಂವಾದ ಇತ್ಯಾದಿ

ಇಮೇಲ್ ಫೇಸ್‌ಬುಕ್ ವಾಟ್ಸಾಪ್‌ಗಳ
ಮೂರನೇ ಮಹಾಯುದ್ಧ
ಸ್ಪರ್ಧೆ ಯಾರಿಗೋ
ಕದ್ದಾಲಿಸದಂತೆ
ಹದ್ದಿನ ಕಣ್ಣಿನ ಸರ್ಪಗಾವಲು

ತೋಳದೌಡು ಮತ್ತೆ
ಬಂದಷ್ಟೇ ವೇಗವಾಗಿ
ಫಕೀರ ಬಾಯ್ಬಿಟ್ಟಾಗಚಕ್ ಬಕ್‌ಚಕ್
ಬಕ್‌ಚಕ್ ಬಕ್‌ಚಕ್ ಬಕ್

ಕೆಲವರು ದುಡಿದು ಬೆವರಿದ್ದಾರೆ
ಮತ್ತೆ ಕೆಲವರು ತಿಂದು
ರೆಕ್ಕೆ ಬಿಚ್ಚುತ್ತಿಲ್ಲ ನೆಲದ ನವಿಲು
ಸುಗ್ರೀವಾಜ್ಞೆ ಎದುರುಗಡೆ

ನೆತ್ತರು ಬರಿಸದೆ ಚೂರು
ಕೊಲ್ಲುವ ಕೊಲೆಗಾರ
ಯಾರಲಾ ? ಯಾರಲಾ ? ಯಾರಲಾ ?
ನೊಂದವರ ನಗುವಿನ ಹಾಡ
ನೀನೊಮ್ಮೆ ಕೇಳಲಾ ! ಕೇಳಲಾ !

ಬಾಯ್ಬಿಡುತ್ತಿದೆ ಭೂಮಿ
ನೀರು ನೀರು ನೀರು
ಊರಮುಂದಲ ಅರಳಿಮರ ಕೂಗಿದೆ
ಬುದ್ಧ ಬುದ್ಧ ಬುದ್ಧ ಬುದ್ಧ ಬುದ್ಧ

ಗ್ಲೋಬಲ್ ವಾರ್ಮಿಂಗ್ : ಗೆಲುವು ಯಾರಿಗೆ ?

ನಾಳೆಯ ಸೂರ್ಯ
ಪಡುವಣದ
ಮೊಬೈಲ್‌ಟವರಿಗೆ ಸಿಕ್ಕಿಬಿದ್ದಿದ್ದಾನೆ.

**ಎಸ್. ಕೆ. ಮಂಜುನಾಥ್**
ಸಂಶೋಧನಾ ವಿದ್ಯಾರ್ಥಿ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು.




# ಹನುಮನ ಹಲಿಗೆ

| | | |
|---|---|---|
| ಕೃತಿಯ ಹೆಸರು | : | **'ಹನುಮನ ಹಲಿಗೆ'** |
| ಲೇಖಕ | : | **ಪಿ. ಆರ್. ವೆಂಕಟೇಶ್** |
| ಪ್ರಕಾಶಕರು | : | **ಅರುಣ ಪ್ರಕಾಶನ,** ಬೆಂಗಳೂರು |
| ಪುಟಗಳು | : | 162 |
| ಬೆಲೆ | : | ರೂ. 130/- |




**ಭೂ**ಸ್ವಾಧೀನ ಕಾಯ್ದೆಯಡಿ ನಲುಗಿಹೋಗುವ ಕೃಷಿ ಕೂಲಿಕಾರರ ಬದುಕನ್ನು ಕುರಿತು ಈ ಕಾದಂಬರಿ ರೂಪುಗೊಂಡಿದೆ. ಈ ಕಾರಣಕ್ಕಾಗಿಯೇ ಈ ಕಾದಂಬರಿ ತುಂಬ ಗಮನಾರ್ಹವಾಗಿದೆ. ಸರ್ಕಾರವೇನೋ ಉದ್ಯಮಶೀಲತೆ ಬೆಳೆಯಬೇಕೆಂಬ ದೃಷ್ಟಿಯಿಂದ ಭೂಸ್ವಾಧೀನ ಕಾಯ್ದೆ ರೂಪಿಸಿದೆ. ಆದರೆ ಹಾಗೆ ಭೂಸ್ವಾಧೀನ ಮಾಡುವಾಗ ಅದೇ ಭೂಮಿಯನ್ನು ನಂಬಿ ಒಂದು ಸಂಸ್ಕೃತಿಯನ್ನೇ ಕಟ್ಟಿಕೊಂಡಿದ್ದ ಸಾಮಾಜಿಕ ಪರಿಸರದ ತವಕ ತಲ್ಲಣಗಳನ್ನು ಯಾವ ಕಾಯ್ದೆಯೂ ಗ್ರಹಿಸಲಾರದು! ರೈತ ಮತ್ತು ರೈತ ಕಾರ್ಮಿಕರು ಮಳೆಬೆಳೆಗೆ ಹೊಂದಿಕೊಂಡು ಒಂದು ಸಾಮುದಾಯಿಕ ಬಂಧುತ್ವದಲ್ಲಿ ಬದುಕುತ್ತಿರುತ್ತಾರೆ. ಆದರೆ ಅಲ್ಲೊಂದು ಕಾರ್ಖಾನೆ ಹಾಕಬೇಕೆಂದು ಆಲೋಚಿಸುವ ಬಂಡವಾಳಶಾಹಿ ಮನಸ್ಸು, ಆ ಒಂದು ಸಾಮಾಜಿಕ ಸ್ಥಿತಿಗತಿಗಳು ಹೇಗೆ ಏರುಪೇರಾಗಬಹುದು ಎಂಬುದನ್ನು ಆಲೋಚಿಸುವುದೇ ಇಲ್ಲ. ಹೀಗಾಗಿ ಅಲ್ಲಿಯ ಹನುಮನಂಥ ಮುಗ್ಧಜೀವಿಗಳು ಬಂಡವಾಳಶಾಹಿ ವ್ಯವಸ್ಥೆಯ ಕ್ರೌರ್ಯಕ್ಕೆ ಸಿಲುಕಿ ಒದ್ದಾಡುವಂತಾಗುತ್ತದೆ. ಹನುಮನ ಮಗಳು ಸಾವಿಂತ್ರ ಪುರುಷನ ರಾಕ್ಷಸ ಕುತಂತ್ರಕ್ಕೆ ಬಲಿಯಾಗಬೇಕಾಗುತ್ತದೆ. ಈ ಥರದ ದರ್ಪ-ದೌರ್ಜನ್ಯಗಳಿಗೆ ಒಳಗಾಗುವ ಒಂದು ಹಳ್ಳಿಯ ಬದುಕನ್ನು ಪಿ. ಆರ್. ವೆಂಕಟೇಶ್‌ರ 'ಹನುಮನ ಹಲಿಗೆ' - ಕಾದಂಬರಿ ನಮ್ಮ ಮುಂದೆ ಹೃದ್ಯವಾಗಿಯೇ ಬಿಚ್ಚಿಡುತ್ತಿದೆ. ಹೀಗಾಗಿ ಈ ಕಾದಂಬರಿಗೆ ಒಂದು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಆಯಾಮವೇ ಲಭಿಸಿದಂತಾಗಿದೆ.

ಚಂದ್ರಗಿರಿ ಅಂಥದೊಂದು ಹಳ್ಳಿ. ಆ ಹಳ್ಳಿಗೆ ವಕ್ಕರಿಸುವ ಕಾರ್ಖಾನೆಯೊಂದು ಅಲ್ಲಿಯ ಹನುಮನಂಥ ಮುಗ್ಧರ ಬದುಕನ್ನು ಛಿದ್ರಗೊಳಿಸುತ್ತಾ ಸಾಗುತ್ತದೆ. ಅಲ್ಲಿಯ ಪೊಲೀಸರೂ ಕೂಡ ಮಧ್ಯವರ್ತಿ ದಲ್ಲಾಳಿಯ ಥರವೇ ವರ್ತಿಸುತ್ತಾರೆ. ಹನುಮ, ಹನುಮನ ತಾಯಿ, ಹೆಂಡತಿ, ಮಗಳು ಎಲ್ಲರೂ ತಮ್ಮ ಮುಗ್ಧ ಮಾನವೀಯ ಸಂವೇದನೆಗಳಿಂದ ವರ್ತಿಸುತ್ತಾ, ತಮಗೇ ಗೊತ್ತಿಲ್ಲದ ಹಾಗೆ ಕ್ರೂರ ವ್ಯವಸ್ಥೆಯ ಸಂಚಿಗೆ ಬಲಿಯಾಗುತ್ತಾರೆ. ಲೇಖಕರು ಈ ಎಲ್ಲ ವಿವರಗಳನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸುತ್ತಾರೆ.

ಹಾಗೆಂದು ಈ ಕಾದಂಬರಿ ಹಾಸ್ಯ ಪ್ರಸಂಗಗಳನ್ನು ಕಳೆದುಕೊಂಡಿದೆ ಎನ್ನುವಂತೆಯೂ ಇಲ್ಲ. ಕರೀಮ, ಗೊರಕೆ ರಾಮ, ಸರೋಜ, ಚಿದಾನಂದ, ನರಸಿಂಗರಾಯರಂಥ ವ್ಯಕ್ತಿಗಳು ತಮ್ಮದೇ ಆದ ಮನುಷ್ಯ ಸಹಜ ಸರಸ-ವಿರಸಗಳಿಂದ ಓದುಗರ ಮನ ಗೆಲ್ಲುತ್ತಾರೆ. ಕೆಲವೊಂದು ಕಡೆ ಲೇಖಕರ ಭಾಷೆ ಕಾವ್ಯವಾಗುವುದೂ ಉಂಟು. ಆದರೆ ಕಾದಂಬರಿ ಕಾದಂಬರಿಯಾಗಿಯೇ ಉಳಿಯಬೇಕಲ್ಲವೇ! ಏಳನೆ ಅಧ್ಯಾಯದಲ್ಲಿ ಆ ರೀತಿಯ ಬರವಣಿಗೆಯನ್ನು ಓದುಗರು ಗಮನಿಸಬಹುದು. ಬೊಮ್ಮನಹಾಳು, ಚಂದ್ರಗಿರಿಯ ಹತ್ತಿ ಬೆಳೆಗೆ ಹೆಸರಾಗಿದ್ದ ಫಲವತ್ತಾದ ಭೂಮಿ ಕೈಗಾರಿಕಾ ಅಭಿವೃದ್ಧಿ ಮಂಡಳಿಗೆ ವಶವಾಗುವ ಮುನ್ನ ಶಾನುಭೋಗ ನರಸಿಂಗರಾಯ ಮತ್ತು ಹೊಲದ ಒಡೆಯ ದೊಡ್ಡನ ಗೌಡರನ್ನು ಹೇಗೆ ಯಾಮಾರಿಸಲಾಗುತ್ತದೆ ಎಂಬುದನ್ನು ಕೂಡ ಕಾದಂಬರಿಕಾರರು ಚಿತ್ರಿಸುತ್ತಾ ಹೋಗುತ್ತಾರೆ. ಹಳ್ಳಿಯ ಸಾಮಾನ್ಯ ಜನರ ರೊಟ್ಟಿ ಸುಡುವ ಚಿತ್ರಣವೂ ಕೂಡ ಓದುಗರ ಬಾಯಲ್ಲಿ ನೀರೂರಿಸುವಂತಿದೆ.

ನಮ್ಮ ಕಾಲದ ದಲಿತ ಸಂಘಗಳೂ ಹಾಗೂ ರೈತ ಸಂಘಗಳೂ ಕೂಡ ಹೋರಾಟಕ್ಕಿಳಿಯುವ ಚಿತ್ರಣಗಳೂ ಇಲ್ಲಿವೆ. ಆದರೆ ಹೋರಾಟವನ್ನು ಬಲಗೊಳಿಸಿ ಯಶಸ್ವಿಯಾಗಬೇಕಿದ್ದ ಜನರು ಹೇಗೆ ಕುತಂತ್ರಕ್ಕೆ ಬಲಿಯಾಗುತ್ತಾರೆ? ಎಂಬ ಅಂಶವೂ ಇಲ್ಲಿ ತುಂಬ ಚೆನ್ನಾಗಿ ಚಿತ್ರಣಗೊಂಡಿದೆ. ಬಂಡವಾಳಶಾಹಿ ಮನಸ್ಸು ತನ್ನ ಕೈಯಲ್ಲಿಯ ಹಣ ಚೆಲ್ಲಿ ಹೇಗೆ ಹೋರಾಟಗಳನ್ನು ಬಗ್ಗುಬಡಿಯುತ್ತದೆಂಬ ಚಿತ್ರಣವೂ ಇಲ್ಲಿದೆ. ಎಲ್ಲಕ್ಕಿಂತ ಮುಖ್ಯವಾಗಿ ಈ ಬಗೆಯ ತಂತ್ರ ಕುತಂತ್ರಗಳಿಂದ ನಲುಗಿಹೋಗುವ ಮುಗ್ಧ ಮಾನವೀಯ ಸಂಬಂಧಗಳನ್ನು ಲೇಖಕರು ತುಂಬ ಜಾಗರೂಕವಾಗಿ ಕಟ್ಟಿಕೊಟ್ಟಿದ್ದಾರೆ. ಇಂತಹ ಕಾರಣಕ್ಕಾಗಿಯೇ ಈ ಕಾದಂಬರಿ ನಮಗೆ ಮುಖ್ಯವಾಗುತ್ತದೆ. ಒಂದು ಜನಸಮುದಾಯದ ಜಾತಿ ಮತ್ತು ಧರ್ಮದ ಸಂಬಂಧಗಳೂ ಕೂಡ ಹೇಗೆ ವಿಮರ್ಶೆಗೊಳಪಡುತ್ತವೆ ಎಂಬುದನ್ನೂ ಕಾದಂಬರಿಕಾರರು ರಸವತ್ತಾಗಿಯೇ ಚಿತ್ರಿಸಿದ್ದಾರೆ. ಹೀಗಾಗಿ ಇದೊಂದು ಬಹಳ ಮಹತ್ವದ ಕಾದಂಬರಿಯೂ ಆಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸರ್ಕಾರಗಳ ಕೈಗಾರಿಕೆ, ಕಾರ್ಖಾನೆ ಕುರಿತಂಥ ಅಸ್ಪಷ್ಟ, ಅವೈಜ್ಞಾನಿಕ ನೀತಿಗಳು ಹೇಗೆ ಹಳ್ಳಿಗಳ ವಿನಾಶಕ್ಕೆ ಕಾರಣವಾಗುತ್ತವೆ ಎಂಬುದನ್ನು ಲೇಖಕರು ಒಂದು ಮಾನವೀಯ ಕಾಳಜಿಯ ಹಿನ್ನೆಲೆಯಲ್ಲಿ ಇಲ್ಲಿ ಚಿತ್ರಿಸಿದ್ದಾರೆ.

ಹೀಗೆ ಈ ಕಾದಂಬರಿಯ ಗುಣಾತ್ಮಕ ಅಂಶಗಳನ್ನು ಹೇಳುತ್ತಲೇ ಮುದ್ರಣ ದೋಷಗಳನ್ನು ಕೂಡ ಹೇಳಲೇಬೇಕಿದೆ. ಪುಟಕ್ಕೊಂದರಂತೆ ನೂರಾರು ಮುದ್ರಣ ದೋಷಗಳು ಓದುಗರಿಗೆ ತುಂಬ ಕಿರಿಕಿರಿ ಉಂಟುಮಾಡುತ್ತವೆ. ಲೇಖಕ ಪ್ರಕಾಶಕರಿಬ್ಬರೂ ಇತ್ತ ಕಡೆ ಗಮನಹರಿಸಿಲ್ಲವೆಂಬುದು ಸುಸ್ಪಷ್ಟ. ಇಲ್ಲಿ ಅತ್ಯುತ್ತಮ ಮುಖಪುಟವನ್ನೊಳಗೊಂಡ ಒಂದು ಒಳ್ಳೆಯ ಕಾದಂಬರಿ ಕೇವಲ ಮುದ್ರಣ ದೋಷಗಳಿಂದಾಗಿ ಓದುಗರನ್ನು ಕಳೆದುಕೊಳ್ಳಬಾರದು!


**ಹುರುಕಡ್ಲಿ ಶಿವಕುಮಾರ**
ಬಾಚಿಗೊಂಡನಹಳ್ಳಿ ಅಂಚೆ, ಹಗರಿಬೊಮ್ಮನಹಳ್ಳಿ ತಾಲೂಕು
ಬಳ್ಳಾರಿ ಜಿಲ್ಲೆ - ೫೮೩ ೨೧೨

# ಮಲ್ಲಿಗೆಯ ಘಮ

ನಾನೂ, ರಾಹುಲ್ ಅದೇ ತಾನೇ ಎಂಬಿಬಿಎಸ್ ಮುಗಿಸಿದವರು. ಜನಸೇವೆ ಮಾಡಬೇಕೆಂದೂ, ಜೊತೆಗೆ ಸ್ವಲ್ಪ ಅನುಭವ ಪಡೆಯಬೇಕೆಂದೂ, ನಗರದ ಕೊಳೆಗೇರಿ ಜನರಿಗೆ ಚಿಕಿತ್ಸೆ ಕೊಡಲೆಂದೇ ಸ್ಥಾಪಿತವಾಗಿದ್ದ ಅಲ್ಲೇ ಸಮೀಪದ ಚಿಕಿತ್ಸಾಲಯವೊಂದರಲ್ಲಿ ನಮ್ಮ ವೃತ್ತಿ ಜೀವನಕ್ಕೆ ನಾಂದಿ ಹಾಡಿದೆವು. ಸಂಬಳ ಕಮ್ಮಿ, ಆದರೂ ಕೆಲಸದಲ್ಲಿ ತೃಪ್ತಿ ಇತ್ತು. ಬಡವರಲ್ಲಿ ಅತೀ ಬಡವರಾದ ಅಲ್ಲಿಯ ಜನರಿಗೆ ಚಿಕಿತ್ಸೆ ಕೊಡುತ್ತಾ, ಅಲ್ಲೇ ಅವರ ಮಧ್ಯೆ ಓಡಾಡುತ್ತಾ, ನಮಗೆ ಅಲ್ಲಿ ಕಂಡುಬಂದಂಥ ಮಾನವೀಯತೆಯ ಕಥೆಗಳೆಷ್ಟೋ ನಮ್ಮ ಮನಸ್ಸನ್ನು ಆರ್ದ್ರಗೊಳಿಸುವಂಥವು. ಈ ಕಥೆ ಅವುಗಳಲ್ಲಿ ಒಂದು.

ಕೃಶಕಾಯದ, ಪೇಲವ ಮುಖದ, ಅನಾರೋಗ್ಯದ ಕಳೆಯ ಹುಡುಗಿ ಮಲ್ಲಿಗೆ. ಯಾವಾಗಲೂ ಮಾಸಲು ಚೂಡಿದಾರ-ಕಮೀಜ಼್ೇ ಅವಳ ಉಡುಗೆ. ೧೫ರ ಹರೆಯದ ಇವಳು, ಸುಮಾರು ೧೦-೧೧ ತಿಂಗಳ ಗಂಡುಕೂಸನ್ನು ತನ್ನ ಬೆನ್ನಿಗೆ ದುಪ್ಪಟ್ಟಾದಿಂದ ಕಟ್ಟಿಕೊಂಡೇ ಓಡಾಡುತ್ತಿದ್ದಳು. ಅವಳ ಹಿಂದೆ ಇನ್ನೂ ೪ ಮಕ್ಕಳು. ೪ರಿಂದ ೧೦ ವರ್ಷ ವಯಸ್ಸಿನವು. ತಂದೆ ಕುಡುಕ. ತಾಯಿಯೇ ಅವರಿವರ ಮನೆಗೆಲಸ ಮಾಡಿ ಮನೆ ನೋಡಿಕೊಳ್ಳುತ್ತಿದ್ದುದು. ಕೆಲ ತಿಂಗಳ ಹಿಂದೆ ಆಕೆಯೂ ತೀರಿಕೊಂಡ ಮೇಲೆ, ಮಲ್ಲಿಗೆಯೇ ಅವರೆಲ್ಲರ ತಾಯಿ. ಅಲ್ಲಿ-ಇಲ್ಲಿ ಕೂಲಿ ಕೆಲಸ ಮಾಡುತ್ತಾಳೆ. ಅರೆ ಹೊಟ್ಟೆ - ಅರೆ ಬಟ್ಟೆಯ ಜೀವನ, ಆದರೂ ತನ್ನ ಸೋದರ-ಸೋದರಿಯರನ್ನೆಲ್ಲಾ ನಿಭಾಯಿಸುತ್ತಿದ್ದಾಳೆ. ನನಗೆ ಮತ್ತು ರಾಹುಲನಿಗೆ ಅವಳಿಗೇನಾದರೂ ಕೊಡಬೇಕು ಅನ್ನಿಸಿತು. ಹೇಗೂ ಗೌರಿ ಹಬ್ಬ ಹತ್ತಿರದಲ್ಲೇ ಇತ್ತು. ಹೊಸ ಚೂಡಿದಾರವೊಂದನ್ನು ಕೊಂಡು ಅನಾಮಿಕವಾಗಿ ಅವಳಿಗೆ ರವಾನಿಸಿದೆವು. ಹಬ್ಬದ ದಿನ ಅವಳು ಅದನ್ನು ತೊಟ್ಟು ಸಡಗರದಿಂದ ಓಡಾಡುವುದನ್ನು ನೋಡಲು ಕಾದೆವು. ಆದರೆ, ಅವಳದ್ದು ಎಂದಿನ ಮಾಸಲು ಬಟ್ಟೆಯೇ! ತಡೆಯಲಾರದೆ ರಾಹುಲ್ ಕೇಳೇಬಿಟ್ಟ: "ಹೊಸ ಬಟ್ಟೆ ಏನಾಯಿತು?" ಎಂದು. ಹುಡುಗಿಯ ಮುಖದ ಮೇಲೆ ಮೊದಲು ಗೊಂದಲ, ನಂತರ ತನ್ನ ಪ್ರಶ್ನೆಗೆ ಉತ್ತರ ಕಂಡುಕೊಂಡ ಬೆಳಕು ಮಿನುಗಿತು. "ಓ, ನೀವಾ ಅಣ್ಣ, ಬಟ್ಟೆ ಕಳಿಸಿದ್ದು! ಪಾಪುಗೆ ಹಾಲಿರಲಿಲ್ಲ, ಅದಕ್ಕೆ ಅದನ್ನು ಮಾರಿಬಿಟ್ಟೆ. ಮತ್ತೆ ಎಲ್ಲರಿಗೂ ಇಲ್ಲದೆ, ನಾನೊಬ್ಬಳೇ ಹೊಸಬಟ್ಟೆ ಹೇಗೆ ತೊಡಲಿ?" ಬಹಳ ಸರಳವಾಗಿ ಕೇಳಿದಳು ಮಲ್ಲಿಗೆ. ಈ ಕುರಿತು ನಮಗೆ ಹೊಳೆಯದೆ ಹೋಗಿದ್ದಕ್ಕೆ ನಾನೂ, ರಾಹುಲ್ ತಲೆ ಚಚ್ಚಿಕೊಂಡೆವು; ಅಲ್ಲದೆ ನಮಗೆ ಬರುವ ಹಣದಲ್ಲಿ ಎಲ್ಲರಿಗೂ ಬಟ್ಟೆ ತರಲು ಸಾಧ್ಯವೂ ಇರಲಿಲ್ಲವೆನ್ನಿ.



ಮತ್ತೆ ಅವಳ ಬಗ್ಗೆ ಯೋಚಿಸಿದಾಗ ನೆನಪಾದದ್ದು, ನಾನು ಇಂಟರ್ನ್ ಆಗಿದ್ದಾಗ, ನನ್ನ ಚಿಕಿತ್ಸೆ ಮೆಚ್ಚಿದ್ದ, ಇತ್ತೀಚೆಗೆ ನನ್ನನ್ನು ಸಂಪರ್ಕಿಸಿದ್ದ ಚಿಕ್ಕಮಗಳೂರಿನ ಎಸ್ಟೇಟ್ ಮಾಲೀಕರು. ತಮ್ಮ ವಯಸ್ಸಾದ ತಾಯಿಯ ಜೊತೆಗಿರಲು ನನ್ನ ಪರಿಚಯದ ಯಾರಾದರೂ ಹೆಣ್ಣುಮಗಳನ್ನು ಗೊತ್ತುಮಾಡಿಕೊಡಲು ಕೇಳಿದ್ದರವರು. ಹಿಂದೆ ಇದ್ದವರು ೪ ತಿಂಗಳ ಮಟ್ಟಿಗೆ ಸಿಗುವುದಿಲ್ಲವೆಂದೂ, ಅಷ್ಟುಕಾಲ ಮಾತ್ರ ಯಾರಾದರೂ ಸಿಕ್ಕರೆ ನೋಡಿ ಎಂದಿದ್ದರು. ಅಂಥಾ ಕೆಲಸವೇನೂ ಇರಲಿಲ್ಲ, ವೃದ್ಧೆಗೆ ಜೊತೆ ಬೇಕಿತ್ತು, ಅಷ್ಟೆ. ಮಲ್ಲಿಗೆ ಏಕೆ ಅಲ್ಲಿಗೆ ಹೋಗಬಾರದು, ಸ್ವಲ್ಪ ಹಣವೂ ಸಿಗುತ್ತದೆ, ಜೊತೆಗೆ ಒಳ್ಳೆಯ ಊಟ-ಹವೆಯಿಂದ ಅವಳ ಆರೋಗ್ಯವೂ ಸುಧಾರಿಸಬಹುದು ಎಂದೆನಿಸಿತು. ರಾಹುಲನೂ ಒಪ್ಪಿಗೆ ಸೂಚಿಸಿದ. ಆದರೆ, ಮಲ್ಲಿಗೆ ತನ್ನ ಮನೆಯವರನ್ನು ಬಿಟ್ಟುಹೋಗಲು ಸುತರಾಂ ಒಪ್ಪಲಿಲ್ಲ. ಅವರೆಲ್ಲರನ್ನೂ ನೋಡಿಕೊಳ್ಳುವವರಾರು ಎಂಬ ಪ್ರಶ್ನೆಗೆ ನಾವೂ ತಲೆ ಬಿಸಿ ಮಾಡಿಕೊಂಡು ಯೋಚಿಸಿದೆವು. ಕೊನೆಗೆ, ಅಕ್ಕ ಪಕ್ಕದವರು ಈ ಜವಾಬ್ದಾರಿ ವಹಿಸಿಕೊಳ್ಳಲು ಒಪ್ಪಿದ ಮೇಲೆ ತನ್ನ ತಮ್ಮ ಕೃಷ್ಣನನ್ನು ಜೊತೆಗೆ ಕರೆದುಕೊಂಡು ಹೋಗಲು ಒಪ್ಪಿದರೆ ಮಾತ್ರ ತಾನು ಹೋಗುತ್ತೇನೆ ಅಂದಾಗ, ಎಸ್ಟೇಟ್ ಮಾಲೀಕರ ಸಮ್ಮತಿ ಪಡೆದು ಅವಳನ್ನು ಮಗುವಿನೊಂದಿಗೆ ಬೀಳ್ಕೊಟ್ಟೆವು. ಮಾಲೀಕರ ಕಾರಿನಲ್ಲಿ ಅವಳು ಹೊರಟಾಗ, ಅವಳಲ್ಲಿ ಅಂಥಾ ಸಂತೋಷವೇನೂ ಕಾಣಲಿಲ್ಲ.

ಎಸ್ಟೇಟ್‌ನಲ್ಲಿ ಮಲ್ಲಿಗೆ ಚೆನ್ನಾಗಿಯೇ ಹೊಂದಿಕೊಂಡಳು, ಮಾಲೀಕರ ವಿಶ್ವಾಸ ಗೆದ್ದುಕೊಂಡಳು. ಮಗು ಕೃಷ್ಣ ಎಲ್ಲರ ಕಣ್ಮಣಿಯಾದ. ಮಕ್ಕಳಿಲ್ಲದ ಮಾಲೀಕರು ಅವನನ್ನು ತುಂಬ ಹಚ್ಚಿಕೊಂಡರು, ಅವನನ್ನು ದತ್ತು ತೆಗೆದುಕೊಳ್ಳಬಯಸಿದರು. ಮಲ್ಲಿಗೆಗೆ ದ್ವಂದ್ವ ಕಾಡಿರಬೇಕು. ಒಂದೆಡೆ ತಾನು ಅತಿಯಾಗಿ ಪ್ರೀತಿಸುವ ತಮ್ಮನನ್ನು ಬಿಟ್ಟುಕೊಡಬೇಕು, ಇಲ್ಲದಿದ್ದರೆ, ಅವನಿಗೆ ಸಿಗುವ ಒಳ್ಳೆಯ ಬದುಕನ್ನು ನಿರಾಕರಿಸಿ ಕೊಳೆಗೇರಿ ಜೀವನಕ್ಕೆ ಅವನನ್ನು ಒಡ್ಡಬೇಕು. ಪ್ರೀತಿ ಗೆದ್ದಿತು, ತಮ್ಮನನ್ನು ಅವರಿಗೆ ಒಪ್ಪಿಸಿಬಿಟ್ಟಳು. ಭಾರವಾದ ಹೃದಯದಿಂದ ಒಬ್ಬಳೇ ಹಿಂದಿರುಗಿದಳು. ಇಲ್ಲಿ ಪರಿಸ್ಥಿತಿ ಸ್ವಲ್ಪ ಬದಲಾಗಿತ್ತು. ನಮ್ಮ ಹಾಗೂ ನೆರೆಯವರ ಪ್ರಯತ್ನದಿಂದ ತಂದೆ ಕುಡಿತ ಬಿಟ್ಟಿದ್ದ, ಮನೆಯ ಜವಾಬ್ದಾರಿ ಹೊತ್ತುಕೊಂಡಿದ್ದ, ಮಕ್ಕಳು ಶಾಲೆಗೆ ಸೇರಿದ್ದರು. ಮಲ್ಲಿಗೆಯ ಮುಖದ ಮೇಲೆ ಆರೋಗ್ಯದ ಕಳೆ ನಳನಳಿಸುತ್ತಿತ್ತು. ಹುಡುಗಿ ಹೊಸ ಉತ್ಸಾಹದಿಂದ ಬದುಕಿನ ಎಳೆಯನ್ನು ಕೈಗೆತ್ತಿಕೊಂಡಳು.

ಇದ್ದಕ್ಕಿದ್ದಂತೆ, ಚಿಕ್ಕಮಗಳೂರಿನಿಂದ ಸುದ್ದಿ ಬಂತು. ಕೃಷ್ಣ ಶ್ವಾಸಕೋಶದ ಸೋಂಕಿಗೆ ತುತ್ತಾಗಿದ್ದ; ಆಹಾರವನ್ನೂ ಸೇವಿಸದೆ ನಿತ್ರಾಣನಾಗಿದ್ದ. ಕೂಡಲೇ ಮಲ್ಲಿಗೆ ಅಲ್ಲಿಗೆ ಹೊರಟೇಬಿಟ್ಟಳು. ತಾನಿದ್ದರೆ ಅವನನ್ನು ಊಟಮಾಡಲು ಒಲಿಸಬಹುದು, ತನ್ನ ಮಾತು ಅವನು ಕೇಳುತ್ತಾನೆ ಎಂಬುದು ಅವಳ ನಂಬಿಕೆ. ಹಾಗೆಯೇ ಆಯಿತು. ಅವಳ ದಿನರಾತ್ರಿಯ ಶುಶ್ರೂಷೆಯಿಂದ ಮಗು ಗುಣಮುಖನಾದ. ಇನ್ನು ಭಯವಿಲ್ಲ ಎಂದರು ವೈದ್ಯರು. ಆ ದಿನ ನೆಮ್ಮದಿಯ ನಿಟ್ಟುಸಿರುಬಿಟ್ಟಳು ಮಲ್ಲಿಗೆ. ಸ್ವಲ್ಪ ತಲೆನೋವು ಮಲಗುತ್ತೇನೆ ಎಂದು ನಿದ್ರೆಗೆ ಜಾರಿದವಳು ಮತ್ತೆ ಮೇಲೇಳಲೇ ಇಲ್ಲ. ಮಗುವನ್ನು ಕಾಡಿದ್ದ ಕ್ರಿಮಿ ಮಲ್ಲಿಗೆಗೂ ಅಂಟಿತ್ತು, ಅವಳಲ್ಲಿ ಮೆದುಳು ಜ್ವರ ಉಂಟುಮಾಡಿತ್ತು, ಅವಳನ್ನು ಬಲಿ ತೆಗೆದುಕೊಂಡುಬಿಟ್ಟಿತು! ೧೫ರ ಹರೆಯದ ಮಲ್ಲಿಗೆ ಅರಳುವ ಮುನ್ನವೇ ಮಣ್ಣಾದಳು.

ಕೆಲ ವರ್ಷಗಳ ನಂತರ, ಅಲ್ಲಿ ಕೆಲಸ ಬಿಟ್ಟು ದಶಕಗಳೇ ಕಳೆದ ಬಳಿಕ, ಅಲ್ಲೇ ಹತ್ತಿರ ಏನೋ ಕೆಲಸಕ್ಕೆ ಹೋಗಿದ್ದಾಗ ಅವಳ ನೆನಪು ಬಂದು ಸ್ಮಶಾನಕ್ಕೆ ಹೋದೆ. ಅವಳ ಸಮಾಧಿ ಹುಡುಕಿ ಅಲ್ಲಿ ನಿಂತೆ; ಸ್ಥಳ ಶುಭ್ರವಾಗಿತ್ತು. ಮೋಡದ ಮರೆಯಿಂದ ಸೂರ್ಯನ ಬೆಳಕು ಚೆಲ್ಲಿ ನಾನು, ರಾಹುಲ್ ಸಮಾಧಿಯ ಮೇಲೆ ಕೆತ್ತಿಸಿದ 'ಮಲ್ಲಿಗೆ' ಅಕ್ಷರಗಳು ಕಂಗೊಳಿಸಿದವು, ಅಲ್ಲಿ ಬಿದ್ದಿದ್ದ ಮಲ್ಲಿಗೆ ಹೂ ಘಮಘಮಿಸಿತು.

*(ಸ್ಫೂರ್ತಿ : ಡಾ॥ ಎ. ಜೆ. ಕ್ರೊನಿನ್‌ರವರ 'ಅಡ್ವೆನ್‌ಚರ್ಸ್ ಇನ್ ಟು ವರ್ಲ್ಡ್')*

**ಡಾ॥ ಸುಧಾ ಕಾಮತ್**

ನಂ. ೧ಸಿ, ಹಿಮಗಿರಿ ಅಪಾರ್ಟ್‌ಮೆಂಟ್ಸ್, ೪ನೇ ಮುಖ್ಯರಸ್ತೆ

೧೫ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೫೫

